ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್ ಗ್ರಂಥಮಾಲೆ : ಮೂರು

# ಬರೆಹದಲ್ಲಿ ಬೇಂದ್ರೆಯವರ ಬದುಕು

ಡಾ। ಜಿ. ಕೃಷ್ಣಪ್ಪ



ಪ್ರಸಾರಾಂಗ
ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್
ಧಾರವಾಡ

ಮುದ್ರಣ ಕೊಡುಗೆ
**ವಿಶ್ವಾಸ್ ಪ್ರಿಂಟ್ಸ್**
ನಂ. ೨೩, ೩ನೇ ಅಡ್ಡರಸ್ತೆ, ನಂಜಾಂಬ ಅಗ್ರಹಾರ
ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮
ದೂರವಾಣಿ : ೦೮೦-೨೬೬೦೬೦೮೮

**BARAHADALLI BENDREYAVARA BADUKU**

(Bendre's life as expressed in his writings)

Author
**Dr. G. Krishnappa**
No. 22, SriGurudattaNilaya, 1st Cross
Netaji Nagara, Mattikere, Bangalore - 560 054
Ph : 2360 3402, Mob : 9972109209

Publisher
Director
Prasaranga
**Da. Ra. Bendre National Trust**
Dharwad - 580 008



First Edition : 2008

Pages : x + 158 Price : Rs. 100/-

Cover Page Design & Printing
Svan Printers
Chamarajpet, Bangalore - 18
Ph : 26742233

DTP
Friends Com-Tech
Chamarajpet, Bangalore-18
Phone : 22428454

*

# ಬಾರೊ ಸಾಧನಕೇರಿಗೆ

ಎಂ.ಎಂ. ಕಲಬುರ್ಗಿ
ಅಧ್ಯಕ್ಷರು

**ಮೋಡದಿ ಮುಸುಕಿದ ರಾತ್ರಿ ತೀರಿತು**
**ನೋಡಿರಿ ಮುಗಿಲಿನ ಕೆಂಪು ಏರಿತು**
**ಹೂಡಿರಿ ಹಡಗವ, ಕಡ[ಲು]ಕ್ಕೇರಿತು**
**ನೋಡಿ ಕಡಿಯಿರ್ರೈ, ಮೇಲೆ ನಡೆಯಿರ್ರೈ, ತೂತೂ ತೂತೂ**

ಬೇಂದ್ರೆಯವರ ಮೊದಲ ಕವನ 'ತುತ್ತೂರಿ'ಯ (೧೯೧೮) ಈ ಪದ್ಯ, ಒಂದು ಅರ್ಥಪೂರ್ಣ ರೂಪಕವಾಗಿದೆ. ಮೋಡ ಕವಿದಿದ್ದ ರಾತ್ರಿ ಹಿಂದೆ ಸರಿಯುತ್ತಲಿದೆ ; ಹಗಲಿಗಾಗಿ ಮುಗಿಲು ಕೆಂಪೇರುತ್ತಲಿದೆ ; ಉಕ್ಕೇರುತ್ತಲಿರುವ ಕಡಲಿನ ಮೇಲೆ ಹಡಗವನ್ನು ಹೂಡಿರಿ ; ಎಚ್ಚರದಿಂದ ಹುಟ್ಟು ಹಾಕಿ, ನೀರು ಕಡಿಯಿರಿ ; ಸಮುದ್ರದ ಮೇಲೆ ಮುನ್ನಡೆಯಿರಿ - ಎಂದು ತುತ್ತೂರಿಯನ್ನೂದಿ ಸಂಗಡಿಗರನ್ನು ಕೂಗಿ ಕರೆಯುವ ನಾವಿಕನ ಚಿತ್ರ ಈ ಪದ್ಯದಲ್ಲಿದೆ. ಇಲ್ಲಿನ ನಾವಿಕ(ನಾಯಕ) ಮತ್ತಾರೂ ಅಲ್ಲ, ಆಧುನಿಕ ಕನ್ನಡ ಸಾಹಿತ್ಯದ ಅರುಣೋದಯ ಕಾಲದಲ್ಲಿ ಕನ್ನಡಿಗರನ್ನು ಎಚ್ಚರಿಸುತ್ತಲಿರುವ ದ.ರಾ. ಬೇಂದ್ರೆ ಅವರೇ ಆಗಿದ್ದಾರೆ.

ಹೀಗೆ, ಬೇಂದ್ರೆಯವರು ಗೆಳೆಯರನ್ನು ಕೂಗಿ ಕರೆದ ಕಾಲಘಟ್ಟದಲ್ಲಿ, ನಮ್ಮ ಹಳೆಯ ಸಾಹಿತ್ಯ ಮಾದರಿಗಳು ಸವಕಲಾಗಿದ್ದವು, ಹೊಸ ಮಾದರಿ ಹುಟ್ಟಿರಲಿಲ್ಲ. ಹೀಗಾಗಿ ನವೋದಯ ಸಾಹಿತ್ಯದ ಮೂಲ ಮಾದರಿಗಳನ್ನು ಶೋಧಿಸಿ, ಪರಿಷ್ಕರಿಸಿ, ಕನ್ನಡಿಗರ ಕೈಗೆ ಕೊಡುವ ಕೆಲಸವನ್ನು ಇವರೇ ಮಾಡಬೇಕಾಗಿ ಬಂದಿತು.

ಈ ಸಾಹಿತ್ಯ ಮಾದರಿ ಬೇಂದ್ರೆಯವರಿಗೆ ಲಭ್ಯವಾದುದು, ಗೊಂದವಲೇಕರ ಮಹಾರಾಜ ಮೊದಲಾದವರ ಪ್ರಭಾವದಲ್ಲಿ ರೂಪಗೊಂಡ ಅವರ ಮನೆತನದ ಅವಧೂತ ಪರಂಪರೆಯಲ್ಲಿ. ಅವರು ಈ ಪರಂಪರೆಯ 'ಅವಧೂತಗೀತೆ' ಪ್ರಕಾರವನ್ನೇ 'ಭಾವಗೀತೆ'ಯನ್ನಾಗಿ ಪರಿಷ್ಕರಿಸಿಕೊಂಡಂತಿದೆ. ಈಗ ಅವರು, ಪಾರಮಾರ್ಥಕ್ಕೆ ಸೀಮಿತವಾಗಿದ್ದ ಆ ಪ್ರಕಾರವನ್ನು ಹೆಚ್ಚಿನದಾಗಿ ಸಾಂಸಾರಿಕ, ಸಾಮಾಜಿಕ, ನೈಸರ್ಗಿಕ ಇತ್ಯಾದಿಗಳಿಗೂ ವಿಸ್ತರಿಸಿಕೊಂಡರು. ಕನ್ನಡದಲ್ಲಿ ವಸ್ತುವಿನ ಹೊಸ ಹಾದಿಯನ್ನೂ ತೆರೆದರು.

ದೇಶಭಾಷಾಪ್ರೀತಿ ಅವಧೂತರ ಇನ್ನೊಂದು ಲಕ್ಷಣ. ಅವರು ತಮ್ಮ ತಮ್ಮ ರಾಜ್ಯಭಾಷೆಗಳಲ್ಲಿ, ಅದರಲ್ಲಿಯೂ ದೇಶೀಶೈಲಿಯಲ್ಲಿ ಸಾಹಿತ್ಯ ಸೃಷ್ಟಿಸುತ್ತ ಬಂದಿದ್ದಾರೆ. ಬೇಂದ್ರೆಯವರ ದೇಶೀಯ ಕನ್ನಡ ಬಳಕೆಗೆ ಕಾರಣ, ಪ್ರೇರಣೆ ಇಲ್ಲಿದೆ. ಇವರು "ಪಂಡಿತ-ಪಾಮರ, ಬಡವ-ಬಲ್ಲಿದ, ನಾಗರಿಕ-ನಾಡಾಡಿ ಎಂಬ ಭೇದವನ್ನಲ್ಲಗಳೆದು 'ಕನ್ನಡ ಜೀವಾಳ'ವು ಕನ್ನಡಿಗರಿಗಾಗಿ ಕನ್ನಡಿಸಲ್ಪಡಬೇಕಾಗಿದೆ" ಎನ್ನುತ್ತ, ಕನ್ನಡಿಗರ ಜೀವಾಳವಾಗಿರುವ ದೇಶೀಯನ್ನು ಬಳಸಿದರೇನೋ ನಿಜ. ಮಿಕ್ಕವರು ಮಾತ್ರ ಅಂದು ಈ ಮಾತಿಗೆ ಕಿವಿಗೊಡದೆ ಶಿಷ್ಟಭಾಷೆ ಬಳಸಿ 'ಅಸ್ಮಿತೆ'ಯನ್ನು ಅವಗಣಿಸಿದರೆಂದೇ ಹೇಳಬೇಕು. ಆದುದರಿಂದ ಬೇಂದ್ರೆಯವರೊಂದಿಗೆ ಮರೆಯಾದ ಆ ದೇಶೀಶೈಲಿಯ ಕಾವ್ಯಪದ್ಧತಿಯನ್ನೂ, ಅವರು ಆರಂಭಿಸಿದ್ದ ಆಲೋಚನೆಗಳನ್ನೂ ಹುಡುಕುವ ಮತ್ತು ಹುಟ್ಟಿಸುವ ಕಾರ್ಯವನ್ನು ಅವರ ಹೆಸರಿನಲ್ಲಿ ಅಸ್ತಿತ್ವಕ್ಕೆ ಬಂದಿರುವ "ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್" ಮಾಡಬೇಕಿದೆ. ಈ ಸಂಕಲ್ಪವನ್ನು ಸಾಕಾರಗೊಳಿಸುವುದಕ್ಕಾಗಿ ಪ್ರತಿಯೊಬ್ಬ ಕನ್ನಡಿಗನನ್ನೂ "ಬಾರೊ ಸಾಧನಕೇರಿಗೆ" ಎಂದು ಆತ್ಮೀಯವಾಗಿ ಸ್ವಾಗತಿಸುತ್ತೇನೆ.

೨೦೦೫-೦೬ನೆಯ ಇಸ್ವಿ, ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್ ತೀವ್ರ ಬದಲಾವಣೆಯನ್ನು ಕಂಡ ಸಂದರ್ಭ. ಅವುಗಳಲ್ಲಿ ಒಂದು ಮುಖ್ಯ ಘಟನೆಯಾಗಿದೆ, ಪ್ರಸರಾಂಗದ ಸ್ಥಾಪನೆ. ಈಗಾಗಲೇ ಎರಡು ಪುಸ್ತಕ (ಒಂದು - ಕನ್ನಡ, ಒಂದು - ಇಂಗ್ಲೀಷ್) ಪ್ರಕಟಿಸಿದ ಈ ಶಾಖೆ ಈಗ ಮೂರನೆಯ ಪುಸ್ತಕವಾಗಿ 'ಬರಹದಲ್ಲಿ ಬೇಂದ್ರೆ ಬದುಕು' ಕೃತಿಯನ್ನು ಪ್ರಕಟಿಸುತ್ತಲಿದೆ. ಪ್ರಸಾರಾಂಗಕ್ಕೆ ಶಕ್ತಿ-ಶಿಸ್ತುಗಳನ್ನು ತುಂಬುತ್ತಲಿರುವ ನಿರ್ದೇಶಕರಾದ ಡಾ। ಗಿರಡ್ಡಿ ಗೋವಿಂದರಾಜ ಅವರಿಗೆ, ನಮ್ಮ ಟ್ರಸ್ಟ್‌ನ ಶಿಷ್ಯವೇತನದಲ್ಲಿ ಸಿದ್ಧವಾದ ಈ ಪುಸ್ತಕದ ಕರ್ತೃವಾಗಿರುವ ಡಾ. ಜಿ. ಕೃಷ್ಣಪ್ಪ ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಈ ಕೃತಿಯನ್ನು ಉಚಿತವಾಗಿ ಬೆರಳಚ್ಚು ಮಾಡಿದ ಫ್ರೆಂಡ್ಸ್ ಕಾಮ್-ಟೆಕ್ ಮಾಲೀಕರಾದ ಶ್ರೀ ಬಿ.ಎಂ. ಸುರೇಶ್‌ಬಾಬು ಅವರಿಗೆ, ಉಚಿತವಾಗಿ ಮುದ್ರಿಸಿದ ವಿಶ್ವಾಸ್ ಪ್ರಿಂಟ್ಸ್‌ನ ಶ್ರೀ ವೆಂಕಟೇಶ್ ಅವರಿಗೆ, ಮುಖಪುಟವನ್ನು ವಿನ್ಯಾಸ ಮಾಡಿ ಉಚಿತವಾಗಿ ಮುದ್ರಿಸಿಕೊಟ್ಟ ಸ್ವ್ಯಾನ್ ಪ್ರಿಂಟ್ಸ್‌ನ ಶ್ರೀ ಕೃಷ್ಣಮೂರ್ತಿಯವರಿಗೆ ಈ ನೆರವು ಒದಗಿ ಬರುವಂತೆ ಮಾಡಿದ ಆತ್ಮೀಯರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರ ಔದಾರ್ಯಕ್ಕೆ ಧನ್ಯವಾದಗಳು.

■■

# ಅರಿಕೆ

ಡಾ। ಜಿ. ಕೃಷ್ಣಪ್ಪ

ಬೆಂಗಳೂರು

ಧಾರವಾಡದ ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ೨೦೦೩ರಲ್ಲಿ 'ಬೇಂದ್ರೆ ಫೆಲೋಶಿಪ್' ಅಸ್ತಿತ್ವಕ್ಕೆ ತರುವ ಮೂಲಕ ಅಭ್ಯಾಸಿಗಳಿಗೆ ವರಕವಿ ದ.ರಾ. ಬೇಂದ್ರೆ ಸಾಹಿತ್ಯದ ಅನುಸಂಧಾನಕ್ಕೆ ಸದವಕಾಶವನ್ನುಂಟುಮಾಡಿದೆ. ಈ ಯೋಜನೆಯ ಪ್ರಥಮ ವರ್ಷದ (೨೦೦೫) ಫೆಲೋಶಿಪ್‌ಗೆ ಆಯ್ಕೆಯಾದ ನಾನು, 'ಅಂಬಿಕಾತನಯದತ್ತರ ಬಾಲ್ಯಕಾಂಡ' ವಿಷಯವನ್ನು ಅಧ್ಯಯನಕ್ಕೆ ಆಯ್ದುಕೊಂಡೆ. ಬೇಂದ್ರೆಯವರು ತಮ್ಮ ವಿವಾಹದ ನಂತರದ ಆತ್ಮಕಥನವನ್ನು 'ಸಖೀಗೀತ'ದಲ್ಲಿ ನೀಡಿದಂತೆ, ಬಾಲ್ಯದಲ್ಲಿ ತನ್ನ ಅರಿವನ್ನು ವಿಸ್ತರಿಸಿದ ವಿವರಗಳನ್ನು 'ಮತ್ತೆ ಶ್ರಾವಣ ಬಂತು' ಕವನ ಸಂಕಲನದ ಭಾಗ-೧ರ 'ಬಾಲ್ಯಕಾಂಡ'ದಲ್ಲಿ ನೀಡಿದ್ದಾರೆ. ಇಲ್ಲಿ ಬೇಂದ್ರೆಯವರ ಸೃಜನಶೀಲ ಪ್ರತಿಭೆ ಆಕಾರಗೊಳ್ಳಲು ಬದಗಿಬಂದ ಸಾಮಗ್ರಿ ಮಡುಗಟ್ಟಿದೆ, ಅದರ ಪಾಕ ಕೆನೆಗಟ್ಟಿದೆ.

ವೈದಿಕರಾಗಿ ಹುಟ್ಟಿದ ಬೇಂದ್ರೆಯವರು ಯಾವುದೇ ಮಡಿ ಮೈಲಿಗೆಗೆ ಒಳಗಾಗದೆ ಕಾಮನಕಟ್ಟೆಯ ಎಲ್ಲ ಜಾತಿ-ಅಂತಸ್ತಿನ ಮಕ್ಕಳ ಜೊತೆ ಬೆಳೆದುದು, ತಿಪ್ಪೆಯಲ್ಲಿ ಮೂಡಿದ ಮಾವಿನ ಪೀಪಿ ಮೊದಲಾದವುಗಳ ನಾದ ಮಾಧುರ್ಯಕ್ಕೆ ಮೊರೆ ಹೋದದು, ಅವರ ಕಾವ್ಯದ ದೇಶೀಯತೆ ಮತ್ತು ನಾದಲೀಲೆಗಳಿಗೆ ಬುನಾದಿಯಾಗಿವೆ. ಇಲ್ಲಿಂದ ಮುಂದೆ ಅವರು ಅವಧೂತ ಮಾರ್ಗ, ರಾಷ್ಟ್ರೀಯ ಜೀವನ, ಸಾಹಿತ್ಯ ಸೃಷ್ಟಿಗಳಲ್ಲಿ ತೊಡಗಿಕೊಂಡು ಬೆಳೆದ ರೀತಿ ಅನನ್ಯವಾಗಿದೆ. ಈ ಒಟ್ಟು ಜೀವನ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಅವರ ಬರವಣಿಗೆಯಲ್ಲಿ ಅವತರಿಸಿದುದನ್ನು ಶೋಧಿಸಿ, ಅದಕ್ಕೆ ಇಲ್ಲಿ ಅಧ್ಯಯನದ ಶಿಸ್ತನ್ನು ನೀಡಲಾಗಿದೆ.

ನಾನು ಬೇಂದ್ರೆ ಅಧ್ಯಯನಕ್ಕೆ ತೊಡಗಲು ಕಾರಣರಾದ ಗುರು ಡಾ। ಕೆ. ಅನಂತರಾಮು ಅವರು ನನ್ನ ಬರವಣಿಗೆಯನ್ನು ಓದಿ - ಸೂಕ್ತ ಸಲಹೆಯನ್ನು ನೀಡಿ, 'ಬಾಲ್ಯಕಾಂಡ'ದ ಗದ್ಯಾನುವಾದವು ಮೂಲಕ್ಕೆ ಲೋಪವಿಲ್ಲದಂತೆ ಹೊರಹೊಮ್ಮುವ ಹಾಗೆ ಮಾಡಿದ್ದಾರೆ. ಅವರಿಗೆ ನಾನು ಕೃತಜ್ಞನಾಗಿದ್ದೇನೆ. 'ಬಾಲ್ಯಕಾಂಡ'ದ ಅಧ್ಯಯನ ಪ್ರಸಂಗದಲ್ಲಿ ನನ್ನನ್ನು ಪ್ರೋತ್ಸಾಹಿಸಿ ಮಾರ್ಗದರ್ಶನ ಮಾಡಿದ ಡಾ। ವಾಮನ ಬೇಂದ್ರೆ ಮತ್ತು ಪ್ರೊ। ಕೆ.ಎಸ್. ಶರ್ಮಾ ಅವರಿಗೆ ನಾನು ಋಣಿಯಾಗಿದ್ದೇನೆ. ಬೇಂದ್ರೆಕಾವ್ಯದ ಜಾನಪದ ಗತಿ ಗತ್ತುಗಳನ್ನು ತಿಳಿಸಿಕೊಟ್ಟ

ಪ್ರೊ। ಸುಧಾಕರ ಅವರನ್ನು ಯಾವಾಗಲೂ ನೆನೆಯುತ್ತೇನೆ. ಬೆಂಗಳೂರಿನವನಾದ ನಾನು ಬೇಂದ್ರೆಯವರ ಉತ್ತರ ಕರ್ನಾಟಕದ ಭಾಷೆಯ ಅರ್ಥವ್ಯಾಪ್ತಿ ತಿಳಿಯಲು ಅನೇಕರೊಂದಿಗೆ ಸಂವಾದಕ್ಕೆ ತೊಡಗಿದೆನು. ಆಗ ಮುಕ್ತಸಂವಾದಕ್ಕೆ ತೆರೆದುಕೊಂಡ ಧಾರವಾಡದ ಶ್ರೀ ಎಸ್.ಜಿ. ನಾಡಿಗೇರ, ಬೀದರದ ಪ್ರೊ। ವೀರೇಂದ್ರ ಸಿಂಪಿ, ಪ್ರೊ। ಸೂಗಯ್ಯ ಹಿರೇಮಠ, ಪ್ರೊ। ಸಿದ್ಧರಾಮಪ್ಪ ಮಾಸಿಮಡೆ ಅವರನ್ನು ನಾನು ಸದಾ ಸ್ಮರಿಸುತ್ತೇನೆ. ನಾನು ಸೇವೆ ಮಾಡಿದ ಕರ್ನಾಟಕ ಸರ್ಕಾರದ ಸಾರಿಗೆ ಇಲಾಖೆಯಲ್ಲಿ ನನ್ನ ಬೇಂದ್ರೆ ಕಾವ್ಯಾಧ್ಯಯನಕ್ಕೆ ಪ್ರೋತ್ಸಾಹ ನೀಡಿದ ಸಹೋದ್ಯೋಗಿ ಮಿತ್ರರಾದ ಶ್ರೀ ಬಿ.ವಿ. ನರಸಿಂಹರಾಜು, ಶ್ರೀ ವಿ. ಜಯರಾಮಪ್ಪ ಮತ್ತು ಶ್ರೀ ಕೆ. ಆನಂದಗೌಡ ಅವರ ಬೆಚ್ಚನೆಯ ಪ್ರೀತಿಗೆ ಋಣಿಯಾಗಿದ್ದೇನೆ.

ಮೂಲತಃ 'ಬಾಲ್ಯಕಾಂಡ' ಭಾಗವನ್ನು ಕೇಂದ್ರವಾಗಿಟ್ಟುಕೊಂಡು ಮುನ್ನಡೆದ ನನ್ನ ಅಧ್ಯಯನ, ಬೇಂದ್ರೆಯವರ ಇತರ ಬರಹಗಳನ್ನು ಹಾಗೂ ಅವರ ಸಮಕಾಲೀನರ ಲೇಖನಗಳನ್ನು ಬಳಸಿಕೊಳ್ಳುವಲ್ಲಿ ಅವರ ಬಾಲ್ಯಜೀವನದ ಜೊತೆ ಉತ್ತರಜೀವನವೂ ಸೇರಿಕೊಂಡಿತು. ಹೀಗಾಗಿ ನಾಡಿನ ಖ್ಯಾತ ಸಂಶೋಧಕರೂ ಮತ್ತು ಟ್ರಸ್ಟ್‌ನ ಅಧ್ಯಕ್ಷರೂ ಆದ ಡಾ। ಎಂ.ಎಂ. ಕಲಬುರ್ಗಿ ಅವರ ಸೂಚನೆಯಂತೆ ಈ ಕೃತಿಗೆ 'ಬರೆಹದಲ್ಲಿ ಬೇಂದ್ರೆಯವರ ಬದುಕು' ಎಂಬ ಶೀರ್ಷಿಕೆ ನೀಡಿದ್ದೇನೆ. ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್‌ನ ಪ್ರಸಾರಾಂಗದ ನಿರ್ದೇಶಕರೂ ಪ್ರಸಿದ್ಧ ವಿಮರ್ಶಕರೂ ಆದ ಡಾ। ಗಿರಡ್ಡಿ ಗೋವಿಂದರಾಜ ಅವರು ಈ ಕೃತಿ ಪ್ರಕಟನೆಗೆ ಆಸಕ್ತಿ ವಹಿಸಿದ್ದಾರೆ. ಈ ಇಬ್ಬರೂ ವಿದ್ವಾಂಸರಿಗೆ ಕೃತಜ್ಞನಾಗಿದ್ದೇನೆ.

ಈ ಕೃತಿಯ ಮುದ್ರಣವು ಉತ್ತಮವಾಗಿ ಬರಲು ಕಾರಣರಾದ ಪ್ರೊ। ಮಲ್ಲೇಪುರಂ ಜಿ. ವೆಂಕಟೇಶ್ ಅವರಿಗೆ, ಬೆಂಗಳೂರಿನ ಫ್ರೆಂಡ್ಸ್ ಕಾಮ್-ಟೆಕ್ ಮಾಲೀಕರಾದ ಶ್ರೀ ಬಿ.ಎಂ. ಸುರೇಶ್‌ಬಾಬು ಅವರಿಗೆ ಮತ್ತು ಮುದ್ರಕರಾದ ವಿಶ್ವಾಸ್ ಪ್ರಿಂಟ್ಸ್‌ನ ಶ್ರೀ ವೆಂಕಟೇಶ್ ಅವರಿಗೆ ಮುಖಪುಟ ವಿನ್ಯಾಸ ಮಾಡಿಕೊಟ್ಟು ಮುದ್ರಿಸಿಕೊಟ್ಟ ಸ್ವಾನ್ ಪ್ರಿಂಟ್ಸ್‌ನ ತರುಣಮಿತ್ರರಾದ ಶ್ರೀ ಕೃಷ್ಣಮೂರ್ತಿ ಅವರಿಗೆ ಆಭಾರಿಯಾಗಿದ್ದೇನೆ. ವರಕವಿ ದ.ರಾ. ಬೇಂದ್ರೆಯವರ ಕಾವ್ಯಾಭಿಮಾನಿಗಳು ಈ ಕೃತಿಯನ್ನು ಪ್ರೀತಿಯಿಂದ ಸ್ವೀಕರಿಸಿ ಆಶೀರ್ವದಿಸಬೇಕೆಂದು ಪ್ರಾರ್ಥಿಸುತ್ತೇನೆ.

■■

# ಪರಿವಿಡಿ

■■

# ಪೀಠಿಕೆ

ದ.ರಾ. ಬೇಂದ್ರೆಯವರು ಆಗಾಗ್ಗೆ ಬಾಳನ್ನು ಅವಲೋಕಿಸುತ್ತ, ಅದನ್ನು ಆತ್ಮಕಥನ ಶೈಲಿಯಲ್ಲಿ ಭಾವಗೀತಾತ್ಮಕವಾಗಿ ರಚಿಸಿದ್ದಾರೆ. ೧೯೩೭ರಲ್ಲಿ ಬರೆದ 'ಸಖೀಗೀತ', ೧೯೭೩ರಲ್ಲಿ ಸೃಷ್ಟಿಸಿದ 'ಮತ್ತೆ ಶ್ರಾವಣಾ ಬಂತು' ಕಾವ್ಯದ ಭಾಗ ೧ರ 'ಬಾಲ್ಯಕಾಂಡ'ಗಳು ಅವರ ಪಂಚೇಂದ್ರಿಯ ಅನುಭವಿಸಿದ ಸುಖ, ರುಚಿ, ಆಹ್ಲಾದ, ಒಗರುಗಳನ್ನೊಳಗೊಂಡ 'ಜೀವಸಂಚಿತದಲ್ಲಿ ವಾಸನೆಯುದರದ ಸಂಸ್ಕಾರ' ಚಿತ್ರಗಳಾಗಿವೆ. ಅವರು ತಮ್ಮ ವೈಯಕ್ತಿಕ ನೋವು ನಲಿವಿನ ಜೀವನವನ್ನು 'ಪಟ್ಟ ಪಾಡೆಲ್ಲವು ಹುಟ್ಟು ಹಾಡಾಗುತ। ಹೊಸದಾಗಿ ರಸವಾಗಿ ಹರಿಯುತಿವೆ' ಎಂಬ ಹೊಸ ಸವಿಯಲ್ಲಿ, ನವನವೀನ ಶೈಲಿಯಲ್ಲಿ ರಚಿಸಿದ್ದಾರೆ. 'ಕನ್ನಡಿಯಲ್ಲಿ ನೋಡಿದಾಗ ಎಲ್ಲರಿಗೂ ತಮ್ಮ ತಮ್ಮ ಮುಖವೆ ಕಾಣುತ್ತದೆ' ಎಂದು ತಮ್ಮನ್ನು ತಾವೇ ದೃಷ್ಟಿಸಿ ನೋಡಿದ್ದಾರೆ. ಕಂಡ ಅರೆಕೊರೆ, ತೇಜದ ಹೊಳಪು, ಆನಂದ, ಜೀವನೋತ್ಸಾಹಗಳನ್ನು ಕಾವ್ಯಭಾಷೆಯಲ್ಲಿ ಕುಂದಣಿಸಿದ್ದಾರೆ. ಈ ಬಗೆಯ ಆತ್ಮಗೀತಾತ್ಮಕವಾದ ಕಾವ್ಯ ಕನ್ನಡಕಾವ್ಯ ಪರಂಪರೆಯಲ್ಲಿ ಹೊಸತು.

ಕನ್ನಡ ಕಾವ್ಯ ಪರಂಪರೆಯಲ್ಲಿ ಗೋವಿಂದಪೈ, ಕುವೆಂಪು, ಕಡೆಂಗೋಡ್ಲು ಶಂಕರಭಟ್ಟ, ಮಾಸ್ತಿಯವರ ಖಂಡಕಾವ್ಯಗಳು ಪೌರಾಣಿಕ, ಐತಿಹಾಸಿಕ, ಚಾರಿತ್ರಿಕ ಘಟನೆಯನ್ನು ವಸ್ತುನಿಷ್ಠವಾಗಿ ಚಿತ್ರಿಸಿದರೆ, ಬೇಂದ್ರೆಯವರು ತಮ್ಮ ಜೀವನಗಾಥೆಯನ್ನೆ ಖಂಡಕಾವ್ಯಕ್ಕೆ ವಸ್ತುವಾಗಿಸಿಕೊಂಡು ಹೊಸಪರಂಪರೆಯನ್ನು ಸೃಷ್ಟಿಸಿದ್ದಾರೆ. ಬೇಂದ್ರೆಯವರ 'ಬಾಲ್ಯಕಾಂಡ' ಅವರ ಆತ್ಮವಿಮರ್ಶಾ ಕಾವ್ಯವಾಗಿ ಅಂದಿನ ಸಮಾಜ, ಸಾಹಿತ್ಯ, ಸಾಂಸ್ಕೃತಿಕ ಬದುಕನ್ನು ಶೋಧಕ್ಕೆ ಒಳಗುಮಾಡಿದೆ. ಅಂದಿನ ಧಾರವಾಡದ ಪರಿಸರ, ಜೀವನಶೈಲಿ, ಜನಪದ ಕಲೆ, ಹಬ್ಬಹರಿದಿನಗಳ ಬದುಕಿನ ಚಿತ್ರಣದಲ್ಲಿಯೇ ಕವಿಯ ನೋವು-ನಲಿವನ್ನು ಅಂತರ್ಜಲದಂತೆ ದಾಖಲಿಸಿದೆ. ಗಾಢ ಅನುಭವದಲ್ಲಿರುವ ಸಾಂಸ್ಕೃತಿಕ ಬೇರುಗಳನ್ನು ಹುಡುಕಾಡಿದೆ. 'ಇಳಿವಯಕೆ, ನೆನೆಸಿದೆ ಎಳೆಯತನ' ಎಂದು ತಮ್ಮ ೭೭ನೆಯ ವರ್ಷದಲ್ಲಿ

‘ಬಾಲ್ಯಕಾಂಡ’ವನ್ನು ರಚಿಸಿದ ಬೇಂದ್ರೆಯವರದು, ಒಂದು ಬಗೆಯಲ್ಲಿ ಜೀವನವನ್ನು ಮೆಲುಕು ಹಾಕುವಿಕೆ. ಆತುರಾತುರವಾಗಿ ತಿಂದ ಆಹಾರವನ್ನು ಗೋವು ಮತ್ತೆ ಬಾಯಿಗೆ ತಂದುಕೊಂಡು, ನರುಮಿ ನುಣುಪಾಗಿಸಿ ಜೀರ್ಣಿಸಿಕೊಳ್ಳುವ ರೀತಿ.

‘ಬಾಲ್ಯಕಾಂಡ’ದಲ್ಲಿ ಬೇಂದ್ರೆಯವರು ತಮ್ಮ ವ್ಯಕ್ತಿಗತ ಅನುಭವ, ಕುತೂಹಲ, ಆನಂದದ ಅರಿವುಗಳನ್ನು ಹೇಳುತ್ತಲೇ, ಆದರಿಂದ ನಿರಸನಗೊಳ್ಳುತ್ತ ಆ ಅನುಭವಗಳನ್ನು ಸಮಷ್ಟಿಯ ನೆಲೆಗೆ ಕೊಂಡೊಯ್ಯುವಲ್ಲಿ ಯಶಸ್ವಿಯಾಗಿದ್ದಾರೆ. ಅವರು ಕಂಡ ಸಮಾಜದ ವೈರುಧ್ಯಗಳು, ಎದುರಿಸಿದ ಸಮಸ್ಯೆಗಳು ವೈಯಕ್ತಿಕ ನೆಲೆಯಲ್ಲಿಯೇ ನಿಲ್ಲದೆ ಮನುಕುಲದ ಕಗ್ಗಂಟಾಗಿ ಸಾರ್ವತ್ರಿಕತೆಯನ್ನು ಗಳಿಸಿಕೊಂಡಿವೆ. ಅವು ಬತ್ತದ ತೊರೆಯಂತೆ ಜೀವನಮೌಲ್ಯಗಳ ಆಗರವಾಗಿವೆ. ‘ಬಾಲ್ಯಕಾಂಡ’ ಅವರ ಸಾಮಾಜಿಕ, ನೈತಿಕ ಮತ್ತು ಆಧ್ಯಾತ್ಮಿಕ ದೃಷ್ಟಿಗೆ ಸಂವಾದಿಯಾಗಿ ಸತ್ಯದ ಆವಿಷ್ಕಾರದತ್ತ ಸಾಗಿದ ಆತ್ಮಕಥನವಾಗಿದೆ. ಬೇಂದ್ರೆಯವರು ತಮ್ಮ ಬದುಕಿನ ಘಟನಾವಳಿಗಳ ದಾಖಲಾತಿಗೆ ಮನಸ್ಸು ಕೊಡದೆ, ತಾವು ಕಂಡುಂಡ ಸತ್ಯಘಟನೆಗಳ ಹಿನ್ನಲೆಯಲ್ಲಿ ಜೀವನಮೌಲ್ಯಗಳನ್ನು ಶೋಧಿಸುತ್ತ ಅದನ್ನು ಕಾವ್ಯಾನುಭವವಾಗಿಸಿದ್ದಾರೆ.

‘ಬಾಲ್ಯಕಾಂಡ’ದ ಅಧ್ಯಯನದ ಹಿಂದೆ ನಮ್ಮ ಭಾಷೆಯ ಪ್ರಮುಖಕವಿಯ ಬಾಲ್ಯದ ಅರಿವಿನ ಹುಡುಕಾಟದ ಜೊತೆಗೆ, ಕಾವ್ಯದ ತಾತ್ವಿಕ ಚಿಂತನೆಯ ಶೋಧವಿದೆ. ಬೇಂದ್ರೆಯವರ ಬಾಲ್ಯವನ್ನು ರೂಪಿಸಿ, ಕವಿಯಾಗಿಸಿದ ಕಾಮನಕಟ್ಟೆಯ ಸಾಂಸ್ಕೃತಿಕ ಅಧ್ಯಯನವಿದೆ. ‘ಸಖೀಗೀತ’ ವಿವಾಹ ನಂತರದ ಸಾಧನಕೇರಿಯ ಸಿಂಹಾವಲೋಕನವಾದರೆ, ‘ಬಾಲ್ಯಕಾಂಡ’ ಕಾಮನಕಟ್ಟೆಯ ಸಿಂಹಾವಲೋಕನವಾಗಿದೆ. ‘ಬಾಲ್ಯಕಾಂಡ’ದಲ್ಲಿ ಬೇಂದ್ರೆಯವರಲ್ಲಿ ಕಾವ್ಯಪ್ರವೇಶವಾದುದರ ಬೆಳಗುಜಾವದ ಸುಮಧುರ ಸಕ್ಕರೆ ನಿದ್ದೆಯಿದೆ. ಅದನ್ನು ಚುಕ್ಕು ಬಡಿದು ಪೋಷಿಸಿದ ಕೌಟುಂಬಿಕ ಹಾಗೂ ಸಮುದಾಯದ ಪರಿಸರವಿದೆ. ‘ಬೀದಿ ಮಕ್ಕಳು ಬೆಳೆದೊ, ಕೋಣೆ ಮಕ್ಕಳು ಕೊಳೆತೊ’ ಎಂಬ ನಾಣ್ಣುಡಿಯಂತೆ ಬಡವರ ಮಕ್ಕಳು ಸಮುದಾಯದ ಭಾಗವಾಗಿ ಮುಕ್ತವಾಗಿ ಆಡುತ್ತ ಬೆಳೆದ ಕೌತುಕವಿದೆ. ಆ ಆಟ ಅವರನ್ನು ಚತುರಮತಿಯವರನ್ನಾಗಿಸಿ ರೂಪಿಸಿದ ವಿವರವಿದೆ. ಆ ಆಡಿದ ಆಟ ತನ್ನದೇ ಎನ್ನುವಷ್ಟರಲ್ಲಿ ಕುಶಲಕಲೆಯಾದುದರ ಮಾಟವಿದೆ. ಧಾರವಾಡದ ಜನಪದದೊಡನೆ ಒಂದಾಗಿ ತನ್ನ ಬುದ್ಧಿಶಕ್ತಿಯನ್ನು ಚುರುಕುಗೊಳಿಸಿಕೊಂಡ ಉಲ್ಲಾಸವಿದೆ. ಎಚ್ಚರಿಕೆಯ ಆಟದಲ್ಲಿ ಅಪ್ರಯತ್ನವಾಗಿಯೇ ಹಲವಾರು ಸೂಕ್ಷ್ಮೇಂದ್ರಿಯಗಳು ವಿಕಾಸಗೊಂಡ ಅನುಭವವಿದೆ. ಧಾರವಾಡದ ಜಾನಪದ ಸಂವೇದನೆಯ ಸ್ಪರ್ಶದಲ್ಲಿ ಮಿಂದ ಸ್ವತಂತ್ರ ಸ್ವಚ್ಛಂದ ಬಾಲಕ ತನಗರಿವಿಲ್ಲದಂತೆ ಕಾವ್ಯಸಂವೇದನೆಗೆ ಒಳಗಾದ ಆಟವಿದೆ. ಆಟದ ಪ್ರತಿಮೆಗಳಲ್ಲಿಯೇ ಕಾವ್ಯ ವಿಕಸನಗೊಂಡ ಪರಿಮಳವಿದೆ.

‘ಬಾಲ್ಯಕಾಂಡ’ವು ಒಂದು ಖಂಡಕಾವ್ಯವಾಗಿದ್ದು, ಬಾಲ್ಯದ ವಿರಾಟ್ ಸ್ವರೂಪವನ್ನು ದರ್ಶಿಸುವಲ್ಲಿ ಯಶಸ್ವಿಯಾಗಿದೆ. ಅದು ಚೌಪದಿಯಲ್ಲಿದ್ದು ಹತ್ತೊಂಬತ್ತು ಖಂಡಿಕೆಗಳನ್ನು

ಹೊಂದಿದೆ. ಒಂದೊಂದು ಖಂಡಿಕೆಯೂ ಆರಾರು ನುಡಿಗಳಿಂದ ಮರ್ಯಾದಿತವಾಗಿದೆ. ಪ್ರತಿಯೊಂದು ಖಂಡಿಕೆಯೂ ಒಂದೊಂದು ವಿಶಿಷ್ಟಾನುಭವವನ್ನು ತನ್ನ ಗರ್ಭದಲ್ಲಿ ಅಡಗಿಸಿಕೊಂಡಿದೆ. ಹತ್ತೊಂಬತ್ತು ಖಂಡಿಕೆಗಳಲ್ಲಿ ೧ನೆಯ ಖಂಡಿಕೆ ಕಾವ್ಯದ ಪೀಠಿಕೆಯಾಗಿದೆ. ೨, ೩ ಖಂಡಿಕೆಗಳು ಕೌಟುಂಬಿಕ ವಿವರಗಳನ್ನು ಹೊಂದಿವೆ. ೫, ೬, ೭ ಖಂಡಿಕೆಗಳು ಬಾಲ್ಯದ ವಿಕಾಸವನ್ನು ಆಟಗಳಲ್ಲಿ ಚಿತ್ರಿಸಿವೆ. ೮, ೯, ೧೦, ೧೧ ಖಂಡಿಕೆಗಳು ಧಾರವಾಡದ ಜಾನಪದ ಪರಿಸರವನ್ನು ವರ್ಣಿಸಿವೆ. ಖಂಡಿಕೆ ೧೨ರಿಂದ ೧೭ ಕಾವ್ಯ ಪ್ರೇರಣಾಶಕ್ತಿಯನ್ನು, ಕಾವ್ಯರಚನೆಯ ವಿಕಾಸಪಥವನ್ನು, ಜೀವನದ ಸಂಘರ್ಷವನ್ನು ದಾಖಲಿಸಿವೆ. ಖಂಡಿಕೆ ೧೮ 'ತಾಯಿಯ ಕಳಕೊಂಡ ಪ್ರೌಢ'ನಾದ ಭಾವವಾಗಿ, ಬಾಲ್ಯದ ಮುಕ್ತಾಯವಾಗಿದೆ. ಖಂಡಿಕೆ ೧೯ ಉಪಸಂಹಾರವಾಗಿದೆ. ಹೀಗೆ 'ಬಾಲ್ಯಕಾಂಡ' ಒಂದು ಯಶಸ್ವಿ ಆತ್ಮಗೀತಾತ್ಮಕ ಖಂಡಕಾವ್ಯವಾಗಿದೆ. ಅದು ಅವರ ಇಪ್ಪತ್ತೆಂಟನೇ ವಯಸ್ಸಿನ ವರೆಗಿನ ಬಾಲ್ಯ ಮತ್ತು ಯೌವನದ ಜೀವನ ಗಾಥೆ. '೧೯೧೯ರ ಪೂರ್ವದ ಜೀವನವನ್ನು ೧೯೫೦ರ ಎಡಬಲದಿಂದ ನೆನೆಸುತ್ತ, ೧೯೬೩-೬೪ರಲ್ಲಿಯೂ ಮೂಡಿಸುತ್ತ, ೧೯೭೨ರಲ್ಲಿ ಕೆಲವು ಕಡೆ ತಿದ್ದಿ ಇಳಿವಯಕೆ ನೆನೆಸಿದ ಎಳೆಯತನದ 'ಬಾಲ್ಯಕಾಂಡ' ಈಗ ೧೯೭೩ರಲ್ಲಿ ಪ್ರಕಟವಾಗುತ್ತಿದೆ' ಎಂದು ವಾಮನ ಬೇಂದ್ರೆಯವರು ಈ ಖಂಡಕಾವ್ಯ ಕವಿಯಲ್ಲಿ ರೂಪುಗೊಂಡು ಬೆಳೆದ ಕಾಲದ ವಿವರ ನೀಡಿದ್ದಾರೆ.

**ಛಂದಸ್ಸು**

ಬೇಂದ್ರೆಯವರ ಈ ಕೃತಿಯು ನಾಲ್ಕು ಪಾದಗಳಿಂದ ಕೂಡಿದ ಚತುಷ್ಪದಿಯಂತೆ ಸಾಗುತ್ತದೆ. ಪ್ರತಿಯೊಂದು ಚತುಷ್ಪದಿಯಲ್ಲಿಯೂ ೧-೩ ಮತ್ತು ೨-೪ನೆಯ ಪಾದಗಳು ಪರಸ್ಪರ ಸಮನಾಗಿವೆ. ೧-೩ನೆಯ ಪಾದಗಳಲ್ಲಿ ೫ ಮಾತ್ರೆಯ ನಾಲ್ಕುಗಣಗಳಿವೆ. ೨-೪ನೆಯ ಪಾದಗಳಲ್ಲಿ ೫ ಮಾತ್ರೆಯ ಮೂರುಗಣಗಳಿದ್ದು ಕೊನೆಗೊಂದು ಲಘು ಪ್ರತ್ಯೇಕವಾಗಿ ಉಳಿಯುತ್ತದೆ. ಈ ಸ್ವರೂಪವನ್ನು ಈ ಕೆಳಕಂಡಂತೆ ಗುರುತಿಸಬಹುದು.

೫ + ೫ + ೫ + ೫
೫ + ೫ + ೫ + ೧ ಲಘು
೫ + ೫ + ೫ + ೫
೫ + ೫ + ೫ + ೧ ಲಘು

**ಈ ಶತಕ ಬಂದಿಲ್ಲ, ಆ ಶತಕ ಮುಗಿದಿಲ್ಲ**
**ಕೊನೆ ದಶಕ ಕೊನೆಕೊನೆಗೆ ಅದೆ ಬಂದಿದೆ.**
**ವಿಜ್ಞಾನಿಗಳ ದೃಷ್ಟಿ ಸೃಷ್ಟಿಗರ್ಭದೊಳಾಗ**
**ರೇಡಿಯಮ್ಮಿನ ಕಿರಣವನು ಕಂಡಿದೆ.**

ಮೇಲಿನ ಪಾದಗಳಲ್ಲಿ ಈ ಲಕ್ಷಣ ಖಚಿತವಾಗಿ ತೋರಿಕೊಂಡಿದೆ. ಆದರೆ ನಾಲ್ಕು ಮಾತ್ರೆಗಳ ಗಣಗಳು ಇರುವೆಡೆಗಳಲ್ಲಿ ಅಂತ್ಯದ ಲಘುವು ವಾಚನ ಮಾಡುವಾಗ ಗುರುವಾಗುತ್ತದೆ. ಹೀಗಾಗಿ ಎಲ್ಲವೂ ಪಂಚಮಾತ್ರಾ ಗಣಗಳಾಗುತ್ತವೆ.

೨ ಮತ್ತು ೪ನೆಯ ಪಾದಗಳ ಅಂತ್ಯದಲ್ಲಿ ಲಘುವೊಂದು ಪ್ರತ್ಯೇಕವಾಗಿ ಉಳಿದುಕೊಳ್ಳುತ್ತದೆ. ಅದು ಆ ಪಾದಕ್ಕೆ ಅಚ್ಚುಕಟ್ಟಾದ ಮುಕ್ತಾಯವನ್ನು ದೊರಕಿಸಿಕೊಡುತ್ತದೆ. ಹೀಗಾಗಿ ಅದನ್ನು 'ಮುಡಿ' ಎಂದು ಪರಿಗಣಿಸಿ ಪಂಚಮಾತ್ರಾಗಣದ ಬೆಲೆಯನ್ನೇ ಕೊಡಬೇಕಾಗಿದೆ.

ಇದು ಈ ಕಾವ್ಯದ ಛಂದಸ್ಸಿನ ಸ್ಥೂಲರೂಪವಾಗಿದೆ.

***

**ಬೇ**ಂದ್ರೆಯವರಿಗೆ ತಾನು ಏನೇ ರಚಿಸಿದರೂ ಅದನ್ನು ತನ್ನ ಪತ್ನಿಗೆ ಓದಿ ಹೇಳಿ ಒಪ್ಪಿಗೆ ಪಡೆಯುವ ಮನಸು. ಈ ಕಾವ್ಯ ಪ್ರಕಟಗೊಳ್ಳುವ ವೇಳೆಗೆ ಆಕೆ ಮರಣಹೊಂದಿದ್ದಳು. ಆದರೂ ಕವಿಗೆ ಆಕೆ ಜೀವಂತವಾಗಿರುವಳು, ತನ್ನ ಕಾವ್ಯದ ಸಹೃದಯ ಕೇಳುಗಳಾಗಿ ತನ್ನ ಜೊತೆ ಸಂವಾದಿಸುವಳು ಎಂಬ ಭಾವ. ಹಾಗಾಗಿ ಅದು ಅವರ ಅಮರಪ್ರೇಮದ ಸಂಕೇತ. ಸಖಿಗೆ ತನ್ನ ಬಾಲ್ಯದ ಕಥೆಯನ್ನು ಹೇಳುವ ಮನಸ್ಸಿನಲ್ಲಿಯೇ ಅವರ ಆಂತರಿಕ ನೋವು ನಲಿವನ್ನು ಆಲಿಸಿ ಕೇಳುವ ಸಹೃದಯರನ್ನು ಹುಡುಕುವ ಭಾವವಿದೆ. ತುಂಬು ಜೀವನ ಅವರಿಗೆ ಶಾಂತಿ ನೆಮ್ಮದಿಯನ್ನು ತಂದಿದೆ. ಬಡತನದ ನೋವಿನ ಅಸಹಾಯಕತೆಯ ಬದುಕು ವ್ಯಥೆಯಿಂದ ಸಾಗಿ ಬಂದಿದ್ದರೂ, ನೆಲದ ನೀರು ಕುಡಿದು ಬಿಸಿಲುಗಾಳಿಗೆ ಬೆಳೆದ ತರುವಿನಿಂದ ಹೂವು ರೂಪುಗೊಂಡ ಹಾಗೆ ಕವಿಗೆ ಬಾಳು ಹೂವಾಗಿದೆ, ಕಂಪಿನ ನೆಲೆಯಾಗಿದೆ.

'ಮುದ್ದೆ ಮೂರ್ತತೆಗೊಂಡು ಕೂಸಾಗಿದೆ' ಎಂಬ ನುಡಿಯಲ್ಲಿ ಮುದ್ದುತನವೇ, ಮುದ್ದು ಭಾವವೇ, ಅಮೂರ್ತ ಚಿಂತನೆಯೆ ಮೂರ್ತರೂಪ ಪಡೆದು ಕೂಸಾಗಿದೆ ಎಂದು ಕಲಾತ್ಮಕವಾಗಿ ಬೇಂದ್ರೆ ಬಣ್ಣಿಸಿದ್ದಾರೆ. ಅದು ಅಮೂರ್ತ ಭಾವಕ್ಕೆ ರೂಪಕೊಡುವ ಕಲೆಯ ಸಂಕೇತವಾಗಿದೆ. ಅವರು ತಮ್ಮ ಬಾಲ್ಯದ ಘಟನೆಗಳನ್ನು ಕಾವ್ಯಮಾಧ್ಯಮದಲ್ಲಿ ಶೋಧಿಸುತ್ತ, ಸಖಿಯೊಂದಿಗೆ ತಾತ್ವಿಕ ಸಂವಾದ ಹೂಡಿದ್ದಾರೆ. ಆ ಸಖಿ 'ಹ್ಞೂ' ಗುಟ್ಟುವವಳಾಗಿ, ಜೀವಂತವಾಗಿಲ್ಲದ್ದು ತಾತ್ವಿಕ ಚಿಂತನೆಯ ನಿರಂತರ ಸತ್ಯದ ಪ್ರತಿಪಾದನೆಗೆ ಸಾಕ್ಷಿಭೂತವಾದ ಮನಸ್ಸಿನೊಡನೆ ನಡೆಸಿದ ಸಂವಾದದಂತಿದೆ. ಅದು ಅವರ ಶಾಶ್ವತ ಚಿಂತನಾ ನೆಲೆಯ ದರ್ಶನವಾಗಿದೆ.

ಸಮಾಜ ಚಿಂತಕ ಬೊಗಾರ್ಡಸ್ ಸಾಮಾಜಿಕ ಆಲೋಚನೆ ರೂಪುಗೊಳ್ಳುವ ಕಾಲಮಾನದ ಪರಿಸ್ಥಿತಿಯನ್ನು "Social thought usually finds its initial expression during social crisis. When 'Prosperity' reigns and people are in general satisfied, new social thought is at ebb-tide. But when social conditions are marked by gross injustice or when social changes come

rapidly due to inventions, wars, or other basic disturbances, then thinking about social life and problems is highly stimulated and new ideas or system of ideas, that is ideologies are orginated." ಎಂದು ಹೇಳಿದ್ದಾರೆ. ಅಂತಹದೇ ಪರಿಸ್ಥಿತಿ ಬೇಂದ್ರೆಯವರು ಹುಟ್ಟಿದಾಗ ಈ ದೇಶದಲ್ಲಿತ್ತು. ಅದು 'ಶತಮಾನ ಹೊರಳುವ ಕಾಲ' ಅಂದರೆ ಪ್ರಪಂಚದಲ್ಲಿ ವಿಜ್ಞಾನದ ಅದ್ಭುತ ಅನ್ವೇಷಣೆಗಳಾಗುತ್ತಿದ್ದ ಪರಿವರ್ತನಶೀಲ ಸಂದರ್ಭ. ಅದನ್ನು ಬೇಂದ್ರೆಯವರು 'ವಿಜ್ಞಾನಿಗಳ ದೃಷ್ಟಿ ಸೃಷ್ಟಿಗರ್ಭದೊಳಾಗ । ರೇಡಿಯಮ್ಮಿನ ಕಿರಣವನು ಕಂಡಿದೆ' ಎಂದು ಚಿತ್ರಿಸಿದ್ದಾರೆ.

ಪ್ರಾದೇಶಿಕ ನೆಲೆಯಲ್ಲಿ ಗಂಟುಬೇನೆಯ ವ್ಯಾಧಿ ಎಂಬ ಹೊಸ ಕಾಯಿಲೆ ಆಗತಾನೇ ಪ್ರವೇಶಿಸಿತ್ತು ಎಂದು ಸೂಚಿಸಿದ್ದಾರೆ. ಆಗ ಸ್ವಾತಂತ್ರ್ಯ ಚಳುವಳಿ ಪ್ರಾರಂಭಾವಸ್ಥೆಯಲ್ಲಿತ್ತು ಎಂಬುದನ್ನು 'ಕುಂಟುತ್ತ ನಡೆದಿತ್ತು' ಎಂದು ಹೇಳಿದ್ದಾರೆ. ಆ ರಾಷ್ಟ್ರೀಯ ನಾಯಕರಿಗೆ ಒಂದು ದರ್ಶನವಿತ್ತು ಎಂಬುದನ್ನು ಆ ಮುಂದಾಳುಗಳನ್ನು ಹೆಸರಿಸುವಾಗ 'ಕಂಡವರು' ಎಂದು ಹೇಳಿ, ಅಗಾಧ ಅರ್ಥವ್ಯಾಪ್ತಿಯನ್ನು ಆ ನುಡಿಯಿಂದ ಕಂಡರಿಸಿದ್ದಾರೆ. ಅಂತಹ ದೂರದರ್ಶಿತ್ವದ ಮುಂದಾಳುಗಳ ಹಿಂದೆ ಅವರನ್ನು ಅನುಸರಿಸುವ ಹಿಂಬಾಲಕರಿದ್ದರು -ಎಂದು ಆ ಕಾಲಮಾನದ ಜನಮನದಲ್ಲಿ ರಾಷ್ಟ್ರೀಯತತ್ತ್ವ ಮೂಡಿದ್ದನ್ನು ದಾಖಲಿಸಿದ್ದಾರೆ. ಆ ಚಳುವಳಿಗೆ ಬ್ರಿಟೀಷ್ ಆಡಳಿತದ ಕನಸು ಒಡೆಯಲು ಬಂದಿತ್ತು ಎಂಬುದನ್ನು ಸೂಕ್ಷ್ಮವಾಗಿ 'ರಾಣಿಯ ರಾಜ್ಯದ ಕನಸದೆ ಹರಿದಿತ್ತು' ಎಂದು ಹೇಳಿ, ಸ್ವರಾಜ್ಯ ಕಲ್ಪನೆಯ ಬೀಜ ಮೊಳಕೆಯೊಡೆದಿತ್ತು ಎಂದಿದ್ದಾರೆ. ದೇಶದ ಅಂತಹ ಪರ್ವಕಾಲದಲ್ಲಿ ನಾನು ಜನಿಸಿದೆ ಎಂದು ಹೆಮ್ಮೆಪಟ್ಟಿದ್ದಾರೆ. ಅವರ ಬಾಲ್ಯದ ಕಾಲದಲ್ಲಿ ಕನ್ನಡ ಭಾಷೆಯು ರಾಜಕೀಯವಾಗಿ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತ್ತು. ಆ ಕಾರಣವಾಗಿ ಅದು ಹೀನಾಯ ಸ್ಥಿತಿಯಲ್ಲಿತ್ತು. ಅಂತಹ ಸಂದರ್ಭದಲ್ಲಿ ಬೇಂದ್ರೆಯವರು ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಪುನಶ್ಚೇತನಕ್ಕಾಗಿ ದುಡಿದರು. ಕನ್ನಡಿಗರನ್ನು ಎಚ್ಚರಿಸಿದ ಪ್ರಮುಖ ಕವಿಯಾದರು. ಅವರಿಗೆ ಮಾತು ಮತ್ತು ಮಾತೆಯೇ ಬೆಳಕಾದರು. ಅವರಿಗೆ ತಾಯಿ ಮತ್ತು ತಾಯಿನಾಡು ಸರ್ವಶ್ರೇಷ್ಠವಾಯಿತು. ಅವರು ಜಗದ ಪೋಷಕ ಶಕ್ತಿ ; ಸ್ತ್ರೀಚೇತನವೆಲ್ಲ ತಾಯಿಯೆಂಬ ಅರಿವಿನಲ್ಲಿ ಮಿಂದರು.

'ಹೆಣ್ಣು ಎನ್ನುವ ಮಾತು ತಾಯಿ ಎನ್ನುವ ಮಾತು
ಎರಡಲ್ಲ ಒಂದೆಂದು ತಿಳಿಸಿದಳು'

ಎಂದು ತನ್ನ ತಾಯಿ ಅಂಬವ್ವ 'ಹೆಣ್ಣೇ ತಾಯಿ' ಎಂಬ ತತ್ತ್ವ ಬೋಧಿಸಿದ್ದನ್ನು ದಾಖಲಿಸಿದರು. ಆ ತತ್ತ್ವ ಅವರ ಜೀವನದಲ್ಲಿ, ಕಾವ್ಯ-ನಾಟಕಗಳಲ್ಲಿ ವಿರಾಟ್ ಶಕ್ತಿಯಾಗಿ ಹರಿದಿದೆ. ಅವರು ಕವಿ 'ಅಂಬಿಕಾತನಯದತ್ತ'ರಾಗಿ ಐದು ಐದೆಯರನ್ನು ಆರಾಧಿಸಿದ್ದಾರೆ. 'ನಾನು' ಎಂಬ ಕವನದ ಬೀಜ - ಮಾತುಗಳನ್ನು ಉಸುರಿದೆ. ಪಂಚಪ್ರಾಣಗಳ ಸಂಯೋಗದಲ್ಲಿ ಜೀವಕ್ಕೆ

---

೧ Bogardus in "The development of Social Thought" Page - 8

ಪೀಠ ಉಂಟಾಗುವಂತೆ, ಮೈಗೊಟ್ಟು ನನ್ನ ಹಡೆದ ತಾಯಿ, ಮಾತುಕೊಟ್ಟ ಕನ್ನಡ ತಾಯಿ, ಸಂಸ್ಕೃತಿಯ ತಿರುಳುಗೊಟ್ಟ ಭಾರತಮಾತೆ, ಅಸ್ತಿತ್ವಕ್ಕೆ ಅಸ್ತಿ ಭಾರವಾದ ಭೂಮಾತೆ, ಜನ್ಮಜನ್ಮಾಂತರಕ್ಕೂ ಅನಂತವಿಸ್ತಾರ ಕಲ್ಪಿಸುವ ವಿಶ್ವಮಾತೆ- ಈ ಐವರು ಮಾತೆಯರು ನನ್ನ ಜೀವನಕ್ಕೆ ಪ್ರಸ್ತಾರ ಹಾಕಿ ಸ್ವಚ್ಛಂದೋಕ್ತಿಗಳಿಗೂ ಮಂತ್ರಛಾಯೆಯನ್ನು ಒದಗಿಸುತ್ತಿದ್ದಾರೆ ಎಂದು ಹೇಳಿದ್ದೇನೆ. ಅದು ಎಂದಿಗೂ ನಿಜ"[೨] ಎಂದು ಆತ್ಮಕಥನದಲ್ಲಿ ನುಡಿದಿದ್ದಾರೆ. ಅವರಿಗೆ ಮೂರ್ತರೂಪದ ಹೆಣ್ಣಿನಂತೆ ಅಮೂರ್ತರೂಪದ ಕನ್ನಡತಾಯಿ, ಭಾರತಮಾತೆ, ಭೂಮಾತೆ, ವಿಶ್ವಮಾತೆಯರೂ ತಾಯಿಯಾಗಿ ಜಗವನ್ನು ವ್ಯಾಪಿಸಿದ ಮಾತೃಶಕ್ತಿಯಾಗಿದ್ದಾರೆ. ಅದನ್ನು ಅವರು ಸೂಚ್ಯವಾಗಿ ಪೀಠಿಕೆಯಲ್ಲಿ ತಿಳಿಸಿದ್ದಾರೆ.

■ ■

---

೨ ದ.ರಾ. ಬೇಂದ್ರೆ, ಆತ್ಮಕಥನ, ಜಿ.ಬಿ. ಜೋಶಿ, ಕೆ.ಡಿ. ಕುರ್ತಕೋಟಿ (ಸಂ.)., ಪುಟ ಬಂಗಾರ (ಸಂಪುಟ ೫) ಶ್ರಾವಣ ಪ್ರತಿಭೆ, ಮನೋಹರ ಗ್ರಂಥಮಾಲೆ, ಧಾರವಾಡ ೧೯೮೭. ಪು-೪೧೨

# ಕೌಟುಂಬಿಕ ಪರಿಸರ

## ಅಜ್ಜಿ - ಗೋದುಬಾಯಿ

ಬೇಂದ್ರೆಯವರ ಬಾಲ್ಯ ಸ್ತ್ರೀಪೋಷಿತವಾದುದು. ಒಂದು ಬಡ ಸಾಧಾರಣ ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದ ಬೇಂದ್ರೆಯವರಿಗೆ ತಾಯಿ ಅಂಬವ್ವ ಮತ್ತು ಕುಟುಂಬದ ಆಧಾರವಾದ ಅಜ್ಜಿ ಗೋದೂಬಾಯಿಯೇ ಸರ್ವಸ್ವ. ಅವರಲ್ಲಿಯ ಕೆಚ್ಚು, ಕಷ್ಟಸಹಿಷ್ಣುತೆ ಹಾಗೂ ಜೀವನಶ್ರದ್ಧೆಗೆ ಅಜ್ಜಿಯೇ ಆದರ್ಶ. ಅವರು ಅಜ್ಜಿಯನ್ನು ಕುರಿತು 'ನನ್ನ ತಾಯಿಯ ತಾಯಿ ಗೋದೂಬಾಯಿ, ಒಳ್ಳೆಯ ಧೈರ್ಯದ ಹೆಣ್ಣು ಮಗಳು. ಆಕೆಯ ತವರು ಮನೆ ನರಗುಂದದ ದೀಕ್ಷಿತರದು. ಆಕೆಯ ಜೀವನ ಕಷ್ಟ ನೆನಸಿದಂತೆಲ್ಲ ಆಕೆ ಮಹಾತಪಸ್ವಿನಿ ಎಂದು ಭಾಸವಾಗುವುದು.[೧] 'ನಮ್ಮ ತಾಯಿಯ ತಂದೆ ಕೃಷ್ಣಾಜಿಪಂತ ನಾತು ಅವರು ಮುಳಗುಂದದವರು. ಕೃಷ್ಣಾಜಿಪಂತ ನಾತು ಅವರು ಹೆಬ್ಬಳ್ಳಿಯ ಹತ್ತಿರ ತಲವಾಯಿಯಲ್ಲಿ ತೀರಿಕೊಂಡರು. ಆ ಮಾತು ೧೮೭೭, ೭೮, ೭೯ರದಾಗಿರಬೇಕು. ಆಗ ನನ್ನ ಅಜ್ಜಿ ನಾಲ್ಕು ತಿಂಗಳ ಬಸಿರಿ. ಹುಟ್ಟಿದ ಹತ್ತು ಹದಿನೈದು ಮಕ್ಕಳು ಸಣ್ಣಪುಟ್ಟವಾಗಿ ತೀರಿಹೋಗಿ, ಗಂಡನ ಮರಣದ ಕಾಲಕ್ಕೆ ಇಬ್ಬರು ಹೆಣ್ಣಮಕ್ಕಳು ಉಳಿದಿದ್ದರು. ಹೊಟ್ಟೆಯಲ್ಲಿದ್ದುದು ಗಂಡಾದರೆ ದೇವರು ಎಷ್ಟೋ ದೊಡ್ಡವನು- ಎಂಬ ಆಸೆ ಆ ಹೆಣ್ಣು ಮಗಳಿಗಿತ್ತು. ತಲವಾಯಿಯ ಒಬ್ಬ ಬಡಿಗೇರ ಮನೆಯ ಗೋದಲೆಯಲ್ಲಿ ನಮ್ಮ ತಾಯಿಯ ಜನನವಾಯಿತು. ಆ ಹಳ್ಳಿಯನ್ನು ಬಿಡುವಾಗ ಕೊಡುಕೊಳುವುದನ್ನು ಎಲ್ಲಾ ಸರಿಪಡಿಸಿ, ಮೈಮೇಲಿನ ಚೂರುಪಾರು ಮುರಿಸಿ, ನಾಲ್ವತ್ತು ರೂಪಾಯಿ, ಮೂರು ಹೆಣ್ಣು ಮಕ್ಕಳು ಇಷ್ಟನ್ನು ಕಟ್ಟಿಕೊಂಡು ಧಾರವಾಡ ನಗರದಲ್ಲಿ ಊಟದ ಮಣೆಯನ್ನಾದರೂ ಹಾಕಿ, ಮಕ್ಕಳ ಪರಿಪಾಲನೆ ಮಾಡಬೇಕೆಂಬ ದಿಟ್ಟ ನಿಶ್ಚಯದ ಆಕೆ, ತಲವಾಯಿ ಬಿಟ್ಟುಬಂದಳು.[೨] 'ನಮ್ಮ ಅಜ್ಜಿ

---

೨ ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೪ ಪುಟ - ೪೧

ಹುಲಿಯಂಥವಳು. ಆದರೆ ಆಕೆಗೆ ಆಳವಾದ ಮಮತೆಯ ಹೃದಯವೂ ಇತ್ತು. ವೈದಿಕ ಕುಟುಂಬದಲ್ಲಿ ತನ್ನ ಮಗಳನ್ನು ಕೊಟ್ಟಿದ್ದೇ ದೊಡ್ಡ ಪುಣ್ಯವೆಂದು, ಅವಳ ಮಕ್ಕಳ ಸಂಗೋಪನ ಮಾಡುವುದು ಹೆಚ್ಚಿನ ಪುಣ್ಯವೆಂದು ಆಕೆ ತಿಳಿದಿದ್ದಳು.'[೩] 'ಅಜ್ಜಿಯ ಪೋಷಣೆಯಲ್ಲಿ ಬೆಳೆದವನಾದರೂ, ನಾನು ನಿಜವಾದ ಬಡತನವನ್ನನುಭವಿಸಲಿಲ್ಲ. ನನ್ನ ಅಜ್ಜಿ ಬಡವಿ, ಜನರ ಮನೆಯಲ್ಲಿ ಅಡಿಗೆಗೆ ಹೋಗುತ್ತಿದ್ದರೂ, ಕಟ್ಟಾಭಿಮಾನಿ. ಯಾರಿಗೂ ದೇಹಿ ಎಂದವಳಲ್ಲ, ನಮ್ಮದೂ ಅದೇ ಹಾದಿ'[೪] ಎಂದು ನುಡಿದಿದ್ದಾರೆ. ಹಾಗೆ ದುಡಿಯುತ್ತಿದ್ದುದರ ಜೊತೆಗೆ ಅವರ ಅಜ್ಜಿ ಖಾನಾವಳಿ ನಡೆಸಿ ಜೀವನ ನಿರ್ವಹಣೆ ಮಾಡುತ್ತಿದ್ದರು. ಆ ಖಾನಾವಳಿ ಕುರಿತು ಬೇಂದ್ರೆಯವರ ಬಾಲ್ಯ ಸ್ನೇಹಿತ ಶ್ರೀಧರ ಖಾನೋಳಕರ ಅವರು 'ಇವರ ತಾಯಿಯ ತಾಯಿ (ಅಜ್ಜಿ) ಖಾನಾವಳಿ ಹಾಕಿದ್ದರು. ಆಗಿನ ಖಾನಾವಳಿಯೆಂದರೆ ಅದೊಂದು ಸುಂದರವಾದ ಊಟದ ಮನೆ. ದೊಡ್ಡ ಆಫೀಸರರು, ಬಿ.ಎ., ಎಂ.ಎ., ಆದಂಥ ಶಾಲಾಮಾಸ್ತರು, ಕೆಲವು ವಿದ್ಯಾರ್ಥಿಗಳು ಹೀಗೆ ಊಟ ಮಾಡುವವರು. ಹೆಸರಿಗೆ ಒಂದು ಖಾನಾವಳಿ, ಒಂದು ಮನೆಯಂತೆಯೇ ಇತ್ತು. ಯಾರಾದರೂ ಬೇನೆಬಿದ್ದರೆ ಇವರ ಅಜ್ಜಿಯೇ ಉಪಚಾರ ಮಾಡುತ್ತಿದ್ದರು. ಖಾನಾವಳಿಯಲ್ಲಿ ಊಟಮಾಡುವವರೆಲ್ಲರೂ ಇವರಿಗೆ ಮೊಮ್ಮಕ್ಕಳೇ ಅನ್ನಿರಿ! ಇಷ್ಟು ಪ್ರೀತಿಸುತ್ತಿದ್ದರು. ಅನೇಕ ವಿದ್ವಾಂಸರು ನಿತ್ಯ ಕಣ್ಣಿಗೆ ಬೀಳುವುದೂ ಅವರ ಉದಾತ್ತ ವಿಚಾರಗಳಿಂದ ಪರಿಪ್ಲುತವಾದ ವಾದ ವಿವಾದಗಳನ್ನು ಕೇಳುವುದೂ ಬೇಂದ್ರೆಯವರಿಗೆ ಮೊದಲಿನಿಂದಲೇ ಸಿಕ್ಕಿತು. ಆದ್ದರಿಂದ ಅವರಂತೆಯೇ ತಾವಾದರೂ ಯಾವದೊಂದು ದೊಡ್ಡ ಕಾರ್ಯವನ್ನು ವಹಿಸಿಕೊಂಡು, ಪಂಡಿತನಾಗಿ ದೇಶಸೇವೆಗೈಯಬೇಕೆಂಬ ಮಹತ್ವಾಕಾಂಕ್ಷೆಯು ಚಿಕ್ಕಂದಿನಲ್ಲಿಯೇ ತನ್ನಿಂದ ತಾನೇ ಹುಟ್ಟಿರಲಿಕ್ಕೆ ಸಾಕು'[೫] ಎಂದು ಚಿತ್ರಿಸಿದ್ದಾರೆ. ಬೇಂದ್ರೆಯವರಿಗೆ ಅಜ್ಜಿಯೇ ಆದರ್ಶವಾಗಿ, ಅವರ ಮನೆಯೇ ಚಿಂತನಾನೆಲೆಯಾಗಿ ಅವರನ್ನು ರೂಪಿಸಿದೆ. ಅದು ಎರಡನೆಯ ಖಂಡಿಕೆಯಲ್ಲಿ ಕಾವ್ಯವಾಗಿ ಹರಿದಿದೆ. ಅವರಿಗೆ ಗೋದಲೆ, ಗೋದುಬಾಯಿ, ಅಂಬಿಕೆ ಸದಾಧ್ಯಾನದ ನಾಮಗಳು. ಅವರು ತಮಗೆ ಇಳಿವಯಸ್ಸಾಗಿದ್ದಾಗ ೧೯೭೧ರಲ್ಲಿ ಅಜ್ಜಿಯನ್ನು ಧ್ಯಾನಿಸಿ ಬರೆದ ಕವನ 'ಗೋದಲೆಗೆ ಬಾಗೋದು ಹೇ' ಮಂತ್ರ ಸದೃಶವಾಗಿದೆ.

---

೨ ದ.ರಾ. ಬೇಂದ್ರೆ, ಆತ್ಮಕಥನ, ಜಿ.ಬಿ. ಜೋಶಿ, ಕೆ.ಡಿ. ಕುರ್ತಕೋಟಿ (ಸಂ.)., ಪುಟ ಬಂಗಾರ (ಸಂಪುಟ ೫) ಶ್ರಾವಣ ಪ್ರತಿಭೆ, ಮನೋಹರ ಗ್ರಂಥಮಾಲೆ, ಧಾರವಾಡ ೧೯೮೭. ಪು-೪೧೨

೩ ಆದೇ ಪು-೪೨೦

೪ ದ.ರಾ ಬೇಂದ್ರೆ, ನನ್ನ ನಾ ಕಂಡಂತೆ, ವಾಮನಬೇಂದ್ರೆ, ಬೇಂದ್ರೆ ಜೀವನ ಪರಿಚಯ, ಶ್ರೀಮಾತಾ ಪ್ರಕಾಶನ ಧಾರವಾಡ ೧೯೯೮ ಪು - ೮೫

೫ ಶ್ರೀಧರ ಖಾನೋಳಕರ, 'ಗೆಳೆಯ ಬೇಂದ್ರೆ', ಚುಳಕಿ ಗೋವಿಂದರಾಯರು (ಸಂ.) ಕವಿವರ ಬೇಂದ್ರೆ, ಲಲಿತ ಸಾಹಿತ್ಯ ಮಾಲೆ, ಧಾರವಾಡ, ೧೯೪೬, ಪು ೧೧

‘ಅಶ್ವದಾ । ಆತ್ಮದಾ । ಓ ಜೋದಾ । ದ್ರವಿಣೋದಾ ಈಗೋದಾ
ಧನದಾ । ಬಲದಾ । ಭೂರಿದಾ । ವಸ್ತದಾ - ಈ ಗೋದಾ
ವಾಜದಾ । ವಾಸೋದಾ । ಸಹೋದಾ । ಸಹಸ್ರದಾ - ಈಗೋದಾ
ಸ್ವಸ್ತಿದಾ । ಹಿರಣ್ಯದಾ । ಹದಿನೇಳರ ಸುಧಾ - ।
ಮತ್ತೆ ಮತ್ತೆ ವಸುಪ್ರದಾ - ಈ ಗೋದಾ’[೬]

ಬೇಂದ್ರೆ ಎಂಬ ಕಾವ್ಯಕುಡಿಯನ್ನು ಪೋಷಿಸಿ ಸಂರಕ್ಷಣೆ ಮಾಡಿ ಅದರ ಸಮೃದ್ಧಿಗೆ ಕಾರಣವಾದ ಅಜ್ಜಿ ಗೋದುಬಾಯಿ, ಅವರ ಜೀವಕೋಶದ ಭಾಗವಾಗಿ ಅವರ ಆಂತರಿಕ ವಿಕಾಸಕ್ಕೆ ಕಾರಣವಾಗಿದ್ದಾಳೆ. ಅವರಲ್ಲಿ ಜೀವನಪ್ರೀತಿ ಮತ್ತು ಜೀವನೋತ್ಸಾಹ ತುಂಬಿದ ಚೈತನ್ಯವಾಗಿದ್ದಾಳೆ.

## ತಂದೆ ರಾಮಚಂದ್ರ ಬೇಂದ್ರೆ ಮತ್ತು ತಾಯಿ ಅಂಬಿಕೆ

ಬೇಂದ್ರೆಯವರು ವೇದ ಪಾರಂಗತ ಚಿತ್ಪಾವನ ಬ್ರಾಹ್ಮಣರು. ಅವರ ಮೂಲ ರತ್ನಾಗಿರಿ ಜಿಲ್ಲೆಯಲ್ಲಿ ಕೇಳಸಿ ಗ್ರಾಮ. ಅವರ ಮಾತೃಭಾಷೆ ಮರಾಠಿ. ಅಲ್ಲಿನ ಅನನುಕೂಲ ಪರಿಸ್ಥಿತಿಯಿಂದಾಗಿ, ಅವರ ಮನೆತನ ತ್ರ್ಯಂಬಕೇಶ್ವರಕ್ಕೆ ಬಂದು ಗಣಪತಿಯ ಉಪಾಸನೆ ಕೈಗೊಂಡಿತು. ಆ ಕುಟುಂಬದ ಹಿರಿಯರಿಗೆ ‘ನೀವು ಕರ್ನಾಟಕಕ್ಕೆ ವಲಸೆ ಹೋದುದಾದರೆ, ಅಲ್ಲಿ ನಿಮ್ಮ ಮನೆತನಕ್ಕೆ ಉಜ್ವಲ ಭವಿಷ್ಯ ಕಾದಿದೆ’ ಎಂದು ಸ್ವಪ್ನ ದೃಷ್ಟಾಂತವಾಗಲು, ಅದನ್ನು ನಂಬಿ ಅವರು ತಾಸಗಾಂವಕ್ಕೆ ಬಂದರು. ಅನಂತರ ಆ ಮನೆತನದ ರಾಮಭಟ್ಟ ಬೇಂದ್ರೆ ಎಂಬುವರು ಶಿರಹಟ್ಟಿಯ ಲಾಗೂ ಮನೆತನದ ಪುರೋಹಿತರಾಗಿ ಅಲ್ಲಿಗೆ ಬಂದರು. ರಾಮಭಟ್ಟರ ಮಗ ಅಪ್ಪಾಭಟ್ಟ. ಅಪ್ಪಾಭಟ್ಟರಿಗೆ ರಾಮಚಂದ್ರಪಂತ ಬೇಂದ್ರೆ ಮತ್ತು ಬಂಡೋಪಂತ ಬೇಂದ್ರೆ ಎಂಬ ಇಬ್ಬರು ಮಕ್ಕಳು. ರಾಮಚಂದ್ರ ಬೇಂದ್ರೆಯವರಿಗೆ ನಾಲ್ಕು ಮಕ್ಕಳಾಗಿ ಉಳಿದವರು ಇಬ್ಬರು. ಅವರಲ್ಲಿ ಹಿರಿಯ ಮಗ ಕನ್ನಡದ ದೊಡ್ಡ ಕವಿ ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಇನ್ನೊಬ್ಬ ಕೃಷ್ಣಾಜಿ ಬೇಂದ್ರೆ. ರಾಮಚಂದ್ರ ಬೇಂದ್ರೆಯವರ ತಮ್ಮ ಬಂಡೋಪಂತ ಬೇಂದ್ರೆ ಮ್ಯಾಟ್ರಿಕ್ ಪರೀಕ್ಷೆ ಪಾಸಾಗಿ ನೌಕರಿ ಹಿಡಿದು ಪುಣೆಯಲ್ಲಿ ವಾಸವಾದರು. ಬೇಂದ್ರೆಯವರು ತಮ್ಮ ‘ಬೇಂದ್ರೆ’ ಎಂಬ ಅಡ್ಡ ಹೆಸರಿನ ಮೂಲದ ಬಗ್ಗೆ ‘ಬೇಂದ್ರೆ ಅಂದರೆ ನಾವು ಕೊಂಕಣದಿಂದ ಬಂದಿದ್ದೇವೆ. ವೇದ ಹೇಳುವವರು ‘ವೇದ್ರೆ’ ಆದರು. ಬರುಬರುತ್ತ ವೇದ್ರೆ, ವೇಂದ್ರೆ ಆದರು. ಆಮೇಲೆ ಬೇಂದ್ರೆ ಆದರು’ ಎಂದು ಹೇಳಿಕೊಂಡಿದ್ದಾರೆ.

---

೬ ದ.ರಾ. ಬೇಂದ್ರೆ, ಪರಾಕಿ, ವಾಮನ ಬೇಂದ್ರೆ, (ಸಂ)., ಸಮಾಜ ಪುಸ್ತಕಾಲಯ, ಧಾರವಾಡ, ೧೯೮೨, ಪು ೫೪

ಬೇಂದ್ರೆಯವರ ತಂದೆ ರಾಮಚಂದ್ರಪಂತರು (ತಾತಂಭಟ್ಟ) ಒಬ್ಬ ಶಿಕ್ಷಕರಾಗಿ, ವೇದಪಾಠ ಪಾರಂಗತರಾಗಿ, ಪೌರೋಹಿತ್ಯವನ್ನು ನಡೆಸುತ್ತಿದ್ದರು. ಅವರು ಗಂಡಮಾಲೆ ರೋಗದಿಂದ ನರಳಿ ೧೯೧೭ರಲ್ಲಿ ತೀರಿಹೋದರು. ಬೇಂದ್ರೆಯವರಿಗೆ ಅವರ ನೋವು ನರಳಾಟಗಳೇ ನೆನಪು. 'ನಾನು ಇಂಗ್ಲೀಷ್ ಮೂರನೇ ಇಯತ್ತೆಯಲ್ಲಿದ್ದಾಗ ನಮ್ಮ ತಂದೆಯವರು ಹನ್ನೆರಡು ವರ್ಷದ ಗಂಡ ಮಾಲೆಗಳ ಬೇನೆಯಿಂದ ಜರ್ಝರಿತರಾಗಿ, ನಮ್ಮ ಅಜ್ಜಿಯ ಮನೆಯಲ್ಲಿಯೇ ತೀರಿಕೊಂಡರು. ಅಂದು ಶ್ರಾವಣ ಶುದ್ಧ ಪಂಚಮಿ'[೭] ಎಂದು ಬೇಂದ್ರೆಯವರು ಆತ್ಮಕಥನದಲ್ಲಿ ದಾಖಲಿಸಿದ್ದಾರೆ. ಇವರ ವಂಶ ಶಿರಹಟ್ಟಿಯಲ್ಲಿ ಹೆಸರುವಾಸಿಯಾದುದು. ಅದನ್ನು ಕುರಿತು ಬೇಂದ್ರೆಯವರು ಹೀಗೆ ಹೇಳಿದ್ದಾರೆ : 'ನಮ್ಮ ಮುತ್ತಜ್ಜ ರಾಮಚಂದ್ರಪಂತರು ಸನ್ಯಾಸ ಗ್ರಹಣ ಮಾಡಿದ್ದರು. ಅವರ ಸಮಾಧಿ ಶಿರಹಟ್ಟಿಯ ಕೋಟೆಯಲ್ಲಿ ಹಾಳ ಭಾವಿಯ ಹತ್ತಿರ ಇದೆ. ನಮ್ಮ ಅಜ್ಜಂದಿರಾದ ಅಪ್ಪಾಭಟ್ಟರು ದಶಗ್ರಂಥಿಗಳೆಂದು, ಯಾಜ್ಞಿಕ ಧರ್ಮಶಾಸ್ತ್ರಗಳಲ್ಲಿ ಬಲ್ಲಿದರೆಂದು ಪ್ರಖ್ಯಾತರಾಗಿದ್ದರು... ನಮ್ಮ ಅಜ್ಜಂದಿರಿಂದ ರಚಿತವಾದ 'ಛಂದೋದಾಹರಣ' ಎಂಬ ಒಂದು ಛಂದಶ್ಯಾಸ್ತ್ರೀಯ ಪ್ರಬಂಧವನ್ನು ಇತ್ತೀಚೆಗೆ ನಾನು ಪ್ರಕಟಿಸಿದ್ದೇನೆ. ಅದರಲ್ಲಿ ಅವರ ಭಾಗವತ ಪುರಾಣ ಪ್ರೇಮವು, ಕವಿ ಮೋರೋಪಂತರ ಪ್ರಭಾವವು ಕಂಡು ಬರುತ್ತದೆ... ನಮ್ಮ ಚಿಕ್ಕಪ್ಪ ಬಂಡೋಪಂತ ಅವರು ಕಾವ್ಯಾಭ್ಯಾಸ ಮಾಡಿದ ಸಣ್ಣಪುಟ್ಟ ಬರವಣಿಗೆ ಹೇಗೋ ನನ್ನ ಹತ್ತಿರ ಉಳಿದುಕೊಂಡಿದೆ. ನಮ್ಮ ತಂದೆಯವರು ನಮ್ಮ ಅಜ್ಜಂದಿರ ಬಳಿ ಪಂಡಿತಾಂತ ಅಧ್ಯಯನ ಮಾಡಿದ್ದರು.'[೮]

ಬೇಂದ್ರೆಯವರ ತಾಯಿ ಅಂಬಕ್ಕ ಚಿಕ್ಕವಯಸ್ಸಿನಲ್ಲಿ ಪತಿಯನ್ನು ಕಳೆದುಕೊಂಡು, ತನ್ನ ಪತಿ ಬೋಧಿಸಿದ ಶ್ರೀರಾಮ ತಾರಕಾ ಮಂತ್ರವನ್ನು ನಂಬಿ, ಜೀವನವನ್ನು ನಡೆಸಿದಳು. ಶ್ರೀರಾಮ ತಾರಕಾ ಮಂತ್ರದ ಸಿದ್ಧಿ ಪಡೆದ ಶ್ರೀ ಬ್ರಹ್ಮಚೈತನ್ಯ ಮಹಾರಾಜ ಗೊಂದಾವಲೆಕರ ಅವರು ಬೇಂದ್ರೆ ಕುಟುಂಬದ ಗುರುಗಳು. ಆ ಗುರುವಿನ ಬಗ್ಗೆ ಬೇಂದ್ರೆಯವರಿಗೆ ಅಪಾರವಾದ ಭಕ್ತಿ. ಅದನ್ನು ಬೇಂದ್ರೆಯವರು ಹೀಗೆ ನೆನೆದಿದ್ದಾರೆ : 'ಜೀವನದಲ್ಲಿ ಯೋಗ ಎಂಬುದು ಇದ್ದೇ ಇದೆ. ಗೋಂದಾವಲೆಯವರು ಗುರುಗಳು, ಬೆಲದಡಿಯವರು ಶಿಷ್ಯರು. ಮೊದಲು ಗುರುಗಳನ್ನು ತಾಯಿ ತಂದೆಗಳ ಜೊತೆಯಲ್ಲಿ ೧೯೦೬-೦೭ರಲ್ಲಿ, ಬಾಲ್ಯದಲ್ಲಿ ನರಗುಂದದಲ್ಲಿ ಕಂಡೆ. ಆಗ ಅವರು ನಮ್ಮ ತಂದೆಗೆ, ಶ್ರೀರಾಮ ನಾಮೋಪದೇಶ ಮಾಡುವಾಗ ತೀರಾ ಹತ್ತಿರದಲ್ಲಿ ಸಾಕ್ಷಿಯಾಗಿ ನಿಂತಿದ್ದೆ. ತಂದೆಯವರು ತಾಯಿಗೆ ಆ ಉಪದೇಶ ಸಂಪ್ರದಾನ ಮಾಡಿದ್ದರು. ತಾಯಿ 'ಅಂಬಿಕೆ-ಪಾರ್ವತಿ'ಗೆ ಅದು ಜೀವದ ಮಂತ್ರ. ಆ ಮೇಲೆ ಶ್ರೀ ಗುರುಗಳನ್ನು ೧೯೧೨-೧೩ರಲ್ಲಿ ಪೂನಾ ಮುರಳೀಧರ ಗುಡಿಯಲ್ಲಿ ಕಂಡು, ಅವರು ಟಾಂಗಾ ಹತ್ತಿ, ಸ್ಟೇಷನ್ನಿಗೆ ನಡೆದಾಗ, ಅದರ ಬೆನ್ನುಹತ್ತಿ ಹೋಗಿ, ಒಮ್ಮೆ ಒಂದು ಕೈಯಿಂದ,

---

೭ ದ.ರಾ. ಬೇಂದ್ರೆ, ಆತ್ಮಕಥನ, ಪೂರ್ವೋಕ್ತ, ಪು-೪೧೬

೮ ಅದೇ, ಪು-೪೦೯, ೪೧೦, ೪೧೧

ಇನ್ನೊಮ್ಮೆ ಇನ್ನೊಂದು ಕೈಯಿಂದ ಅವರ ಎರಡೂ ಪಾದ ಮುಟ್ಟಿದೆ. ಎರಡೂ ಕೈಗಳಿಂದ ಎರಡೂ ಪಾದ ಏಕಕಾಲಕ್ಕೆ ಹಿಡಿಯುವುದಾಗಲಿಲ್ಲ. ಇದು ಯೋಗವೆ.'[೯]

ನಾಮ ಜಪವನ್ನು ಕುರಿತು ಶ್ರೀ ಬ್ರಹ್ಮಚೈತನ್ಯರು 'ನಾಮದಲ್ಲಿ ಎಲ್ಲಾ ಚರಿತ್ರೆಯು ಸಂಗ್ರಹವಾಗಿರುತ್ತದೆ. ಜ್ಞಾನ, ಉಪಾಸನೆ, ಕರ್ಮ ಮುಂತಾದ ಅನೇಕ ಮಾರ್ಗಗಳಿರುತ್ತವೆ. ಆದರೆ ಅವೆಲ್ಲವುಗಳಲ್ಲಿ ನಾಮಸ್ಮರಣೆ ಅತ್ಯಂತ ಸರಳವಾದ ಸಾಧನವಾಗಿರುತ್ತದೆ. ಪರಮಾರ್ಥವು ಎಷ್ಟು ಕಠಿಣವಾಗಿದ್ದರೂ ನಾಮದಿಂದ ಅದು ಸುಸಾಧ್ಯವಾಗುತ್ತದೆ. ನಾಮದ ಮೇಲೆ ಪ್ರೇಮ ಉಂಟಾಗುವುದಿಲ್ಲವೆಂದು ತಕರಾರು ಮಾಡುತ್ತಾರೆ. ಸಂತ ವಚನಗಳ ಮೇಲೆ ನಾಮ ತೆಗೆದುಕೊಳ್ಳಬೇಕು. ಇದರಿಂದಲೇ ಸಮಾಧಾನವಾಗುತ್ತದೆ'[೧೦] ಎಂದು ತಿಳಿಸಿದ್ದಾರೆ. ಮಹಾತ್ಮಗಾಂಧಿಯವರು ಈ ಬಗೆಯ ನಾಮಜಪವನ್ನೇ ತಮ್ಮ ಸರ್ವಸಾಧನೆಗಳ ಉಸಿರಾಗಿಸಿಕೊಂಡಿದ್ದರು. ಹಾಗೆ ಮಾಡಿಕೊಂಡಿದ್ದುದರಿಂದ ಹಂತಕನ ಗುಂಡಿಗೆ ಬಲಿಯಾಗಿ ಕೊನೆಯುಸಿರೆಳೆಯುವಾಗಲೂ 'ಹೇ ರಾಮ್' ಎಂಬ ನಾಮವೇ ಅವರ ಹೃದಯದಿಂದ ಹೊರಬಿತ್ತು.

'ಬೇಂದ್ರೆನ ತಾಯಿ ಅಂಬೂತಾಯಿ (ಇದೇ ತವರು ಮನೆಯ ಹೆಸರು) ಕರ್ನಾಟಕದ ಮತ್ತು ಮಹಾರಾಷ್ಟ್ರದ ಸಾಧುಸಂತರ ಸಾಹಿತ್ಯಾ ಸ್ವಾಧ್ಯಾಯದಿಂದ ತನ್ನ ಜೀವನದ ತಾಪವನ್ನು ತಪವನ್ನಾಗಿಯೂ, ನೋವನ್ನು ನೋಂಪಿಯನ್ನಾಗಿಯೂ ಮಾರ್ಪಡಿಸಿಕೊಂಡ ಸಾಧಕ ಜೀವಿ'[೧೧]. ಆಕೆ ದೇವರ ಧ್ಯಾನದಲ್ಲಿ, ಧಾರ್ಮಿಕ ಗ್ರಂಥಗಳ ಅಧ್ಯಯನದಲ್ಲಿ ದಿನ ಕಳೆಯುತ್ತಿದ್ದಳು. ಬೇಂದ್ರೆಯವರ ಬಾಲಮನಸ್ಸು ಭಕ್ತಿಯ ಕೇಂದ್ರವಾಗಲು ಆಕೆಯೇ ಕಾರಣ. 'ಶ್ರೀ ಗೊಂದವಲೆಕರ ಅವರ ಭಜನೆಗಳ ಪುಸ್ತಕ, ಶ್ರೀ ಅಕ್ಕಲಕೋಟಸ್ವಾಮಿ ಮಹಾರಾಜರ ಚರಿತ್ರೆ, ಶಿವಲೀಲಾಮೃತ, ಜ್ಞಾನಸಿಂಧು, ಹರಿವಿಜಯ, ಪಾಂಡವ ಪ್ರತಾಪ, ನವನೀತ ಈ ಮರಾಠಿಪ್ರಾಕೃತ ಗ್ರಂಥಗಳು ನನ್ನ ಬಾಲಮನವನ್ನು ರೂಪಿಸಿದವು'[೧೨] ಎಂದು ಬೇಂದ್ರೆಯವರು ನೆನೆಸಿಕೊಂಡಿದ್ದಾರೆ. ಅವರ ತಾಯಿ ತನ್ನ ಮಕ್ಕಳನ್ನು ಪೋಷಿಸಿ ಬೆಳೆಸಿ ಅವರನ್ನು ಯೋಗ್ಯ ವ್ಯಕ್ತಿಯನ್ನಾಗಿಸುವಲ್ಲಿ ತನ್ನ ಜೀವನವನ್ನು ಸವೆಸಿದಳು. ಅವಳ ನೋವು ನಲಿವಿನಲ್ಲಿ ಜಗದ ಬೆಳಕನ್ನು ಕಂಡ ಬೇಂದ್ರೆಯವರಿಗೆ ತಾಯಿಯೇ ಸರ್ವಸ್ವವಾಗಿದ್ದಳು. ಅವಳ ವಿಸ್ತೃತ ರೂಪವೇ ಅವರಿಗೆ ಆರಾಧ್ಯ ದೈವವಾದ ಐದು ಐದೆಯರು : '೧. ದೇಹಕೊಟ್ಟ ತಾಯಿ ; ೨. ಮಾತು ಕಲಿಸಿದ

---

೯ ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು - ೧೦೧೪

೧೦. ಶ್ರೀ ಬ್ರಹ್ಮಚೈತನ್ಯ ಮಹಾರಾಜ ಗೋಂದಾವಲೇಕರ ಪ್ರವಚನಗಳು. ಅನು : ಶ್ರೀ ದತ್ತಾವಧೂತ, ಶ್ರೀ ಸದ್ಗುರು ಬ್ರಹ್ಮಚೈತನ್ಯ ಮಹಾರಾಜ ಗೋಂದಾವಲೇಕರ, ಸ್ಥಿರ ಪಾದುಕಾಮಂದಿರ, ಹೆಬ್ಬಳ್ಳಿ ೧೯೯೮, ಪು. ೯೯

೧೧. ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು-೪೪

೧೨. ದ.ರಾ. ಬೇಂದ್ರೆ, ಆತ್ಮಕಥನ, ಪೂರ್ವೋಕ್ತ, ಪು. ೪೭೨

ತಾಯಿ ; ೩. ಸಂಸ್ಕಾರ ಸಂಪನ್ನ ಮಾಡಿದ ತಾಯಿ ; ೪. ಭೂಮಂಡಲದ ಮಾನವತೆಯಲ್ಲಿ ನೆಲೆಸಿರುವ ತಾಯಿ ; ೫. ವಿಶ್ವೋದರದಲ್ಲಿ ಧರಿಸಿದ ತಾಯಿ. ಈ ಐದು ಐದೆಯರು ದತ್ತನ ತಾಯಂದಿರು. ಇದು ಪಂಚಕೋಶಗರ್ಭ. 'ಅಂಬಿಕೆ'ಯ ತೊಡೆ, ಹೊಟ್ಟೆ, ಎದೆ, ಕೊರಳು, ತುಟಿ, ಕಣ್ಣು ಒಂದೊಂದರಲ್ಲಿಯೂ ಈ ಮಹಾಸ್ಪರ್ಶವಿತ್ತು. ಆದರೆ ಆಕೆಯ ದೀಕ್ಷೆಯಲ್ಲಿ ಅನಂತ ಸಹನೆ ಇತ್ತು ; ಯುಗಯುಗದ ನೋಂಪಿಯ ಕಂಪಿತ್ತು. ತಂದೆಯ, ಅವನ ಬಳಗದ, ನಿಕಟ ಸಾನ್ನಿಧ್ಯದಿಂದ ವಂಚಿತನಾದ ನಾನು, ನನ್ನ ತಾಯಿ, ತಾಯಿಯ ತಾಯಿ, ಆಕೆಯ ತಾಯಿ ಇವರ ಪ್ರತ್ಯಕ್ಷ ಚಾರಿತ್ರ್ಯದಲ್ಲಿ ಪೌರುಷವನ್ನು ಕಂಡೆ'[೧೩] ಎಂದು ಹೇಳಿದ್ದಾರೆ. ಅವರು 'ನನ್ನ ಭಾವನೆಯಲ್ಲಿ ಸ್ಫೂರ್ತಿಯ ಸೆಲೆ ತಾಯಿ' ಎಂದು ಹೇಳಿರುವುದಕ್ಕೆ ಅವರ ಕಾವ್ಯದಲ್ಲಿ ಹರಿದ 'ಅಂಬಿಕಾತನಯದತ್ತ' ಚಿಂತನೆಯೇ ಸಾಕ್ಷಿಯಾಗಿದೆ.

ಬೇಂದ್ರೆಯವರ ದೇಸಿ ಚಿಂತನೆಯ ಜಾನಪದ ನಂಬಿಕೆ, ಮಾತೃತತ್ವ ಪುರಾಣಕಲ್ಪನೆಯ ಮಿಥ್ ಆಗಿದೆ. ಅವರ ಶಿಷ್ಟಕಾವ್ಯ ಪ್ರಯೋಗ, ತರ್ಕಬದ್ಧ ವಿಚಾರಸರಣಿ, ತಾತ್ವಿಕ ಶೋಧವು ಆಳ ಅಧ್ಯಯನ ಹಾಗೂ ಪರಂಪರಾಗತ ಪಾಂಡಿತ್ಯದ ಫಲವಾಗಿದೆ. ತಂದೆ ಮತ್ತು ಅವರ ಸಂಬಂಧಿಗಳಿಂದ ವಂಚಿತವಾದ ಬಾಲ್ಯವಾದರೂ ಅದು ಶಿಷ್ಟಪರಂಪರೆಗೆ ಹೊಂದಿದ್ದ ಬಂಧ. ಅವರ ಜೀವಕೋಶದಲ್ಲಿ ಸಂಸ್ಕೃತ, ಛಂದಸ್ಸು, ತಾತ್ವಿಕ ಚಿಂತನೆ ಒಳಸೆಲೆಯಾಗಿ ಹರಿಯುತ್ತಿತ್ತು. ಆದ ಕಾರಣದಿಂದ ಅವರು ದೇಸಿ ಮತ್ತು ಮಾರ್ಗವನ್ನು ಹೆಗಲೆಣೆಯಾಗಿ ಕಾವ್ಯದಲ್ಲಿ ಹೆಣೆಯಲು ಸಾಧ್ಯವಾಯಿತು. ಎಲ್ಲ ದ್ವಂದ್ವ, ವೈರುಧ್ಯ, ವಿಷಮತೆಗಳನ್ನು ಎದುರಿಸಿ ಸಮರಸಭಾವಕ್ಕೆ ಸಾಗಲು ಸಾಧ್ಯವಾಯಿತು. ಅವರ ಸಮರಸತತ್ವವೆಂಬುದು ಜೀವನದಲ್ಲಿ ಕಂಡು ಅನುಭವಿಸಿದ ನೋವು-ಸಾವು, ಬೆಳಕು-ಕತ್ತಲು, ಸಿರಿತನ-ಬಡತನ, ಪ್ರೀತಿಗಳ ಮಂಥನದಿಂದ ಹೊರಬಂದ ಕಾವ್ಯಾನುಭವ.

■ ■

೧೩ ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು.-೫೦

# ಕ್ರೀಡೆಗಳು ರೂಪಿಸಿದ ಬದುಕು

ಕ್ರೀಡೆಗಳು ರೂಪಿಸಿದ ಬದುಕು

**ಬೇಂ**ದ್ರೆಯವರು ಧಾರವಾಡದ ಮಂಗಳವಾರ ಪೇಟೆಯ ಪೋತನೀಸ ಓಣಿಯ ಗುಣಾರಿಯವರ ಮನೆಯಲ್ಲಿ ೧೮೯೬ ಜನವರಿ ೩೧ರಂದು ಜನಿಸಿದರು. ಕಾಮನಕಟ್ಟೆ ಅವರ ಆಡುಂಬೋಲವಾಗಿತ್ತು. ಅವರು ಅಗ್ರಹಾರದ ಕಟ್ಟು ಕಟ್ಟಳೆಯ ಉಸಿರುಗಟ್ಟುವಿಕೆಗೆ ಒಳಗಾಗದೆ ಕಾಮನಕಟ್ಟೆಯ ಎಲ್ಲಾ ಜಾತಿ, ಧರ್ಮ, ಪಂಥ, ಪಂಗಡಗಳ ಸಮುದಾಯದಲ್ಲಿ ಉಸಿರಾಡಿದರು. ಹಾಗಾಗಿ ಅವರ ಸಂವೇದನಾಶೀಲತೆ ವಿಶ್ವವಿಶಾಲ ನೆಲೆಯದಾಗಿದೆ. ಜಾನಪದ ಪರಿಸರದ ಧಾರವಾಡದಲ್ಲಿ ಹುಟ್ಟಿದುದರಿಂದ ಅವರಿಗೆ ಎಳವೆಯಲ್ಲಿಯೇ ಜನಪದ ಹಾಡು, ಭಜನೆ, ಕಿವಿಯ ಮೇಲೆ ಬಿದ್ದು, ಆ ನಾದಲಯಕ್ಕೆ ಆಕರ್ಷಿತರಾಗಿದ್ದರು. ಅದು ಅವರ ಭಾವಕೋಶದ ಆಹ್ಲಾದವಾಯಿತು. ಅದನ್ನು ಅವರು ಹೀಗೆ ಹೇಳಿಕೊಂಡಿದ್ದಾರೆ: 'ಕನ್ನಡ ಜಾನಪದ ಪ್ರಕೃತಿಯ ಪ್ರವೇಶವೂ ಆವೇಶವೂ ಎಂದು ನನ್ನಲ್ಲಿ ಗೂಡು ಮಾಡಿಕೊಂಡಿತೋ ನಾನು ಹೇಳಲಾರೆ. ತಾಯಿ ಅಜ್ಜಿ ಬೀಸುವಾಗ ಹೇಳುವ ಪದಗಳಿಂದ, ಬೆಳಗುಜಾವದಲ್ಲಿ ನನಗೆ ಎಚ್ಚರಿಕೆಗಿಂತ ನಿದ್ದೆ ಹೆಚ್ಚು. ಏನು ಆ ಅವಸ್ಥೆಯಲ್ಲಿಯೇ ಪರಿಣಾಮ ಹೆಚ್ಚೋ? ದಾಸರ ಗೋವಿಂದಪ್ಪ ಮೃದು ತಾಳ ಭಜನೆಯೊಡನೆ "ಗರುಡಾssನೇರಿ ಬರುವಾssl ಇವನ್ಯಾರಮ್ಮಯ್ಯಾ॥" ಎಂದೊ, "ಜಯಪಾಂಡುರಂಗಾss । ಏನು ಮಾಡಿದೀ ಮಾನಭಂಗಾ॥" ಎಂದೊ, ರಾಗ ಎಳೆದಾಗ ನನಗೆ ಚುಕ್ಕು ಬಡೆದು ಮಲಗಿಸಿದಂತಾಗುತ್ತಿತ್ತು. "ನಿಂಬಿಯ ಮರ ಹುಟ್ಟಿ ನಿಂಗಕ್ಕೆ ನೆರಳಾಗಿ ಬಂದ ಜಂಗಮಕs ಬಸsವಯ್ಯ ಸೂವಿ ॥" ಎಂದು ಬಾಲಬಸವರ ಹಾಡು ಕಿವಿಗೆ ಬೀಳುತ್ತಲೇ ನಮ್ಮ ಕಾಲು ಕೇಳದೆ ಕಿತ್ತಿ, ಅವರಿದ್ದಲ್ಲಿಗೆ ಹೋಗಿ ಅವರ ಸಾಕ್ಷಾತ್ಕಾರವಾದಾಗ ಈ ಕಣ್ಣಿಗೆ ತೃಪ್ತಿ. ಗೊಲ್ಲರು, ಕವಲೆತ್ತಿನವರು, ದುರ್ಗಮುರ್ಗಿಗಳು - ಎಂಥ "ತಾನಾ ತಂದಾನಾ" ಇದ್ದರೂ ಕಿವಿಗೆ ಔತಣವೆನಿಸುತ್ತಿತ್ತು.'[೧]

---

೧ ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. ೫೨

ಬೇಂದ್ರೆಯವರು ಧಾರವಾಡದ ನೆಲದ ಪುಟಿಯುವ ಚೇತನದ ಬಾಲಕನಾಗಿ ಕುತೂಹಲದಿಂದ ಎಲ್ಲವನ್ನೂ ನೋಡುತ್ತ, ತನ್ನ ಓರಗೆಯ ಹುಡುಗರೊಡನೆ ಆಡುತ್ತ, ಸುತ್ತಮುತ್ತಲ ಜನ ಜೀವನವನ್ನು ಗಮನಿಸುತ್ತ, ಅದರ ಎಲ್ಲ ಒಳಹೊರ ಭಾವದ ಬದುಕನ್ನು ತನ್ನದಾಗಿಸಿಕೊಳ್ಳುತ್ತ ಬೆಳೆದವರು. ಅವರ ಬಾಲ್ಯದ ಆಸಕ್ತಿ ಕುರಿತು ವಾಮನ ಬೇಂದ್ರೆಯವರು 'ಶಾಲೆಗೆ ಒಯ್ಯುವ ಪಾಟೀಗಂಟಿನಲ್ಲಿ ಪುಸ್ತಕದ ಜೊತೆಗೆ ಚಾವಂಗ, ಕುಂಟ್ಗಲಪಿ, ಬುದ್ಧಿ ಬಳ, ಗಂಜೀಪು, ಹುಲಿಹಳ್ಳು ಮೊದಲಾದ ಆಟದ ಸಾಮಾನು ಹೆಚ್ಚಾಗಿರಬೇಕು. ಶಾಲೆಗೆ ಹೋಗುವ ಹಾದಿಯಲ್ಲಿ ಮಂಗಾಟ, ಕರಡಿ ಕುಣಿತ, ಕೌಲೆತ್ತು, ಕಸರತ್ತು ನಡೆದಿದ್ದರೆ ಅದನ್ನು ನೋಡುವುದರಲ್ಲಿ ಬೇಂದ್ರೆಯವರ ಮನಸ್ಸು ಮೈಮರೆಯುತ್ತಿತ್ತು. ಶಾಲೆ ಬಿಡುವ ಹೊತ್ತಿಗೆ ಶಾಲೆಯ ಕಡೆಗೆ ಬೇಂದ್ರೆಯವರ ಸವಾರಿ ಹೊರಟಿದ್ದನ್ನು ಕಂಡು, ಅವರ ಬಾಲ್ಯ ಸ್ನೇಹಿತರು ಚೇಷ್ಟೆ ಮಾಡುತ್ತಿದ್ದರು. ಶಾಲೆಯ ಓದಿಗಿಂತ ತನ್ನ ಸುತ್ತಮುತ್ತಲಿನ ಜೀವನ-ನಿರೀಕ್ಷಣೆಯಲ್ಲಿ ಬೇಂದ್ರೆಯವರ ಮನಸ್ಸು ತೊಡಗಿರುತ್ತಿತ್ತಂತೆ'[೨] ಎಂದು ವರ್ಣಿಸಿದ್ದಾರೆ.

ಬೇಂದ್ರೆಯವರು ವಾಮನ ಆಕಾರದಲ್ಲಿದ್ದರೂ, ವ್ಯಕ್ತಿ ಪರಿಪುಷ್ಟವಾದ (ವ್ಯಾಯಮ, ಆಟ, ಕುಸ್ತಿ) ದೈಹಿಕ ಮತ್ತು ಮಾನಸಿಕ ಆರೋಗ್ಯವನ್ನು ಚಿಕ್ಕಂದಿನಿಂದಲೇ ರೂಢಿಸಿಕೊಂಡಿದ್ದರು. ಅಜ್ಜಿ, ತಾಯಿ, ಶಾಲೆ ಹಾಗೂ ಸಮಾಜದಿಂದ ಮಾನಸಿಕ ಸದೃಢತೆ ಪಡೆದಂತೆ, ವಿವಿಧ ಆಟಗಳಿಂದ- ತಾಲೀಮುಖಾನೆಯಿಂದ ದೈಹಿಕವಾಗಿ ಗಟ್ಟಿ ಆಳಾಗಿದ್ದರು. 'A sound mind in a sound body' ಎಂಬುದನ್ನು ಅರಿತ ಸರ್ವರೀತಿಯ ಪರಿಪೂರ್ಣ ಬಾಲ್ಯವನ್ನು ತಮ್ಮದಾಗಿಸಿಕೊಂಡಿದ್ದರು. ಅವರು ಐದನೆಯ ಇಯತ್ತೆ ಓದುವಾಗ ಎಡ್ವರ್ಡ್‌ಪಾರ್ಕ್ (ಇಂದಿನ ಆಝಾದ ಉಪವನ)ದಲ್ಲಿ ಎಡ್ವರ್ಡ ಬಾದಶಹನ ಉತ್ಸವದಲ್ಲಿ ನಡೆದ ಘಟನೆ ಅವರ ತಾಲೀಮುಖಾನೆಯ ಪರಿಣತ ಫಲಿತಾಂಶವನ್ನು ಬಿತ್ತರಿಸುತ್ತದೆ. 'ಆ ಉತ್ಸವದಲ್ಲಿ ನಾನು ಇಬ್ಬರೊಡನೆ ಕುಸ್ತಿಯಾಡಿ ಬೀಳಲಿಲ್ಲ ; ಒಬ್ಬಿಬ್ಬರನ್ನು ಕೆಡವಿದೆ. ಬಾಳೆಹಣ್ಣು ಬತ್ತಾಸ ಇನಾಮವಾಗಿ ದೊರಕಿಸಿದೆ. ಆಗಿನ ನನ್ನ ಚೂಟಿಯನ್ನು ನೋಡಿ ಮಹಮ್ಮದೀಯ ತಾಲೀಮು ಮಾಸ್ತರರೊಬ್ಬ (ಅವರ ಮನೆ ತುಪ್ಪದವರ ಓಣಿಯಲ್ಲಿತ್ತು), ನನ್ನ ಕಡೆಯಿಂದ ಚಮತ್ಕಾರದ ಒಂದೆರಡು ಆಟಗಳನ್ನು ಆಡಿಸುವ ರೂಢಿ ಇಟ್ಟರು. ಸಾಲೆಯ ಕವಾಯತಿಗೆ ನಿಂತ ಸಾಲಿನಲ್ಲಿ ನನ್ನ ಮ್ಯಾಟ್ರಿಕ್ಕಿನ ವರೆಗೂ - ನಾನು ಕೊನೆಯಿಂದ ಮೊದಲ ನಂಬರಿನವನಾಗಿದ್ದೆ. ಅಷ್ಟು ಗಿಡ್ಡ ಕುಳ್ಳವಾಗಿದ್ದೆ. ವರ್ಷದಲ್ಲಿ ಮೂರು ನಾಲ್ಕು ಕಡೆಗೆ ತಮ್ಮ ತರಬೇತಿ ಪ್ರದರ್ಶನ ಮಾಡುವದಿದ್ದರೆ ನನ್ನ ಕಾರ್ಯಕ್ರಮ ಇದ್ದೇ ಇರುತ್ತಿತ್ತು. ಹುಡುಗರಲ್ಲಿ ಒಂದು ವಿಧವಾದ ಖ್ಯಾತಿಯನ್ನು ನನಗೆ ತಂದು ಕೊಡಲು ಇದು ಕಾರಣ[೩]'.

---

೨ ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ, ಶ್ರೀಮಾತಾ ಪ್ರಕಾಶನ, ಧಾರವಾಡ, ೧೯೬೮, ಪು-೧೪, ೧೫

## ಕಾಮನಕಟ್ಟೆ

ಬೇಂದ್ರೆಯವರು ಕಾಮನಕಟ್ಟೆಯ ಸಮುದಾಯದ ಬಾಲಕನಾಗಿ ಬೆಳೆದು ಜನಪದರ ನುಡಿಯನ್ನು ಕಾವ್ಯವಾಗಿಸಿದ್ದಾರೆ. 'ಪಗಡೆಯಾಟದ ಪಟ್ಟದಂತೆ ನಾಲ್ಕೂ ದಿಕ್ಕಿಗೆ ಚಾಚಿಕೊಂಡ ಕಾಮನಕಟ್ಟೆಯ ಆ ಕೂಟ, ಅಲ್ಲಿಯ ಎಲ್ಲದಕ್ಕೂ ಆಶ್ರಯ ಸ್ಥಾನವಾಗಿತ್ತು. ವರ್ಷಕ್ಕೆ ನಾಲ್ಕು ಸಲವಾದರೂ ಆಗುವ ದೊಡ್ಡಾಟ, ಬಯಲಾಟ, ಕಾಮನಪಬ್ಬ, ಅಲಾಬಿಯ ಮೆರವಣಿಗೆ, ಶ್ರಾವಣ ಮಾಸದೊಳಗಿನ ಅತಿ ವಿಜೃಂಭಣೆಯ ಸೋಗಿನ ಪರಂಪರೆ, ಜಂಗು, ಪೆಜ್ಜೆ ಮೇಳ, ಸನಾದಿಯವರ ಉತ್ಸಾಹದ ವಿಲಾಸ, ಹಬ್ಬ ಹರಿದಿನಗಳಲ್ಲಿ ಕಂಡು ಬರುವ ಉತ್ಸಾಹದ ಉಬ್ಬು, ಹುತ್ತಪ್ಪನ ಕೆಸರಾಟ, ಕಾಮನ ಓಕಳಿ, ಸಂಕ್ರಾಂತಿಯ ಕುಸುರೆಳ್ಳು, ದಸರೆಯ ಬಂಗಾರ, ದೀವಳಿಗೆಯ ಆರತಿ ಎಲ್ಲವನ್ನೂ ಸಾಕ್ಷಿಯಾಗಿ ನೋಡುತ್ತಿತ್ತು.

'ಎಲ್ಲ ಮನೆಯ ಹಿರಿಯರಿಗೂ ಕೆಲ ಹುಡುಗರು ಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಎಲ್ಲ ಮನೆಯ ಹೆಂಗಳೆಯರಿಗೂ ಎಲ್ಲ ಓಣಿಯ ಹುಡುಗರು ತಮ್ಮವಾಗಿ ತೋರುತ್ತಿದ್ದವು. ಕಾರ್ತಿಕಮಾಸದಲ್ಲಿ ಸುತ್ತು ಹತ್ತು ಓಣಿಯ ಹಾಳುಗುಡಿಗಳಲ್ಲಿಯೂ ಪೂಜೆಯ ಸಂಭ್ರಮವಿರುತ್ತಿತ್ತು. ಮಂತ್ರ, ಭಜನೆ, ಜಾಂಗಟೆ, ಶಂಖ, ಎಲ್ಲ ಸೇವೆ ಮಾಡುವದರಲ್ಲಿ ಬಾಲಕರ ಕಪಿಸೈನ್ಯಕ್ಕೆ ಅನಿರ್ಬಂಧ ಸ್ವಾತಂತ್ರ್ಯವಿತ್ತು. ಜಂಗಿನ ಪದಗಳು, ಜಂಗಮರ ಹಾಡುಗಳು, ವೆಂಕಟೇಶ ಪಾರಿಜಾತದ ಆಲಾಪನೆ, ಅರಳೀಕೋಟೆ ಹಾಕಿದ ಹೆಣ್ಣು ಮಕ್ಕಳ ಡೌಲು ಆಢ್ಯತೆ, ರಥದ ಎಳದಾಟದ ಸಂಭ್ರಮ, ಒಂದೇ ಎರಡೇ. ಆ ಕಾಲಕ್ಕೆ ಋತುಮಾನ ಚಿತ್ರ ವಿಚಿತ್ರ ವಿಲಾಸದಿಂದ ಕುಣಿಯುತ್ತಿತ್ತು.'[೪] ಎಂದು ಬೇಂದ್ರೆಯವರು ಕಾಮನಕಟ್ಟೆಯನ್ನು ಬಣ್ಣಿಸಿದ್ದಾರೆ. ತುಂಟನೂ, ಕುತೂಹಲಿಯೂ, ಸೂಕ್ಷ್ಮದರ್ಶಿಯೂ, ಚಿಕಿತ್ಸಕ ಬುದ್ಧಿಯವನೂ ಆದ ಬೇಂದ್ರೆ ಆ ಪರಿಸರದ ಬಾಲಕನಾಗಿ ಬೆಳೆದು ಆ ನೆಲದ ಸೊಗಡನ್ನು ಹೀರಿ ಪುಷ್ಟಿಗೊಂಡಿದ್ದರು.

## ಕಂಡ ಸಂಗತಿ ಉಂಡ ಪದಾರ್ಥವೊ

'ಬಯಲು ಆಲಯದೊಳಗೊ । ಆಲಯವು ಬಯಲೊಳಗೊ' ಎಂಬಂತೆ ಪ್ರತ್ಯೇಕಿಸಲಾಗದೆ ಒಂದೇ ಭಾವದಲ್ಲಿ ಕುಟುಂಬ ಹಾಗೂ ಸಮುದಾಯವಿದ್ದರೆ, ಆ ಜನಾಂಗ ಪ್ರಗತಿಯತ್ತ ಸಾಗುತ್ತದೆ. ಅಲ್ಲಿ ಸುಖ, ಶಾಂತಿ ನೆಮ್ಮದಿ ನೆಲಸಿರುತ್ತದೆ. ಧಾರವಾಡದ ಅಂತಹ ಉತ್ತಮ ಪರಿಸರದಲ್ಲಿ ಬೇಂದ್ರೆಯವರ ಕುಟುಂಬವಿತ್ತು. ಬೇಂದ್ರೆಯವರಿಗೆ ಪರಿಚಯವಿಲ್ಲದ ಜಾತಿ

---

೩ ದ.ರಾ. ಬೇಂದ್ರೆ, ಆತ್ಮಕಥನ, ಪುಟಬಂಗಾರ - ಸಂಪುಟ ಐದು - ಶ್ರಾವಣ ಪ್ರತಿಭೆ. ಪೂರ್ವೋಕ್ತ - ಪು - ೪೧೫

೪ ದ.ರಾ. ಬೇಂದ್ರೆ, ಆತ್ಮಕಥನ, ಪುಟಬಂಗಾರ - ಸಂಪುಟ ಐದು - ಶ್ರಾವಣ ಪ್ರತಿಭೆ. ಪೂರ್ವೋಕ್ತ - ಪು - ೪೨೩

ಜನಾಂಗವಿರಲಿಲ್ಲ. ಒಕ್ಕಲುತನ, ಕುಂಬಾರಿಕೆ, ಕಮ್ಮಾರಿಕೆ, ಬಡಗಿ, ನೇಕಾರ ಎಲ್ಲ ಕಸಬುಗಳ ಎಳೆಯ ಗೆಳೆಯರೊಡನೆ ಒಂದಾಗಿ ಆ ಕಸುಬಿನ ಒಳಮರ್ಮ ಅರಿತು ಅವರು ಬೆಳೆದರು. 'ಬೇಂದ್ರೆಯವರು ವಾಸಿಸುತ್ತಿದ್ದ ಕಾಮನ ಕಟ್ಟೆಯ ಪರಿಸರದಲ್ಲಿ ಸುತ್ತು ಮುತ್ತು ಅನೇಕ ವೇಶ್ಯೆಯರು ಮಾನದಿಂದ ಬಾಳುತ್ತಿದ್ದರು. ಅಂಬಕ್ಕನವರ ಕಡೆಗೆ ಕೆಲವು ವೇಶ್ಯೆಯರು ಪುರಾಣ ಓದಿಸಿ ಕೇಳಲು ಬರುತ್ತಿದ್ದರು. ಆ ವೇಶ್ಯೆಯರು ದೇವರಲ್ಲಿ, ಪೂಜೆ-ಪುನಸ್ಕಾರಗಳಲ್ಲಿ ಭಕ್ತಿ ಭಾವ ಉಳ್ಳವರು. ಇಂಥವರ ಮನೆಗೆ ಬೇಂದ್ರೆಯವರು ಚಿಕ್ಕವರಿರುವಾಗ ಪೂಜೆಗೆ ಹೋಗಿದ್ದುಂಟು'[೫] ಎಂದು ವಾಮನ ಬೇಂದ್ರೆ ತಿಳಿಸಿದ್ದಾರೆ. ಅವರ ಮುಕ್ತಬಾಲ್ಯ ಸಮಾಜದ ಎಲ್ಲ ಒಳ ಹೊರಗನ್ನು ತಿಳಿಯುತ್ತಾ, ಅದರ ಕಾರಣಗಳನ್ನು ಆಲೋಚಿಸಿತು. ಲೋಕಾನುಭೂತಿ ಸ್ವಾನುಭೂತಿಯಾಯಿತು. ಅವರು ಬೆಳೆದಂತೆ ಅದು ಮಾಗಿ, ಕಾವ್ಯವಾಗಿ ಹೊಮ್ಮಿ, ಉದ್ಭವ ವಿಭೂತಿಯಾಯಿತು.

ಬೇಂದ್ರೆಯವರು ವಾಸಿಸುತ್ತಿದ್ದ ಕಾಮನಕಟ್ಟೆಯಲ್ಲಿ ಸಾಹಿತ್ಯಕ, ರಾಷ್ಟ್ರೀಯ ಮತ್ತು ಸಾಂಸ್ಕೃತಿಕ ಚಿಂತನೆಯನ್ನು ಹೊತ್ತ ಶಾಂತಕವಿ, ಕಾವ್ಯಾನಂದ (ನರಸಿಂಹಾಚಾರ್ಯ) ಪುಣೇಕರ, ವೆಂಕಟ ರಂಗೋ ಕಟ್ಟಿ, ಗರಗ ಸಿದ್ಧಲಿಂಗಪ್ಪ, ಸೋಂಡಿ ಲಕ್ಷಾಧೀಶ, ರಾವಸಾಹೇಬ ಮಾಳಾಪುರ, ನಾ. ಶ್ರೀ. ರಾಜಪುರೋಹಿತ, ಕಡಪಾ ರಾಘವೇಂದ್ರರಾವ್, ನರಗುಂದಕರ ವಕೀಲ, ಮಧ್ವಾಚಾರ್ಯ ಕಟ್ಟಿ ಮಾಸ್ತರ ಅವರು ವಾಸಿಸುತ್ತಿದ್ದರು. ಅಲ್ಲಿಯೆ ವಿಕ್ಟೋರಿಯಾ ಹೈಸ್ಕೂಲು, ನೇಟಿವ್ ಜನರಲ್ ಲೈಬ್ರರಿ, ವಿದ್ಯಾವರ್ಧಕ ಸಂಘ, ಎರಡು ಥೇಟರುಗಳು, ಛಾಪಖಾನೆಗಳು ಇದ್ದು, ಅದು ಆಲೂರರ ರಾಷ್ಟ್ರೀಯ ಚಳವಳಿಯ ಕೇಂದ್ರವಾಗಿತ್ತು. ಅದನ್ನು ಅವರ ಶಿಕ್ಷಕರಾದ ನಾ. ಶ್ರೀ. ರಾಜಪುರೋಹಿತರು ಹೀಗೆ ಹೇಳಿದ್ದಾರೆ : 'ವಂಗಭಂಗ ಚಳುವಳಿಯಲ್ಲಿ ಶ್ರೀ ಆಲೂರ ವೆಂಕಟರಾಯರು ಮತ್ತು ನಾನು ಸೇರಿ 'ಕರ್ನಾಟಕ ನೂತನ ವಿದ್ಯಾಲಯ' ಎಂಬುದೊಂದು ರಾಷ್ಟ್ರೀಯ ಶಾಲೆಯನ್ನು ಸ್ಥಾಪಿಸಿ, ರಾಷ್ಟ್ರೀಯ ಶಿಕ್ಷಣದ ಕಾರ್ಯವನ್ನು ಕೈಕೊಂಡಿದ್ದೆವು. ಈ ರಾಷ್ಟ್ರೀಯ ವಿದ್ಯಾಲಯವು ಶ್ರೀ ಬೇಂದ್ರೆ ಅವರ ಮನೆಯ ಎದುರಿನಲ್ಲಿಯೇ ಇದ್ದಿತು. ಈ ರಾಷ್ಟ್ರೀಯ ಶಿಕ್ಷಣಸಂಸ್ಥೆಗೆ ಅತಿರಥಿ ಮಹಾರಥಿಗಳಾದ ರಾಷ್ಟ್ರೀಯ ಮುಖಂಡರು ಮೇಲಿಂದ ಮೇಲೆ ಭೇಟಿಯನ್ನು ಕೊಡುತ್ತಿದ್ದರು. ಈ ಉಜ್ವಲವಾದ ರಾಷ್ಟ್ರೀಯ ವಾತಾವರಣವು, ಬಾಲಕರಾದ ಬೇಂದ್ರೆಯವರ ಕೋಮಲವಾದ ಅಂತಃಕರಣದ ಮೇಲೆ ಸಂಸ್ಕಾರವನ್ನುಂಟು ಮಾಡದೆ ಬಿಡಲಿಲ್ಲ.'[೬] ಅಂತಹ ಪರಿಸರದಲ್ಲಿ ಬೆಳೆದ ಬೇಂದ್ರೆಯವರಿಗೆ ಸಾಹಿತ್ಯ, ಸಂಸ್ಕೃತಿ, ರಾಷ್ಟ್ರೀಯತೆ, ಕನ್ನಡ ಭಾಷಾಭಿಮಾನ ಸಹಜವಾಗಿ ಜೀವದ್ರವ್ಯವಾದವು. ಅವು ಅವರನ್ನು ರಾಷ್ಟ್ರಪ್ರೇಮಿಯಾಗಿ, ಕವಿಯಾಗಿ ರೂಪಿಸಿದವು.

---

೫ ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ, ವಿಶಾಖ ಪ್ರಕಾಶನ, ಅಂಬಿಕಾತನಯದತ್ತ ವೇದಿಕೆ, ಹುಬ್ಬಳ್ಳಿ, ೧೯೯೮, ಪು-೧೨

೬. ನಾ. ಶ್ರೀ. ರಾಜಪುರೋಹಿತ, ಮುಮುಕ್ಷುಬೇಂದ್ರೆ, ಚುಳಕಿ ಗೋವಿಂದರಾಯರು (ಸಂ.), ಕವಿವರ ಬೇಂದ್ರೆ, ಪೂರ್ವೋಕ್ತ, ಪು. ೯೦, ೯೧

ಅವರಲ್ಲಿ ಧಾರ್ಮಿಕ ನಂಬಿಕೆ ಮತ್ತು ಕಾವ್ಯಚಿಂತನೆ ಬೆಳೆಯಲು ತಾಯಿ ಪ್ರೇರಕಳಾಗಿದ್ದಳು. ಆಕೆಯು ಮಗನಿಗೆ ಧಾರ್ಮಿಕ ಗ್ರಂಥಗಳನ್ನು ಓದಿ ಹೇಳುತ್ತ, ಅದನ್ನು ಕುಳಿತು ಓದುವಂತೆ ಮಾಡಿದ್ದರು. ಆ ರೀತಿಯ ಮನೆಯ ಪರಿಸರದೊಂದಿಗೆ ಅವರಿಗೆ ಪುಸ್ತಕಗಳನ್ನೋದುವ ಆಸಕ್ತಿ ಉಂಟಾಯಿತು. ೧೯೧೨ರಲ್ಲಿ ಕಾಮನಕಟ್ಟೆಯಲ್ಲಿದ್ದ ಶ್ರೇಷ್ಠವಾಚನಾಲಯವಾದ 'ಭಾರತ ಪುಸ್ತಕಾಲಯ'ದ ಎಲ್ಲ ಪುಸ್ತಕಗಳನ್ನು ಓದಿ, ತನ್ಮೂಲಕ ಓದುವ ಹವ್ಯಾಸ ಜೀವನದ ಭಾಗವಾಗುವಂತೆ ಬೇಂದ್ರೆ ಬೆಳೆದರು. ತಾಯಿಯ ಕಾವ್ಯಾಸಕ್ತಿ ಮತ್ತು ಆಧ್ಯಾತ್ಮಿಕ ಬಾಳು ಬಾಲಮನವನ್ನು ಆತ್ಮೀಯವಾಗಿ ಪ್ರವೇಶಿಸಿತು. ನೈತಿಕತೆಯ ಕಲ್ಪನೆ ಮೂಡಿಸಿತು. ಮಾತೃಪ್ರೇಮದ ಪರಿಕಲ್ಪನೆ ಬೇಂದ್ರೆಕಾವ್ಯದ ಪ್ರತೀಕವಾಯಿತು. ಆ ಭಕ್ತಿ ಮತ್ತು ಅಧ್ಯಾತ್ಮದ ಪರಿಸರ, ಅವರ ಜೀವನ ಮತ್ತು ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಅವರ ಕಾವ್ಯಲಹರಿಯಲ್ಲಿ ಬೆಣ್ಣೆಯಾಗಿ ತೇಲಿತು.

## ಉಡಾಳನ ಸ್ವಶಿಸ್ತು

ಬೇಂದ್ರೆಯವರು ಧಾರವಾಡದ ಪರಿಸರದಲ್ಲಿ ಪಡೆದ ಶಿಕ್ಷಣವನ್ನು ಶೈಕ್ಷಣಿಕ ಮತ್ತು ಸಾಮುದಾಯಿಕ ಎಂದು ಎರಡು ವಿಧವಾಗಿ ವಿಂಗಡಿಸಬಹುದು. ಶೈಕ್ಷಣಿಕವಾಗಿ ಬಾಲಕ ಬೇಂದ್ರೆಯವರ ವಿದ್ಯಾಭ್ಯಾಸದ ಪ್ರಗತಿ ಉತ್ತಮವಾಗಿತ್ತು. ಆದರೂ ಅವರು ಮ್ಯಾಟ್ರಿಕ್ ವಿದ್ಯಾಭ್ಯಾಸ ಪಡೆಯುವ ಹೊತ್ತಿಗೆ ಶಿಕ್ಷಕರ ದೃಷ್ಟಿಯಲ್ಲಿ ಉಡಾಳನಾಗಿದ್ದರು. ಆದರೆ ಆಂತರಿಕವಾಗಿ ಸ್ವಶಿಸ್ತನ್ನು ರೂಢಿಸಿಕೊಳ್ಳುವ ಮನೋಸ್ಥೈರ್ಯದವರಾಗಿದ್ದರು. ಅವರು ತನ್ನನ್ನು ದೂಷಿಸುತ್ತಿದ್ದ ಶಿಕ್ಷಕರನ್ನು ಗೆಲ್ಲಲು ಕಾವ್ಯದ ಮೊರೆ ಹೋಗುತ್ತಿದ್ದರು. ಅವರು 'ನಾನು, ಒಂದು ಕಲ್ಪನಾ ವಿಲಾಸವನ್ನು ಬರೆದೆ. ಶಾಲೆಯಲ್ಲಿ ಉಡಾಳ ಎನಿಸಿದ್ದ ನಾನು, ವಿವೇಕಾನಂದ ಸ್ವಾಮಿಗಳಂತೆ ಸಂನ್ಯಾಸಿಯಾಗಿ, ದೇಶ ವಿದೇಶಗಳನ್ನು ಸುತ್ತಿ, ಅಸೀಮಕೀರ್ತಿಯನ್ನು ಸಂಪಾದಿಸಿ ಭಾರತಕ್ಕೆ ಮರಳಿ, ಒಂದು ದಿನ ಅಹಮದಾಬಾದಿನಲ್ಲಿ ಭಾಷಣಕೊಡುತ್ತಿದ್ದಾಗ, ಶ್ರೋತೃ ವೃಂದದಲ್ಲಿ ಗುತ್ತಲ ರಂಗಾಚಾರ್ಯರು ಬೆರಗಾದರು ಎಂಬುದು ಅದರ ಸಾರವಾಗಿತ್ತು'[೭] ಎಂದು ತನ್ನನ್ನು ಉಡಾಳ ಎಂದ ಗುರುಗಳನ್ನು ಬೆರಗುಗೊಳಿಸಬೇಕೆಂಬ ಉನ್ನತ ಚಿಂತನೆ ಮೂಡಿದ್ದನ್ನು ತಿಳಿಸಿದ್ದಾರೆ. ಈ ಕಾರಣದಿಂದ ಮತ್ತು ತಮ್ಮನಾದ ರಾಘುವಿನ ಸಾವಿನ ಸಮಯದಲ್ಲಿ ಧೈರ್ಯದಿಂದ ಅಜ್ಜಿಯ ಆಜ್ಞೆ ಪಾಲಿಸಿದ ಬೇಂದ್ರೆಯವರಲ್ಲಿ ಶಿಸ್ತು ಎಂಬುದು ಶಾಲಾ ಕವಾಯತಿನ ಶಿಸ್ತಾಗದೆ, ಕುದುರೆಗೆ ಹಾಕಿದ ಕಣ್ಣು ಪಟ್ಟಿಯಂತಾಗದೆ, ಮಾನವನ ಬೆಳವಣಿಗೆಯ ಆಂತರಿಕ ಶಿಸ್ತಾಗಿತ್ತು ಎಂದು ಹೇಳಬಹುದು.

ಅವರ ಶಾಲಾ ಶಿಕ್ಷಣ ಮತ್ತು ಅವರ ಅಂದಿನ ಗುರುಗಳು ಅವರನ್ನು ರೂಪಿಸಿದ ರೀತಿ

---

೭ ದ.ರಾ. ಬೇಂದ್ರೆ, 'ಸನ್ನ ಸಾ ಕಂಡಂತೆ', ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ, ಶ್ರೀಮಾತಾ ಪ್ರಕಾಶನ, ಧಾರವಾಡ, ೧೯೮೮, ಪು. ೭೭

ಅಚ್ಚರಿಯನ್ನುಂಟು ಮಾಡುತ್ತದೆ. ಇಂಗ್ಲೀಷ್ ಮತ್ತು ಸಂಸ್ಕೃತವನ್ನು ಕೇವಲ ಪಠ್ಯವಾಗಿ ಬೋಧಿಸದೆ ಅದನ್ನು ನಾಟಕವಾಗಿ ಪ್ರಯೋಗಿಸಿ, ಕಾವ್ಯವಾಚನ ಸ್ಪರ್ಧೆಗಳನ್ನು ನಡೆಸಿ, ಅದು ಬಾಲಕರ ಮನಸ್ಸಿನಲ್ಲಿ ಸದಾ ಉಳಿಯುವಂತೆ ಮಾಡುತ್ತಿದ್ದರು. ಶಿಕ್ಷಕರ ಆಸಕ್ತಿ ವಿದ್ಯಾರ್ಥಿಯನ್ನು ತನಗರಿವಿಲ್ಲದಂತೆ ವಿಷಯದ ಒಳಹೊಗುವಂತೆ ಮಾಡುತ್ತಿತ್ತು. ಅಂತಹ ಶೈಕ್ಷಣಿಕ ಪರಿಸರದಲ್ಲಿ ಕಾವ್ಯದ ಆಹ್ಲಾದ ಅವರ ಮನಸ್ಸನ್ನು ಸೇರಿ, ಅವರು ಕವಿಯಾಗಿ ರೂಪುಗೊಂಡರು. ಬೇಂದ್ರೆಯವರು ತಾವು ಪಡೆದ ಶಿಕ್ಷಣವನ್ನು ಕುರಿತು 'ಇಂಗ್ಲಿಷ್ ನಾಲ್ಕನೇ ಇಯತ್ತೆಯಲ್ಲಿ ನಾನು ಓದುತಿದ್ದ ಮೆಕಾಲೇನ ಹೊರೇಶಸ್' ಎಂಬ ಕವಿತೆ ಬಹಳ ಮನಸ್ಸು ಹಿಡಿಯಿತು. ತುಂಬ ಕಂಠಪಾಠವಾಗಿತ್ತು. ಇಂಗ್ಲಿಷ್ ಶಬ್ದ ವ್ಯುತ್ಪತ್ತಿಯನ್ನು ಆಗ ನಮಗೆ ಕಲಿಸುತ್ತಿದ್ದರು. ಅದು ನನ್ನ ಮೇಲೆ ಸ್ಥಾಯಿಯಾದ ಪ್ರಭಾವ ಬೀರಿತು. ಈ ವರ್ಗದಲ್ಲಿರುವಾಗಲೆ ಹುಯಿಲಗೋಳ ನಾರಾಯಣರಾಯರು ಸಂಸ್ಕೃತದ ಶಿಕ್ಷಕರಾಗಿ ಬಂದರು. ಐದನೆಯ ಇಯತ್ತೆಯಲ್ಲಿ ಇವರು ವರ್ಗದ ಶಿಕ್ಷಕರಾಗಿ ಲ್ಯಾಂಬನ 'Stories from Shakespeare' ಪಾಠ ಹೇಳಿದರು. 'Merchant of Venice' ನಾಟಕವನ್ನು ಗ್ಯಾದರಿಂಗಿನಲ್ಲಿ ಮಾಡಿಸಿದರು. ಅದರಲ್ಲಿ ನನ್ನ ಪಾತ್ರ, ಕೋರ್ಟಿನ ಕಾರಕೂನದಾದರೂ ಇಡೀ ನಾಟಕ ಕಂಠಪಾಠ ಬರುತ್ತಿತ್ತು. ಈ ವರ್ಷಗಳಲ್ಲಿಯೇ ವಿಕ್ಟೋರಿಯಾ ಹೈಸ್ಕೂಲಿನವರು 'ಶಾಕುಂತಲಾ', 'ವೇಣಿಸಂಹಾರ', 'ಮಹಾವೀರ ಚರಿತ' ಇತ್ಯಾದಿ ಸಂಸ್ಕೃತ ನಾಟಕಗಳನ್ನು ಬಹಳೇ ಯಶಸ್ವಿಯಾಗಿ ಆಡಿತೋರಿಸಿದರು' ಎಂದು ಆತ್ಮಕಥನದಲ್ಲಿ ತಿಳಿಸಿದ್ದಾರೆ.

ಶಾಂತಕವಿ, ಹುಯಿಲಗೋಳ ನಾರಾಯಣರಾಯರು ಮತ್ತು ಕಟ್ಟಿ ಮಧ್ವಾಚಾರ್ಯರಂತಹ ಶಿಕ್ಷಕರಿಂದ ಕನ್ನಡ, ಇಂಗ್ಲಿಷ್ ಮತ್ತು ಸಂಸ್ಕೃತ ಭಾಷಾಭಿರುಚಿಯನ್ನು ಅವರು ಬಾಲ್ಯದಿಂದಲೇ ರೂಢಿಸಿಕೊಂಡರು. ಓದು ಮತ್ತು ಆಟದಲ್ಲಿ ಸರಿಸಮನಾದ ಆಸಕ್ತಿಯನ್ನು ಹೊಂದಿದ್ದು, ಕಾವ್ಯ ಕಲಾಸಕ್ತ ಪ್ರತಿಭಾನ್ವಿತ ವಿದ್ಯಾರ್ಥಿಯಾಗಿದ್ದರು. ಸಮುದಾಯದ ಬಾಲಕನಾಗಿ ಬೆಳೆದ ಬೇಂದ್ರೆ, ತನ್ನ ವೈಯಕ್ತಿಕ ನೋವು ನಲಿವನ್ನು ಕಾವ್ಯವಾಗಿಸಿ, ಸಹೃದಯ ರಸಿಕರಿಗಾಗಿ ಹಾಡಿದರು.

'ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ
ನೀಡುವೆನು ರಸಿಕ ! ನಿನಗೆ!
ಕಲ್ಲು ಸಕ್ಕರೆಯಂಥ ನಿನ್ನೆದೆಯು ಕರಗಿದರೆ
ಆ ಸವಿಯ ಹಣಿಸು ನನಗೆ !'

ಈ ನುಡಿಯಲ್ಲಿ ಕಾವ್ಯವನ್ನು ಸಮುದಾಯಕ್ಕೆ ಸಮರ್ಪಿಸುವ, ಸಮುದಾಯದ ಭಾಗವಾಗಿಸುವ ಕವಿ ಹೃದಯವಿದೆ. ಹಾಗಾಗಿ ಅವರ ಸ್ವಾನುಭವ ಲೋಕಾನುಭವವಾಗಿ ತನ್ನ ವೈಯಕ್ತಿಕತೆಯನ್ನು ಮೀರಿನಿಂತಿದೆ.

## ಗ್ರಾಮೀಣ ಕ್ರೀಡೆಗಳು

ಮಾನವನ ಬಾಲ್ಯ ಕ್ರೀಡಾಪ್ರಧಾನವಾದುದು. ಕ್ರೀಡೆ ಇಲ್ಲದ ಬಾಲ್ಯವು ನಿಸ್ಸಾರವಾದುದು. ಕ್ರೀಡೆಯ ಅದಮ್ಯವಾದ ಆಕಾಂಕ್ಷೆಯನ್ನು ಹತ್ತಿಕ್ಕುವುದು ಯಾರಿಂದಲೂ ಸಾಧ್ಯವಿಲ್ಲ. ಬಾಲ್ಯದ ಕ್ರೀಡೆಗಳನ್ನೇ ಕಾವ್ಯಗಳಲ್ಲಿ ಬಾಲಲೀಲೆಗಳೆಂದು ವರ್ಣಿಸಲಾಗುತ್ತದೆ. ಪ್ರಕೃತಿಯ ಸಹಜ ಕೊಡುಗೆಗಳಲ್ಲಿ ಆಟವೂ ಒಂದು. ಅದು ಮಾನವ ಶಿಶುವನ್ನು ಕ್ರಿಯಾಶೀಲವಾಗಿಸುತ್ತ, ಪ್ರಯೋಗ ಮನದವನನ್ನಾಗಿಸಿ ಅವನ ಬುದ್ಧಿಶಕ್ತಿಯನ್ನು ಹರಿತಗೊಳಿಸುತ್ತದೆ. ಅವನಲ್ಲಿ ಶಿಸ್ತು, ಸಂಯಮ, ಸಹಕಾರಭಾವ, ಉಲ್ಲಾಸವನ್ನು ಮೈಗೂಡಿಸುತ್ತಾ ಅವನಿಗೆ ಸೊಗಸನ್ನು, ಆರೋಗ್ಯವನ್ನು ನೀಡುತ್ತದೆ. ಅವನನ್ನು ಸಂಸ್ಕಾರ ಸಂಪನ್ನನಾಗಿಸುತ್ತದೆ. ಗ್ರಾಮೀಣ ಪರಿಸರದಲ್ಲಂತೂ ಕ್ರೀಡೆಗಳಿಗೆ ವ್ಯಾಪಕವಾದ ಅವಕಾಶಗಳಿವೆ. ಆ ಕ್ರೀಡೆಗಳಂತೂ ಅತ್ಯಂತ ಸರಳ, ಬೇಕಾದ ಸಲಕರಣೆಗಳು ದುಬಾರಿಯಲ್ಲ. ಬೇಂದ್ರೆಯವರು ಗ್ರಾಮೀಣವೆನ್ನಬಹುದಾದ ಪರಿಸರದಲ್ಲಿಯೇ ಹುಟ್ಟಿ ಬೆಳೆದವರು. ಕ್ರೀಡೆಗಳಿಗೆ ತಮ್ಮನ್ನು ಬಾಲ್ಯದಲ್ಲಿ ಪರಿಪೂರ್ಣವಾಗಿ ತೆತ್ತುಕೊಂಡವರು. ಅದರ ಒಳ ಹೊರಗುಗಳನ್ನೆಲ್ಲ ಅರಿತು ನಿಸ್ಸೀಮರಾಗಿದ್ದವರು. ಆದರೆ ಯೌವನಕ್ಕೆ ಪ್ರವೇಶಿಸುತ್ತಿದ್ದಂತೆಯೇ ಮನುಷ್ಯನು ತನ್ನ ಬಾಲ್ಯದ ಎಲ್ಲ ಕ್ರೀಡೆಗಳನ್ನು ಮರೆತು ಬಿಡುತ್ತಾನೆ. ಕೆಲಕೆಲವು ಕ್ರೀಡಾಪಟುಗಳು ತಮತಮಗೆ ಒಗ್ಗುವ ಒಂದೆರಡು ಕ್ರೀಡೆಗಳನ್ನು ಆಯ್ದುಕೊಂಡು ಮೇಲೆ ಬರುವುದೂ ಉಂಟು. ಆದರೆ ಅವಾವುವೂ ಗ್ರಾಮೀಣ ಕ್ರೀಡೆಗಳಾಗಿರುವುದಿಲ್ಲ. ಅವುಗಳ ಸತ್ವವನ್ನು ಒಳಗೊಂಡಿರಬಹುದಷ್ಟೆ.

ಎಲ್ಲರಂತೆ ಬೇಂದ್ರೆಯವರು ಯೌವನಕ್ಕೆ ಬಂದ ಮೇಲೆ ಕ್ರಿಯಾತ್ಮಕ ಹಿನ್ನಲೆಯಲ್ಲಿ ಬಾಲ್ಯದ ಕ್ರೀಡೆಗಳನ್ನು ಮರೆತರಷ್ಟೆ. ಆದರೆ ಅವೆಲ್ಲವೂ ಕಾವ್ಯ ಜಗತ್ತಿನಲ್ಲಿ , ಪ್ರಸ್ತುತ 'ಬಾಲ್ಯಕಾಂಡ'ದಲ್ಲಿ ವಿಜೃಂಭಿಸುವಂತೆ ಮಾಡಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಕ್ರೀಡಾಚಿಂತನೆ ಎಂದು ಕರೆಯಬಹುದಾದ ಮಟ್ಟಿಗೆ ಅವರು ತಮ್ಮ ಕೆಲವು ಬಾಲ್ಯದ ಕ್ರೀಡೆಗಳ ಮೇಲೆ ಚಿಂತನೆಯ ಬೆಳಕು ಚೆಲ್ಲಿದ್ದಾರೆ, ಆಧ್ಯಾತ್ಮದ ಬೆಳಕು ಚೆಲ್ಲಿದ್ದಾರೆ. ಬೇಂದ್ರೆಯವರು 'ಬಾಲ್ಯಕಾಂಡ'ದಲ್ಲಿ ಉಲ್ಲೇಖಿಸಿರುವ ಕ್ರೀಡೆಗಳೆಂದರೆ ಬುಗುರಿ, ಹುಣಸಿ ಪಕ್ಕದ ಭಿಂಗರಿ, ರವದಿ, ಗಾಳಿಪಟ, ಗೋಲಿಯಾಟ, ಸರಿಮನೆ, ಸರಿಬಡಿಗೆ, ಆನೆಕಿರ್ರಿಗೆ ಬೆನ್ನ ಹಾರಾಟ, ಕಣ್ಣು ಮುಚ್ಚಾಲೆ, ಚಿನ್ನಿದಾಂಡು, ಚೆಂಡಾಟ, ಕುಂಟಲಪಿ, ಮುಂತಾದವುಗಳು.

ಗ್ರಾಮೀಣ ಆಟಗಳಲ್ಲಿ ಬುಗುರಿಯ ಮೂಲ ಪುರುಷನಂತಿರುವ ಹುಣಸಿಯ ಪಕ್ಕದ ಭಿಂಗರಿಯನ್ನು ಬೇಂದ್ರೆಯವರು ಪರಿಚಯಿಸಿರುವುದು ಕನ್ನಡ ಸಂಸ್ಕೃತಿಯ ಶೋಧಕ್ಕೆ ಉತ್ತಮ ಆಕರವಾಗಿದೆ. ಕ್ರೀಡಾಸಂಸ್ಕೃತಿ ಹಳ್ಳಿಯ ಮಕ್ಕಳಲ್ಲಿ ಎಷ್ಟು ಸರಳ ಸುಲಭವೆಂದು, ಆನಂದದಾಯಕವೆಂದು ತಿಳಿಯುತ್ತದೆ. ಅವರು ಭಿಂಗರಿಯ ರೂಪಾಂತರ ಬುಗುರಿಗಳನ್ನು ಆಡಿಸುತ್ತ ತಮ್ಮ ಕಾವ್ಯಕಲ್ಪನೆಯನ್ನು ಗಿರಿಶಿಖರದೌನ್ನತ್ಯಕ್ಕೆ ಕೊಂಡೊಯ್ದಿದ್ದಾರೆ. ಅವರು ಬಾಲ್ಯದಲ್ಲಿ ಆಡಿದ ಆಟಗಳನ್ನು ನೆನೆಯುತ್ತ, ಅವರು ಪಡೆದ ಜೀವಾನುಭವಗಳನ್ನು ಆ ಆಟಗಳನ್ನೇ ರೂಪಕವಾಗಿ ಬಣ್ಣಿಸಿದ್ದಾರೆ.

## ಭೌಂಗುಡುತಿರುವ ಬುಗುರಿ

ಬೇಂದ್ರೆಯವರು ಬೆಳುವಲದ ಬುಗುರಿ ಆಡಿಸುತ್ತ ಅದು ಜೊಯ್ ಎಂದು ತಿರುಗುವ ಕ್ರಿಯೆಯನ್ನು ಗಮನಿಸಿ ಹಲವು ಚಿಂತನೆಗಳನ್ನು ನೀಡಿದ್ದಾರೆ. ಬುಗುರಿ ನಿದ್ದೆಗಟ್ಟಿದಂತೆ ನಮ್ಮ ಅನುಭವ ವಿಶೇಷ ಘನೀಭೂತಗೊಳ್ಳಬೇಕು. ಆ ನಿದ್ದೆಯ ಕನಸು, ನನಸು ಕಣ್ಮುಂದೆ ಇದ್ದು 'ತಿರುಗಿದರೂ ತಿರುಗದ ಹಾಗೆ ಕಾಣುವ ನೆಲೆ'ಗೆ ಸಾಗಬೇಕು ; ಅದೇ ಅನುಭವ. ನಾವು ತಿರಗಬೇಕು ಅಂದರೆ ಈ ಸಂಸಾರದಲ್ಲಿ ದುಡಿದು ಶ್ರಮಿಸಬೇಕು. ಆದರೆ ಒದ್ದಾಡದವರ ಹಾಗೆ ಶಾಂತಿ ಸಮಾಧಾನದಿಂದಿರಬೇಕು. ಬುಗುರಿಯ ಚಲನಶೀಲತೆಗೆ, ಜೀವಂತಿಕೆಯ ಆವಾಹನಕ್ಕೆ ಕಾರಣವಾದ ಚಾಟಿ ಬರಿದಾಗಿ ಕೈಲಿ 'ಸುಳುಸುಳು ಸುಳಿದಾಡುತ್ತಿತ್ತಲ್ಲಿಯೆ' ಎಂಬಂತೆ ಭವದ ಭಾವ ಅನುಭಾವವಾಗಿ ಮೈಮನದಲ್ಲಿ ಸುಳಿದಾಡಬೇಕು.

ಬುಗುರಿಯಲ್ಲಿ ತಲ್ಲೀನತೆ ಇದೆ, ಅದರೊಡಲಿನಲ್ಲಿ ಲಯವಿದೆ ; ಆದರೆ ಪ್ರಲಯವಿಲ್ಲ. ಅದು ಲಯವಾಗುವುದು ಸತ್ಯ. ಅದು ಸಹಜ ಆನಂದಲಯ. ಅಂತಹ ನಯಕ್ಕೆ ಪ್ರಲಯದಲ್ಲಿ ಭಯವಿಲ್ಲ ಎಂದು 'ಯ' ಕಾರದ ಒಳ ಪ್ರಾಸದ ನೇಯ್ಗೆಯೊಡನೆ ನಯವು ಪ್ರಳಯದಿಂದ ಭಯಗೊಳ್ಳಬೇಕಿಲ್ಲ ಎಂದು ಹೇಳಿದ್ದಾರೆ. ಅದು ಸಾಧನೆ. ಅವರು ಹುಸಿ ಪ್ರಲಯವನ್ನು ಮಕ್ಕಳಾಟದ ಪಟಾಕಿಯಿಂದ ಬಣ್ಣಿಸಿ, ಅತ್ಯಂತ ಗಾಢವಿಷಯವನ್ನು ಚಿತ್ರಿತ ಹೋಲಿಕೆಗಳ ಆಂತರ್ಯದ ಬಿಗುವಿನಲ್ಲಿ ನೀಡಿದ್ದಾರೆ. ಅವರು ಬಾಲ್ಯದ ಕುಶಲ ಬುಗರಿಯಾಟದ ಕಲ್ಪನೆಯ ಬೆನ್ನೇರಿ ಸಾಗುತ್ತಿದ್ದಂತೆ ತಾತ್ವಿಕ ಚಿಂತನೆ 'ಮಸೆದ ಗಾಳಿ ಪಕ್ಕ ಪಡೆಯುತಿತ್ತು ಸಹಜ ಪ್ರಾಸ' ಎಂಬಂತೆ ಜೊತೆಗೂಡಿ ಬಂದಿದೆ. 'ಕೈ ಇಲ್ಲಾ, ಕಾಲೊಂದೆ, ಗೋಣಿಲ್ಲಾ, ತಲೆಯಷ್ಟೆ । ಟೊಂಕದ ಬಿಂಕವೆ, ಮೈದುಂಡಗೆ!' ಎಂಬ ವರ್ಣನೆಯಲ್ಲಿ ಪರಮಾತ್ಮನ ಅಲೌಕಿಕ ಧ್ಯಾನದ ಚಿತ್ರಣವಿದೆ. ಅವರಿಗೆ ಬುಗುರಿ ಯೌಗಿಕ ಮಾರ್ಗದ ಸಂಕೇತವಾಗಿದೆ.

ಬೇಂದ್ರೆಯವರು ೧೯೧೮ರಲ್ಲಿ ಮಹಾಕವಿ ಲಕ್ಷ್ಮೀಶನ ಪ್ರೇರಣೆಯಿಂದ ವಾರ್ಧಕ ಷಟ್ಪದಿಯಲ್ಲಿ ರಚಿಸಿದ ಕವನ 'ಸರಸ್ವತಿ'. ಅದರಲ್ಲಿ 'ಸರಸ್ವತಿ'ಯ ನಾದವನ್ನು ಅವರು ಬೊಗರಿಯ ಪ್ರತಿಮೆಯಲ್ಲಿ ಹೊಮ್ಮಿಸಿದ್ದಾರೆ.

'ನಿನ್ನ ನಾದದ ಬೊಗರಿ ಕಿವಿಯೊಳಾಡಿಸಿ ನಿದ್ದೆ
ಕಣ್ಣು ಗೊಂಬೆಗಳಲ್ಲಿ ತೀಡಿ ತೇಜದ ಬೀಜ
ನನ್ನ ಮುಂದಾದ ಮೇಲೆ ಅಂದ ಸಾವಿರ ದಲದ ಕಮಲೆ
ನೀನರಳಲಿಲ್ಲೇ ॥'

## ರವದೀಗು ಭವದೀಕ್ಷೆ

ಬೇಂದ್ರೆಯವರು ಬಾಲ್ಯದಲ್ಲಿ ಕೇಳಿದ ವಿವಿಧ ನಾದತರಂಗಗಳು ಯಾವುದೇ ಮಗು ಈ ಜಗತ್ತಿಗೆ ತೆರೆದುಕೊಂಡಾಗ ಆಲಿಸಿ ಪಡುವ ಆನಂದ ಸ್ವರೂಪದವಾಗಿದ್ದವು. ರವದಿ

ಉದುರುವುದು ಚಳಿಗಾಲದಲ್ಲಿ. ಅದನ್ನು ಪ್ರೀತಿಯಿಂದ ಎತ್ತಿ ಮೃದುವಾಗಿ ಮೈಸವರಿ ಒಲ್ಮೆಯ ಮುತ್ತನ್ನಿಟ್ಟು ನಾದತರಂಗಗಳನ್ನು ಹೊಮ್ಮಿಸುವವರು ಬಡ ಗ್ರಾಮೀಣ ಮಕ್ಕಳು. ಅದನ್ನು ಊದುತ್ತ ಸವಿಗನಸು ಕಂಡು ನಕ್ಕು ನಲಿಯುವುದೊಂದು ಆಹ್ಲಾದ. ಅದರ ಸುಂದರ ಅನುಭವವೆಂದರೆ ಬಡವನಿಗೆ ನೀಡುವ ಮನ್ನಣೆ. ಕಸವಾದ ರವದಿ, ಕಡ್ಡಿಯು ತಾನು ಉತ್ತಮವಾಗಬೇಕು ಎನ್ನುತ್ತದೆ. ಅದಕ್ಕೆ ಬೇಕಾದ ಆವೇದ ಸಂವೇದ ಅದರಲ್ಲಿದ್ದು, ಅದು ಜೀವಂತಿಕೆಯಿಂದ ಕೂಡಿದೆ. ಬೇಂದ್ರೆಯವರು ಬಾಲ್ಯದಲ್ಲಿ ಆಡಿದ ಆಟದಲ್ಲಿ ರವದಿ, ಕಡ್ಡಿಗಳ ಪೊಳ್ಳಿನಲ್ಲಿ ಸುಳ್ಳಾಗಿ ಸುಳಿದ ಗಾಳಿಯು ಸವಿಮಂತ್ರವಾಗಿತ್ತು. ಕಸವಾದ ಜೋಳದ ಗರಿ ರವದಿಗೂ ಜೋಳದ ದಂಟಿಗೂ ಭವದೀಕ್ಷೆ ನೀಡುವ ಶಕ್ತಿ ಗಾಳಿಗಿದ್ದೆ. ಭವದೀಕ್ಷೆಯೆಂದರೆ ಶ್ರೀ ಅರವಿಂದರು ಹೇಳಿರುವ 'ಭೌತದ್ರವ್ಯವೂ ಪರಬ್ರಹ್ಮಸ್ವರೂಪವನ್ನು ಪ್ರಕಟಿಸುವುದು' ಎಂಬ ಚಿಂತನೆ. ಈ ಜಗದಲ್ಲಿ ಒಂದು ಸಾಧಾರಣ ರವದಿ, ಕಡ್ಡಿ ಉನ್ನತ ಸ್ತರಕ್ಕೆ ಏರುವ ಆಂತರಿಕ ಬಲವನ್ನು ಹೊಂದಿರುವಾಗ, ಸಮಾಜದ ನಿರ್ಲಕ್ಷಿತ ದೀನದಲಿತರು ಮೇಲೇರಬೇಕೆಂಬ ಆಕಾಂಕ್ಷೆಯನ್ನು ಈ ಕಾವ್ಯ ಹೊಮ್ಮಿಸಿದೆ.

'ಪೊಳ್ಳಿನ ಸುಳ್ಳಿನ ಸುಳಿವ ಗಾಳಿಯ ನಾದ
ಕಿವಿಮಂತ್ರ, ಸವಿಮಂತ್ರ ಓದುವುದು
ರವದೀಗು ಭವದೀಕ್ಷೆ, ಕನಸು ಕಡ್ಡಿಗು ಇದೆ
ಆವೇದ ಸಂವೇದ ಊದುವುದು'

ಬೇಂದ್ರೆಯವರು ೧೯೧೯ರಲ್ಲಿ ವಾರ್ಧಕ ಷಟ್ಪದಿಯಲ್ಲಿ ರಚಿಸಿದ 'ರವದಿ' ಕವನವು ಇದೇ ಭಾವವನ್ನು ವಿಸ್ತೃತವಾಗಿ ಹೊಂದಿದೆ.

'ಕಸದಂತೆ ಬಿದ್ದಂಥ ರವದಿ ಕಂಡೆನು ನಾನು
ಕಸವೆಂದು ಬಗೆದಂಥ ರವದಿ ಕಸವಾಗಿತ್ತು
ಕಸವಲ್ಲವೆಂದು ನಾನೆತ್ತಿದೆನು ; ಅಂತೆಯೇ ಕಸವಾಗಲಿಲ್ಲ ರವದಿ ॥'

* * *

'ಹಕ್ಕಿ ಹಾಡದಗಾಲ, ಚಳಿಗಾಲವಿದ್ದರೂ
ಲೆಕ್ಕಿಸದೆ ಹಾಡುವೆವು ಹಗಲಿಲ್ಲ ಇರುಳಿಲ್ಲ ;
ಹಕ್ಕಿ ಇಂಥವು ನೋಡಿ ನಕ್ಕವಾಗೂ ಕೂಡ ದಿಕ್ಕು ಚಕ್ಕಂದದಿಂದ'

* * *

'ಯೋಗ ಹೊಂದಿತು ಮನಸು ತನ್ನ ಕನಸುಗಳಲ್ಲಿ ;
ಭೋಗಿಸಿದೆನೋ ನಿದ್ರೆಯಲ್ಲಿ ಮರೆತಿದ್ದ ಜನ್ಮಾಂತರದ ಸುಖಗಳನ್ನು'!

### ತಿಪ್ಪೆಯ ಬಸುರಿನ ಮಾವಿನ ಪೀಪಿ

ಹಳತಾದುದರ ಸಾರಸರ್ವಸ್ವವೇ ಗೊಬ್ಬರ. ಅದರಲ್ಲಿ ಹೊಮ್ಮುವುದೇ ನವನವೀನ ಮೊಳಕೆ. ಹಳತರ ಸಾರವಿಲ್ಲದೆ ಹೊಸತರ ಸೃಷ್ಟಿಯಿಲ್ಲ. ಹಳೆಯ ಪರಂಪರೆ ಅರಿತು ಅದರ ಸತ್ವದ ಸಾರದಲ್ಲಿ ನವನವೀನವಾಗುವುದೇ ಹೊಸ ದೃಷ್ಟಿ, ಹೊಸ ಹೊಳಪು. ಹಳತರಿಂದ ಹೊಮ್ಮಿದೆ ಹೊಸಮುಖ, ಹೊಸಹಾಡು, ಹೊಸ ಜೀವನೋತ್ಸಾಹ. ಕಾವ್ಯದ ಅಂತಸ್ಸತ್ವವಾದ ರಸತತ್ವ ಹೊರ ಹೊಮ್ಮಿ ರಸಾನಂದಕ್ಕೆ ಕೊಂಡೊಯ್ಯುವುದು ನಾದ ಮಾಧುರ್ಯ. ಆ ನಾದದ ಅನುಭವ ಬಾಲ್ಯದಲ್ಲಿ ಬೇಂದ್ರೆಯವರಿಗೆ ದೊರೆತುದು ತಿಪ್ಪೆಯ ಮಾವಿನಲ್ಲಿ. ತಿಪ್ಪೆಯ ಸಾರಸರ್ವಸ್ವ ಹೀರಿಕೊಂಡು ಚಿಗುರೊಡೆದ ಮಾವು ತನ್ನೊಡಲಿನಲ್ಲಿ ನಾದಮಾಧುರ್ಯವನ್ನು ಹೊಂದಿರುತ್ತದೆ. ಅದು ರಸಿಕರ ಮೃದುಭಾವದ ನಲ್ಮೆಯ ಸ್ಪರ್ಶಕ್ಕೆ, ತೇಯ್ದ ಭಾವಕ್ಕೆ ತುಟಿಯೊಡೆದು ರಸಿಕರ ಉಸಿರಿಗೆ ನಾದವಾಗುತ್ತದೆ. ಹಿರಿದಾದ ಸಂಸ್ಕೃತಿಯ ನಾದ ಸಂಗೀತದ ಮೂಲ ಸೆಲೆ ರವದಿ, ತಿಪ್ಪೆಯ ಮಾವು. ತ್ಯಾಜ್ಯವೆನಿಸಿಕೊಂಡರೂ ಅವು ಅಪ್ರಯೋಜಕವಾದವುಗಳಲ್ಲ. ಅವುಗಳಲ್ಲೂ ಜೀವಸ್ಪಂದನವಿದೆ. ಆದರೆ ಅವುಗಳನ್ನು ಸ್ಪರ್ಶಿಸಿ ಮುದ್ದಿಸುವ ರಸಿಕನಷ್ಟೇ ಬೇಕು ಎಂಬ ಅನ್ಯಾದೃಶ ಚಿಂತನೆ ಬೇಂದ್ರೆಯವರ ಈ ಕಾವ್ಯ ರೂಪಕಗಳಲ್ಲಿದೆ.

ತೇಯ್ದದ್ದೆ ತೇಯ್ದದ್ದು ತುಟಿಗೆರೆ ಬಿಚ್ಚಿರಲು
ಉಸಿರೆ ಆಗುವದಣ್ಣ ಸಾಕಾರವು !
ಯಾವ ತಿಪ್ಪೆಯ ಬಸಿರ ಬಿರಕಿಗೆ ಮೂಡಿತ್ತೊ
ಮಾವಿನ ಪೀಪಿಯ ಆಕಾರವು ?

ರವದಿ, ಕಡ್ಡಿ ಮತ್ತು ತಿಪ್ಪೆಯ ಬಸುರಿನ ಮಾವುಗಳು ಬೇಂದ್ರೆಯವರ ಕೈಯಲ್ಲಿ ಸಾಧಾರಣದಿಂದ ಅಸಾಧಾರಣ ಅಂತಸ್ತಿಗೆ ಏರುತ್ತಿದ್ದವು. ಇದು ಬಡತನದ ಮುಕ್ತ ಬಾಲ್ಯದ ಬೇಂದ್ರೆ ಮನಸ್ಸು ಶುದ್ಧ ಅಶುದ್ಧ, ನೀಚ ಉಚ್ಚ, ಬಡತನ ಸಿರಿತನ, ವೇಶ್ಯೆ ಗೃಹಿಣಿ, ಶೂದ್ರ ಬ್ರಾಹ್ಮಣಗಳ ಸೋಂಕಿಗೆ ಒಳಗಾಗದೆ ಎಲ್ಲವನ್ನು ಗ್ರಹಿಸುತ್ತ ಅದರ ಗುಣಗೌರವವನ್ನು ತನ್ನದಾಗಿಸಿಕೊಂಡದ್ದರ ಪ್ರತೀಕವಾಗಿದೆ.

### ಬಾನಲ್ಲೇರುತ್ತಿತ್ತು ಚಿತ್ತ ಪಟಾ

ಬೇಂದ್ರೆಯವರು ಬಾಲ್ಯದಲ್ಲಿ ಹಾರಿಸಿದ ಗಾಳಿಪಟ ಅವರಿಗೆ ಬಣ್ಣ, ಬೆಡಗು, ಸ್ವಾತಂತ್ರ್ಯದ ಸಂಕೇತವಾಗಿದೆ. ಅದು ಅವರ ಹಲವು ಭಾವಲಹರಿಗಳ ಪ್ರತಿಮೆಯಾಗಿ ಅವರ ಕಾವ್ಯದಲ್ಲಿ ವಿಹರಿಸಿದೆ. ಬೇಂದ್ರೆಯವರು ಆಗಿನ ಕಾಲದ ಭಾರತೀಯರು ಕಷ್ಟಸಹಿಷ್ಣುಗಳಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಬ್ರಿಟೀಷರನ್ನು ಎದುರಿಸಿದ ಧೈರ್ಯ, ಸಾಹಸಗಳನ್ನು 'ಬಾಲ್ಯಕಾಂಡ'ದಲ್ಲಿ ಚಿತ್ರಿಸಿದ್ದಾರೆ. ಬಾಳೆಗಿಡ ಮನುಷ್ಯನಂತೆ ತುಂಬಾ ಅಸ್ಥಿರವಾದುದು. ಅದು ತನ್ನನ್ನು ಕಿತ್ತೊಗೆಯಲು

ಬಂದ ಗಾಳಿಗೆ ಬೆನ್ನು ಕೊಟ್ಟು ಎಲ್ಲವನ್ನೂ ಸಹಿಸಿಕೊಂಡು ತಾಳಿಕೆಯಿಂದ ಬದುಕುತ್ತದೆ. ಗಾಳಿಗೆ 'ಬೆನ್ನೊಗ್ಗಟ್ಟು' ಎಂಬ ಪದ ಹಿಂಸೆಯನ್ನು ಅಲಕ್ಷಿಸಿ, ನೋವನ್ನು ಸಹಿಸಿಕೊಂಡು ತನ್ನ ಭಾರ ಹೊತ್ತುಕೊಂಡು ಉಳಿಯುವ ಬಾಳೆಯ ಹಾಗೆ ಅಂದಿನ ಜನರ ಹಠದ ಬಾಳಿತ್ತು ಎಂದು ವರ್ಣಿಸಿದೆ. ಆ ಜನ ಬ್ರಿಟಿಷರ ಹಿಂಸೆಗೆ ಬೆನ್ನೊಗ್ಗಟ್ಟು ಅದನ್ನು ಅಲಕ್ಷಿಸಿ ಬದುಕಲು ಹೆಣಗಾಡುತ್ತಿದ್ದರು. ಹೀಗೆ ಜಗ್ಗದೆ ನಿಂತ ದೇಹ ಬಾಳೆಯ ರೀತಿ ಇರುವಾಗ ಆದರ್ಶದ ಆಸೆಹೊತ್ತ ಮನಸ್ಸೆಂಬ ಗಾಳಿಪಟ ಸ್ವಾತಂತ್ರ್ಯ ಪಡೆಯಬೇಕೆಂಬ ಹಂಬಲದಿಂದ ಆಕಾಶದಲ್ಲಿ ಹಾರಾಡುತ್ತಿತ್ತು.

'ಗಾಳಿಗೆ ಬೆನ್ನೊಗ್ಗಟ್ಟು ತಾಳಿಕೆ ಬರುವಂತೆ
ಬಾಳೆ ಮೂಡುವದಿತ್ತು ಜನದ ಹಟಾ
ನೆಲದ ಮೇಲೆಯೆ ಕಾಲು ಊರಿ ನಿಂತಿದ್ದರು
ಬಾನಲ್ಲೇರುತ್ತಿತ್ತು ಚಿತ್ತಪಟಾ.'

ದಾರದ ಕಂಡಿಕೆ (ಉಂಡೆ) ಮಣ್ಣಲ್ಲಿ ಬಿದ್ದಿದ್ದರೂ ಆ ದಾರ ಗಾಳಿಯ ಎಳೆತಕ್ಕೆ ಮುಗಿಲಿಗೆ ಏರಿದೆ. ದಾರ ಎಂಬ ವ್ಯಕ್ತಿ ಒಂದು ಶಕ್ತಿಯಾಗಿ ಮೇಲೇರಿರುವುದು - ಮಣ್ಣಿನ ಸೃಷ್ಟಿಯಾದ ವ್ಯಕ್ತಿ ಶಕ್ತಿಯಾಗಿ ಗಗನಗಾಮಿಯಾಗಿರುವುದರ ಬಣ್ಣನೆ. 'ಬಿಲ್ಲು ಹಾಡುತ್ತಿತ್ತು' ಗಾಳಿಪಟದ ದೆಬ್ಬೆ ತನ್ನದೇ ಆದ ನಾದವನ್ನು ಗಾಳಿಯಿಂದ ಹೊಮ್ಮಿಸಿದ ಹಾಡು. ಆಗ ಅದರ ಜೊತೆ ನಲಿಯುತ್ತಿದ್ದುದು ಬಾಲಂಗೋಸಿ. ಆ ನವಿರಾದ ಅಲುಗಾಟದಲ್ಲಿ 'ಭಾವದ ಛಟಾ' ಮೆರುಗು ಮಿಂಚು ಎಂದು ಬಾಲ್ಯದ ಆನಂದ ಮರುಕಳಿಸಿದ ಸೊಬಗನ್ನು ಬೇಂದ್ರೆಯವರು ಕಾವ್ಯವಾಗಿಸಿದ್ದಾರೆ.

ಪಶ್ಚಿಮದ ಗಾಳಿಯಿಂದ ಪೂರ್ವಕ್ಕೆ ಏರಿನಿಂತ ಗಾಳಿಪಟ ಪಶ್ಚಿಮದ ಸೊಬಗನ್ನು ನೋಡುವಂತೆ ಹಾರಾಡುತ್ತಿತ್ತು ಎಂದು ಬೇಂದ್ರೆಯವರು ಬಣ್ಣಿಸಿದ್ದಾರೆ. ಆ ವರ್ಣನೆಯಲ್ಲಿ, ಅಸ್ತವಾಗದ ಸೂರ್ಯ, ಎಂದೂ ಅಳಿಯದ ಸಾಮ್ರಾಜ್ಯ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದ್ದ ಪಾಶ್ಚಿಮಾತ್ಯ ಬ್ರಿಟಿಷ್ ಸಾಮ್ರಾಜ್ಯವು ಅಸ್ತಂಗತವಾಗುತ್ತದೆ, ಸ್ವಾತಂತ್ರ್ಯ ಬಂದೇ ಬರುತ್ತದೆ ಎಂಬ ಚಿಂತನೆಯಿದೆ. ಅಂತರಿಕ್ಷ, ಅಂತರಾಟ ಎಂಬುದು ಭೂಮಿ ಮತ್ತು ಆಕಾಶದ ಮಧ್ಯಭಾಗ, ಅಲ್ಲಿ ಗಾಳಿಪಟವಿದ್ದು ಹಾರಾಡುತ್ತಿದ್ದರೂ ಅದು ನೆಲದ ಪ್ರೀತಿಯನ್ನು ಕಳೆದುಕೊಂಡಿಲ್ಲ. ಹಾಗಾದರೆ ಆ ಗಾಳಿಪಟ ಮೂಡಲಕ್ಕೆ ಏರಿನಿಂತಿದ್ದು ಏತಕ್ಕೆಂದರೆ ಈ ನೆಲದ ತ್ಯಾಗ ಅನುರಾಗಭರಿತ ಹಾಡನ್ನು, ಪೌರ್ವಾತ್ಯ ಸಂಸ್ಕೃತಿಯನ್ನು ಸ್ವಾತಂತ್ರ್ಯ ಭಾವಗೀತೆಯಂತೆ ಹಾಡಲು. ಅವರು ಬಳಸಿರುವ 'ತ್ಯಾಗದ ಗೀತಿ' ಎಂಬ ಪದ ಸ್ವಾತಂತ್ರ್ಯ ಹೋರಾಟದಲ್ಲಿ ಜನ ಮಾಡಿದ ತ್ಯಾಗವನ್ನು, ಗಾಳಿಪಟದಂತಹ ಉತ್ಸಾಹ ಮನಸ್ಸಿನ ಏರಾಟದ ಹೋರಾಟವನ್ನು ಚಿತ್ರಿಸಿದೆ. ಬುಗುರಿ ಮತ್ತು ಗಾಳಿಪಟದ ರೂಪಕಗಳಲ್ಲಿ ಬೇಂದ್ರೆಯವರ ಜೀವನಾನುಭವ ಅನುಭಾವವಾಗಿ ಪಲ್ಲವಿಸಿದೆ.

ಬೇಂದ್ರೆಯವರು ಗಾಳಿಪಟವನ್ನು ಅಂತರಂಗದ ಅನುಭಾವಕ್ಕೆ ಪ್ರತಿಮೆಯಾಗಿಸಿಕೊಳ್ಳುತ್ತ, ಅದು 'ತೋಡಿಕೊಂಡರು ಕೂಡ ತೀರದ ಭಾವದ । ಮೀರಿದ ಓಂಕಾರ'ದಂತೆ ಮೂಡಲಿ ಎಂದಿದ್ದಾರೆ. ತೋಡಿಕೊಂಡರು ಅಂದರೆ ಎಷ್ಟೇ ತೆಗೆದುಕೊಂಡರೂ ಸಹ ಮುಗಿಯದ ಭಾವದ ಅಕ್ಷಯಪಾತ್ರೆಯಂತಹದು ಓಂಕಾರ. ಎರಡು ಅಂಗೈ ಸೇರಿದರೆ ಬೊಗಸೆ. ಆ ಮಿತಿ ಅನಂತ ವ್ಯಾಪ್ತ ತುಂಬು ಸೊಗಸುಗಾರಿಕೆಗೆ ಸಾಲದು. ಓಂ ಎಂಬುವುದು ಇಡೀ ಬಯಲನ್ನೆ ಅಂದರೆ ವಿಶ್ವವನ್ನೆ ತನ್ನ ಕೊಂಬಿನಿಂದೆಂಬಂತೆ (ಕೋಡಲೆನೆ - ಕೋಡಲಿ + ಎನೆ) ದೂಡಿ ವ್ಯಾಪಿಸುತ್ತದೆ. ಅಂತಹ ಓಂಕಾರ ಮೂಡಿ ವಿಶ್ವವನ್ನು ವ್ಯಾಪಿಸಲಿ ಎಂಬ ಭಾವದಲ್ಲಿ ಓಂಕಾರಧ್ಯಾನದ ಮನದ ಗಾಳಿಪಟ ಹಾರಾಡುತ್ತಿತ್ತು.

'ತೋಡಿಕೊಂಡರೂ ಕೂಡ ತೀರದ ಭಾವದ
ಮೀರಿದ ಓಂಕಾರ ಮೂಡಲೆನೆ
ಸೊಗಸುಗಾರಿಕೆಗೆ ಕೆಲ ಬೊಗಸೆ ಸಾಕೇ ಏನು?
ಬಯಲನ್ನೆ ದೂಡಿತ್ತು ಕೋಡಲೆನೆ'

ಬೇಂದ್ರೆಯವರಿಗೆ ಓಂಕಾರದ ಚಿಂತನೆ 'ಸಾಂತದಲ್ಲಿಯು ಕೂಡ ಅನಂತ್ಯವನ್ನು ಕಾಂಬ । ಈ ಯೋಗಸೂತ್ರದ ಅನುಬಂಧವು' ಆಗಿದೆ. ಅಂತ ಅಂದರೆ ಕೊನೆ. ಸಾಂತ (ಸಾ + ಅಂತ = ಸಾಂತ) ಅಂದರೆ ಕೊನೆಯನ್ನು ಉಳ್ಳದ್ದು. ಯಾವುದು ಅಂತ ಉಳ್ಳದ್ದೊ ಅದೂ ಕೂಡ ಕೊನೆಯಿಲ್ಲದ್ದನ್ನು ಕಾಣುವಂತಹ; ಒಂದು ಸೀಮಿತಿ ವಲಯದಲ್ಲಿ ಅಸೀಮವಾದ, ಅನಂತತೆಯನ್ನು ಕಾಣುವಂಥಹುದು. ಆ ಮಾರ್ಗದಲ್ಲಿ ಸಾಗಿದ ಯೋಗಸೂತ್ರ (ಪಟಹಾರಿಸುವ ದಾರ)ದ ಅನುಬಂಧ ಅರ್ಥಾತ್ ಸಂಬಂಧವು ಅಂತಹದು. (ಅನಂತ ಇಲ್ಲಿ ಆನಂತ್ಯವಾಗಿದೆ. ಉದಾ : ಅವಶ್ಯವು ಆವಶ್ಯ ಆದ ಹಾಗೆ).

'ಸಾಂತದಲ್ಲಿಯೂ ಕೂಡ ನಂತ್ಯವನು ಕಾಂಬ
ಈ ಯೋಗಸೂತ್ರದ ಅನುಬಂಧವು,
ತನ್ನ ಗುಂಗಿಗೆ ತಾನೆ ತಲೆದೂಗಿ ತಲೆಬಾಗಿ
ತಲೆಯೆತ್ತಿ ಮೆರೆಯುವ ಈ ಚೆಂದವು.'

'ಓಂ' ನಾದದ ಗುಂಗಿಗೆ ಒಳಗಾಗುವುದೆಂದರೆ - ಅದರದೇ ಆದ ಮನನದಲ್ಲಿ, ನಾದದಲ್ಲಿ, ಅನುರಣದ ಗುಂಗಿಗೆ ತಾನೇ ಮೆಚ್ಚಿಕೊಂಡು 'ತಲೆದೂಗಿ' ತಾನೇ ತಲೆಬಾಗಿ ಮಣಿದು ಮಹತ್ತಾದುದನ್ನು ತಿಳಿದು, ಮಹತ್ತಿನ ಭಾವದಲ್ಲಿ ಮೆರೆಯುವ ಚಂದ. ಹಾಗೆ ಓಂಕಾರಕ್ಕೆ ಒಳಗಾದ ಮನಸ್ಸು ಗಾಳಿಪಟದಂತೆ ತಾನೇ ತಲೆದೂಗುತ್ತ, ತಲೆ ಬಾಗುತ್ತ, ಕೆಳಕ್ಕೆ ಇಳಿದು ಮತ್ತೆ ತಲೆಯೆತ್ತಿ ಸ್ವಾಭಿಮಾನದಲ್ಲಿ ತೇಲಾಡುವುದು, ತಲೆಬಾಗಿದರೂ ಸ್ವಾಭಿಮಾನದಿಂದ ತಲೆಯೆತ್ತಿ ನಿಲ್ಲುವ ಗುಣದ್ದು.

ಭವವೆಂಬುವುದು ಸಂಸಾರ. ಸಿದ್ದಾರ್ಥ ಲೌಕಿಕ ವ್ಯಾಮೋಹ ಬಿಟ್ಟು ಬುದ್ಧ ಪ್ರಬುದ್ಧನಾದ, ಜ್ಞಾನಿಯಾದ. ಪ್ರಜ್ಞಾವಂತಿಕೆಯ ಸ್ತರಕ್ಕೆ ಎದ್ದ. 'ಬುದ್ಧ ಬುದ್ಧ - ಜಗವೆಲ್ಲ ಮಲಗಿರಲು ಇವನೊಬ್ಬನೆದ್ದ ; ಮಡದಿ - ಮಗು - ಮನೆ - ಮಾರು - ರಾಜ್ಯ - ಗೀಜ್ಯ । ಹೊತ್ತಿರುವ ಉರಿಯಲ್ಲಿ ಆಯಿತಾಜ್ಯ'[೮] ಅವನು 'ಭವಗೆದ್ದ ಭವ್ಯ'. ಭವ್ಯ ಎಂಬುದು ಜೈನ ಪರಿಭಾಷೆಯಲ್ಲಿ ಮೋಕ್ಷಕ್ಕೆ ಅರ್ಹನಾದವನು. ಭವ್ಯನ ರೀತಿ ಎಂದರೆ ಈ ಸಂಸಾರವನ್ನು ಗೆದ್ದು ಭವ್ಯತೆಯ ಮಟ್ಟಕ್ಕೆ ಏರಿದ ಬುದ್ಧನ ರೀತಿ. ಹಾಗೆ ಗಾಳಿಪಟ ಲೌಕಿಕ ಸ್ತರ ಬಿಟ್ಟು ಅಲೌಕಿತ್ವಕ್ಕೆ ಏರಿದೆ. ಯಾವುದೇ ಬಂಧನರಹಿತ ಮುಕ್ತ ಲಾಲಿತ್ಯ, ಮುಕ್ತ ಸೌಂದರ್ಯ ಅದರ ಬಗೆಯಾಗಿದೆ.

**ರೋಞಬಿಲ್ಲಪಟ**

ಬೇಂದ್ರೆಯವರು ತಮ್ಮ ಕಾವ್ಯದಲ್ಲಿ ವಿವಿಧ ಭಾವಲಹರಿಗಳನ್ನು ಗಾಳಿಪಟದ ರೂಪಕದಲ್ಲಿ ಹಿಡಿದಿಟ್ಟಿದ್ದಾರೆ. ಅದು ತನ್ನದೇ ಆದ ವೈಶಿಷ್ಟ್ಯದಿಂದ ಕನ್ನಡಕಾವ್ಯವನ್ನು ಕಂಗೊಳಿಸಿದೆ. ಮಾಯಾಕಿನ್ನರಿಯ ಮಾಯೆ ಸಿದ್ಧರ ಕೈಯ ಕಿನ್ನರಿಯಾಗಿ ಅವರಿಗೆ ಒಲಿದು ನುಡಿದ ರೀತಿಯನ್ನು ಬೇಂದ್ರೆಯವರು 'ಸಂಜೀಯ ಮುಗಿಲಾಗ ರೋಞ ಬಿಲ್ಲ ಪಟವೊಂದು ಗಾಳಿ-ಸುಳಿಗೆ ಶ್ರುತಿ ಹಿಡಿದಾಂಗ'[೯] ಎಂದು ಬಣ್ಣಿಸಿದ್ದಾರೆ. ಆ ಮಾಯೆ 'ಮುಗಿಲ ಮಾರಿಗೆ ರಾಗರತಿಯ ನಂಜ ಏರಿತ್ತ ಆಗ ಸಂಜೆಯಾಗಿತ್ತ' ಎಂಬ 'ರಾಗರತಿ' ಮುಗಿಲಲ್ಲಿ ಮೈಚೆಲ್ಲಿ, ರೋಞಬಿಲ್ಲ ಪಟ ಗಾಳಿ-ಸುಳಿಯಲ್ಲಿ ಒಂದಾಗಿ ತೇಲಿದ ಗತಿಯಲ್ಲಿ ಪ್ರೇಮದ ನಾದದ ಶ್ರುತಿಹೊಮ್ಮಿಸಿದ್ದಾಳೆ. ಓಹ್ ರಾಗ, ಭಾವ, ನಾದಗಳು ಮೈಮಾಟ, ನಲಿದಾಟದಲ್ಲಿ ಒಲಿದು ಒನೆದ ಬಗೆ ರಂಗಾಗಿದೆ ಅದು.

**ಹಾರಿಸಿದ ಪಟ ಹರಿದುಕೊಂಡು ಹೋಯಿತು**

ಬೇಂದ್ರೆಯವರ ಹಿರಿಯ ಮಗನಾದ ರಾಮಚಂದ್ರ ತಂದೆಗೆ ತಕ್ಕ ಮಗನಾಗಿ ಅವರ ಮಾತಿನಂತೆ ನಡೆವ 'ಸಿದ್ಧ'ನಾಗಿದ್ದ. ಅವರ ನೋವು ನಲಿವಿನಲ್ಲಿ ಆಶಾಕಿರಣವಾಗಿ ಬೆಳೆದ ಮಗನನ್ನು ಅವರು 'ನನ್ನ ಸರಿತಾಪದಲ್ಲಿ ಪರಿಪಾಕ ಹೊಂದಿದ ಬುದ್ಧನು' ಎಂದಿದ್ದಾರೆ. ಕೋಡು ಬೆಳೆದಂತೆ ಯೌವನ ತುಂಬಿ ಮುನ್ನುಗ್ಗುತ್ತಿದ್ದ ಮಗ ಇಪ್ಪತ್ತನೆ ವಯಸ್ಸಿನಲ್ಲಿ ತೀರಿಹೋದಾಗ ಬೇಂದ್ರೆಯವರು ಕುಸಿದು ಹೋದರು. ಆ ನೋವನ್ನು 'ಹಾಡು-ಪಾಡು' ಆಗಿ ತೋಡಿಕೊಂಡರು. ತನ್ನ ಮಗ ತನ್ನಿಂದ ದೂರವಾದುದನ್ನು 'ಗಾಳಿಪಟ'ದ ಉಪಮಾನದಲ್ಲಿ ಚಿತ್ರಿಸಿದರು.

---

೮ ದ.ರಾ. ಬೇಂದ್ರೆ, ಗಂಗಾವತರಣ, ಶ್ರೀಮಾತಾ ಪ್ರಕಾಶನ, ಧಾರವಾಡ ೧೯೮೯ ಪುಟ ೩೩

೯ ದ.ರಾ. ಬೇಂದ್ರೆ, ಸಖೀಗೀತ, ಶ್ರೀಮಾತಾ ಪ್ರಕಾಶನ, ಧಾರವಾಡ, ೧೯೯೦ ಪು - ೯೮

ಹಾರಿಸಿದ ಪಟಪರಿದು ಕೊಂಡೇ ಹೋಗುವಂತೆಯೇ ಮಾಡಿದೆ
ಕೋಡನೇರಿಸಿ - ಅಹ! ಚಿಕೀರ್ಷೆಯ ದರಿಯ ತಳದಲಿ ದೂಡಿದೆ[೧೦]

**ಜೀವಪಟ ಹೆಡೆಯಾಟವಾಡುತಿಹುದು**

ಮಾತೃಹೃದಯದ ಬೇಂದ್ರೆಯವರಿಗೆ - ಕೂಲಿ ಮಾಡುವ ತಾಯಿ ಮನೆಯಲ್ಲಿ ಬಿಟ್ಟು ಹೋಗಿರುವ ಹಸುಗೂಸನ್ನು ನೆನೆಯುವಾಗಲೂ - ಗಾಳಿಪಟ ರೂಪಕವಾಗಿ ಜೀವಸಂಚಾರ ನೀಡಿದೆ. ತನ್ನ ಜೀವದ ತಂತುವನ್ನು ನೆನೆಯುವ ಆ ತಾಯಿಗೆ ಮಗುವು 'ಜೀವಪಟ'ವಾಗಿದೆ. ಆ ಹಸುಗೂಸಿನ ನಿದ್ದೆ, ಆಟ, ಆನಂದ, ಶಾಂತಿ ತಾಯಿಯ ಮಧುರ ಭಾವದೊಂದಿಗೆ ಹಾರಾಡಿದೆ.

'ಉಸಿರ ದಾರದ ತುದಿಗೆ
ಹಾರುಹಕ್ಕಿಯ ಬದಿಗೆ
ಜೀವಪಟ ಹೆಡೆಯಾಟವಾಡುತಿಹುದು
ಮೇಲ್ಮುಗಿಲ ಗಾಳಿಯಲಿ
ತನ್ನೊಂದು ಲೀಲೆಯಲಿ
ತೀರಲದು ತಾನೆ ಇಳಿಗಿಳಿಯಲಹುದು'

**ಪತಂಗದ ಹಾರಾಟ**

ಬೇಂದ್ರೆಯವರ ಶ್ರುತಿಯ ಮಿಂಚು 'ಚತುರೋಕ್ತಿ'ಯಲ್ಲಿ ಚತುರ್ಮುಖವಾಗಿ ಹೊಮ್ಮಿದೆ. ಪ್ರತಿನುಡಿ ವಿಸ್ತಾರಗೊಳ್ಳುತ್ತ ಪ್ರಥಮದಲ್ಲಿ ಒಂದು, ದ್ವಿತಿಯದಲ್ಲಿ ಎರಡು, ತೃತಿಯದಲ್ಲಿ ಮೂರು, ಚತುರ್ಥದಲ್ಲಿ ನಾಲ್ಕಾಗಿ ಹೊಸ ರೂಪದಲ್ಲಿ ಸಾಕಾರಗೊಂಡಿದೆ. ಚಿಂತನೆಯ ಬಂಧದಲ್ಲಿ ನವಛಂದ ಶರೀರದಲ್ಲಿ ಜಾಣಸೂಕ್ತಿಯಾಗಿದೆ. ಅದು ಆಲೋಚನೆಯ ಪತಂಗದ ತೂಕಕ್ಕೆ ತಕ್ಕಂತೆ ಪತಿಯನ್ನು ಹಚ್ಚಿಕೊಂಡು ಹಾರಾಡುತ್ತದೆ. ಅದನ್ನು ಬೇಂದ್ರೆಯವರು 'ಪತಂಗದ ಹಾರಾಟ' ಕವನದ ಮೊದಲ ಸಾಲಿನಲ್ಲಿ 'ಪತಿಪತೀ ಹಚ್ಚಿಕೊಂಡು ಹಾರತದ ಪತಂಗ'[೧೧] ಎಂದು ಪ್ರತಿಮಾಪೂರ್ಣವಾಗಿ, ಗಾಳಿಪಟಕ್ಕೆ ತಕ್ಕಂತೆ ಕಾಗದದ ತುಂಡು ಬಾಲಂಗೋಸಿಯಾಗಿ ವಿಸ್ತರಿಸಿ ಹಾರುವ ಬಗೆ ಚಿತ್ರಿಸಿದ್ದಾರೆ. ಬೇಂದ್ರೆಯವರ 'ಪತಂಗದ ಹಾರಾಟ'ವು ಪ್ರತಿಮಾ ವಿಧಾನದಲ್ಲಿ ಉಜ್ವಲವಾದ ಚಿತ್ರವೊಂದನ್ನು ಸಹೃದಯರ ಮುಂದಿಡುವುದರಲ್ಲಿ ಯಶಸ್ವಿಯಾಗಿದೆ. ಗಾಳಿಪಟವೆಂದರೆ ಅದಕ್ಕೆ ಪ್ರಧಾನವಾಗಿ ಮೂರು ಅಂಗಗಳು. ಸೂತ್ರ ಸಹಿತವಾದ ಗಾಳಿಪಟ, ಅದಕ್ಕೆ ಕಟ್ಟಿದ ಬಾಲಂಗೋಚಿ, ಆಗಸದಲ್ಲಿ ಅದು ಹೇಗೆ ಬೇಕೋ ಹಾಗೆ ಹಾರಾಡಲು

---

೧೦ ದ.ರಾ. ಬೇಂದ್ರೆ, ಹಾಡುಪಾಡು ಶ್ರೀಮಾತಾ ಪ್ರಕಾಶನ, ಧಾರವಾಡ, ೧೯೮೬, ಪುಟ ೪೮

೧೧ ದ.ರಾ. ಬೇಂದ್ರೆ, ಚತುರೋಕ್ತಿ ಮತ್ತು ಇತರ ಕವನಗಳು, ಸಮಾಜ ಪುಸ್ತಕಾಲಯ, ಧಾರವಾಡ ೧೯೭೮, ಪು. ೧೬

ಬೇಕಾದ ದಾರ. ಬೇಂದ್ರೆಯವರ ಕವಿತೆಗಳ ರಹಸ್ಯವೂ ಈ ಗಾಳಿಪಟ ರೂಪಕದಲ್ಲಿ ಅಡಕವಾಗಿದೆ. ಬೇಂದ್ರೆಯವರ ಪೂರ್ಣವಾದೊಂದು ಕವಿತೆಯೆ ಗಾಳಿಪಟ. ಸಮತೂಕದ ಅದರ ಲಯ ಮತ್ತು ಛಂದಸ್ಸು ಅದಕ್ಕೆ ಕಟ್ಟಿದ ಬಾಲಂಗೋಚಿ. ಕಲ್ಪನೆಗಳು ಭಾವಗಳು ಬೇಕು ಬೇಕಾದ ಹಾಗೆ ಅರಳಿಕೊಳ್ಳುವುದೇ ಆ ಪಟಕ್ಕಿರುವ ದಾರ. ಹೀಗೆ ಗಾಳಿಪಟದ ಪ್ರತಿಮೆಯೊಂದಿಗೆ ಬೇಂದ್ರೆಯವರ ಕವಿತಾ ವಿಧಾನವನ್ನು ತುಲನೆ ಮಾಡಬಹುದಾಗಿದೆ. ಕೊನೆಯದಾಗಿ ಆ ಗಾಳಿಪಟವನ್ನು ಈಗ ಆಡಿಸುತ್ತಿರುವವರು ಯಾರು ಎಂಬುದೊಂದು ಪ್ರಶ್ನೆ. ಮೊದಲಿಗೆ ಕವಿಯೆ ಆಡಿಸಿದರೆಂಬುದು ಸರಿ. ಈಗ ಕವಿಯ ಜಾಗದಲ್ಲಿ ಆ ಕವಿತಾ ಪಟವನ್ನು ಆಡಿಸುವವರು ಸಹೃದಯರು, ಬೇಂದ್ರೆಕಾವ್ಯ ಪ್ರೇಮಿಗಳು. ಹೇಗೆಬೇಕೋ ಹಾಗೆ ಆಡಿಸುತ್ತಾ, ಅರ್ಥೈಸಿಕೊಳ್ಳುತ್ತ ಆನಂದ ಪಡುವುದು ಅವರ ಪಾಲಿಗೆ ಬಿಟ್ಟದ್ದು.

**ಸಾಕ್ಷಿಪ್ರೇಕ್ಷಕ ಬೇಕು ಲೀಲಾವಿನೋದಕೆ**

ಬೇಂದ್ರೆಯವರು ಬಾಲ್ಯದಲ್ಲಿ ಆಡಿದ ಆಟವೇ ಅವರ ಅರಿವಿಗೆ ಮೂಲ ಪ್ರೇರಣೆಯಂತಿದೆ. ಬಾಲ್ಯದ ಗೋಲಿಯ ಆಟ ಅವರ ಕ್ರೀಡಾ ಮನೋಭಾವಕ್ಕೆ, ದೋಷರಹಿತ ಚಿಂತನೆಗೆ ಎಳೆದೊಯ್ದಿದೆ. ಅವರಿಗೆ ಆಟ ನಿಜದ ನೆಲೆಯಾಗಿ ಜ್ಞಾನದ ತಿಳಿವನ್ನು ನೀಡಿದೆ. ಜ್ಞಾನ ಗೋಚರವಾದ ಮೇಲೆ ಅಲ್ಲಿ ತಪ್ಪು ಎಂಬುವುದಿಲ್ಲವಾಗಿದೆ. ಹಾಗಾಗಿ ಅವರು ನುಡಿದಿದ್ದಾರೆ. 'ತಪ್ಪುಂಟೆ ಎಲ್ಲಾರೆ ಗೇಣಾಗಿಯೇ' (ಜ್ಞಾನ > ಗ್ಯಾನ > ಗೇನ > ಗೇಣ). ಮನುಷ್ಯನ ಎಲ್ಲ ಜ್ಞಾನದ ಮೂಲ ಸೆಲೆ ಬಾಲ್ಯದ ಆಟದಲ್ಲಿದೆ. ಚಿಕ್ಕಂದಿನ ಆಟ ಏಕಾಗ್ರ ಚಿತ್ತತೆಯನ್ನು ರೂಢಿಸುತ್ತದೆ. 'ಮೈ ಎಲ್ಲ ಕಿವಿಯಾಗಿ ಕೇಳಬೇಕು' ಎಂಬುದು ಚಿತ್ತೈಕಾಗ್ರತೆಯನ್ನು ಕುರಿತು ಹೇಳುವ ಜನಪದರ ನುಡಿ. ಅವರು ಬಾಲ್ಯದಲ್ಲಿ ಗೋಲಿಯನ್ನು ಗುರಿಯಿಟ್ಟು ಹೊಡೆಯುವುದರಲ್ಲಿ ತಡೆಯಾದರೆ, ತಪ್ಪು ಎಸೆತವಾದರೆ ಹುರುಪು ಉತ್ಸಾಹ ಕಳೆದು ಕೊಳ್ಳುತ್ತಿರಲಿಲ್ಲ. ಮರು ಪ್ರಯತ್ನದಲ್ಲಿ ಸರಿ ಎಸೆತ ಸಾಧಿಸುತ್ತಿದ್ದರು. ಅವರಲ್ಲಿ ಹುರುಡು ಹುಮ್ಮಸವೆಂಬುದು ಹರಿತವಾಗಿಯೇ ಇತ್ತು. 'ಹುರುಡು ಹುಮ್ಮಸವಿತ್ತು ಏಣಾಗಿಯೆ'. ಕಣ್ಣು ಮುಚ್ಚಾಲೆ ಆಟವಾಡುತ್ತಾ ಬಚ್ಚಿಟ್ಟುಕೊಳ್ಳುವ ರೀತಿ ಈ ಜಗತ್ತಿನಲ್ಲಿದೆ. ಕಣ್ಣು ಮುಚ್ಚಾಲೆ ಮತ್ತು ಕಳ್ಳತನ ಮಾಡಿ ಅಡಗಿಕೊಳ್ಳುವುದು ಜೊತೆಯಲ್ಲಿಯೇ ಸಾಗಿರುವ ಮೋಸ ಎಂದು, ಜಗದ ವೈಚಿತ್ರ್ಯವನ್ನು ಬೇಂದ್ರೆ ಚಿತ್ರಿಸಿದ್ದಾರೆ.

ಕಣ್ಣು ಮುಚ್ಚಣಿಕೆಗೂ ತುಡುಗ ಅಡಗುವಿಕೆಗು
ಎಂದಿನಿಂದಲು ಕವಡುಗಂಟು ಇದೆ.
ಬೆರಕಿ ಮಂದಿಗು ಮತ್ತೆ ಚದುರ ಚಮ್ಮಾರರಿಗು
ಹೊಲೆ-ನೆಲೆಗಾಣದ ನಂಟು ಇದೆ.

ಬೆರಕಿ ಎನಿಸಿಕೊಂಡ ಬುದ್ಧಿವಂತ ಮೇಲ್ವರ್ಗದವರಿಗೂ, ಚತುರರೆನಿಸಿಕೊಂಡ ಕೆಳವರ್ಗದವರಿಗೂ ಮೂಲ ಒಂದೆ. ಎಲ್ಲರೂ ಹುಟ್ಟಿರುವುದು ಹೊಲೆಯ ಸ್ಥಾನದಲ್ಲಿಯೆ. ಹಾಗಾಗಿ ಜಗದ ಎಲ್ಲ ವರ್ಗದ ಜನರಲ್ಲಿ 'ಹೊಲೆ - ನೆಲೆಗಾಣದ ನಂಟು ಇದೆ.'

ಚಿಣ್ಣಿಕೋಲಾಟ ; ಕಲ್ಲನ್ನು ಪೂಜಿಸಿ ಅದನ್ನು ಬಟ್ಟೆಯ ಚೆಂಡಿನಿಂದ ಹೊಡೆಯುವ ಫಣಿಯಾಟದಲ್ಲಿ ಕಾಲ್ಕೆದರಿ ಪಟ್ಟು ಬಿಡದೆ ವಾದಿಸಿ ಪಟ್ಟು ಹಿಡಿಯುವ ಮೊಂಡಾಟವಿದೆ. ಆಟದ ಕಟ್ಟಲೆ ಮುರಿಯುವವರಿಗೆ ಎಲ್ಲವೂ ಚಿನ್ನಾಟ, ಚೆಲ್ಲಾಟ ಎಂದು ಬೇಂದ್ರೆಯವರು ಬಣ್ಣಿಸಿರುವ ಬಾಲ್ಯದ ನೆನಪು ಓದುಗರ ಬಾಲ್ಯವನ್ನು ಕೆದಕಿ ಕಚಗುಳಿಯಿಡುತ್ತದೆ.

**ಪೂರ್ಣಪ್ರಜ್ಞ**

ಆಟ ಮಗುವಿನ ಮತ್ತೊಬ್ಬ ತಾಯಿ. ಅದು ಅವನನ್ನು ವಿವೇಕಶಾಲಿಯಾಗಿಸುತ್ತ ಮಾನವೀಯ ಮೌಲ್ಯಗಳ ಸಾಕಾರವಾಗಿಸುವ ಸೃಜನಶೀಲ ಕಲೆ. ಅದು ಅವನು ಜಗದ ಒಂದು ಭಾಗವಾಗಿ ಅಲ್ಲಿ ಸ್ಪರ್ಧೆಯನ್ನು ಎದುರಿಸುತ್ತ ಸೋಲುಗೆಲುವಿನ ಸಮರಸತೆಯನ್ನು ಅರಿಯುತ್ತಲೇ ಪೂರ್ಣಪ್ರಜ್ಞನಾಗುವ ಬಯಲು. ಅದೇ ಅವನ ಅರ್ಥಪೂರ್ಣ ಬದುಕಿನ ಉಗಮಸ್ಥಾನ. ವ್ಯಕ್ತಿ ಬಾಲ್ಯದಲ್ಲಿ ಕುತೂಹಲದಿಂದ ಭಯರಹಿತವಾಗಿ ಆಟದಲ್ಲಿ ತೊಡಗಿಕೊಂಡು, ಕ್ರಿಯಾಶೀಲನಾಗಿ ಪರಿಣತಪಟುವಾಗುತ್ತಾನೆ. ತನಗೂ ಆ ಆಟಕ್ಕೂ ಸಂಬಂಧವಿಲ್ಲದಂತೆ ನಿರ್ಲಿಪ್ತನಾಗಿ ಆನಂದಶೀಲನಾಗುತ್ತಾನೆ. ತನ್ನ ಪಂಚೇಂದ್ರಿಯಗಳ ಹಿಡಿತದಿಂದ, ಕುಶಲ ಆಟಗಾರನಾಗಿ ಪರಿಣತಸ್ತರಕ್ಕೆ ಏರಿ, ಕೋಪತಾಪವಿಲ್ಲದ ಏಕಾಗ್ರಚಿತ್ತದ ಸಾಧಕನಾಗಿ ಓಜಸ್ವಿಯಾಗುತ್ತಾನೆ. ಮಧುರ ಭಾವ, ಶಾಂತಿ, ಅಹಿಂಸೆಯವನಾಗಿ ಒಣಹೆಮ್ಮೆಯಿಂದ ಬಹುದೂರವಿದ್ದು ಕಸುವುಳ್ಳ ಸಭ್ಯ ವ್ಯಕ್ತಿಯಾಗುತ್ತಾನೆ. 'ಬಾಲ್ಯಕಾಂಡ'ದಲ್ಲಿ ಈ ಏಕಾಗ್ರಚಿತ್ತತೆ, ಸಾಧಕನ ಓಜಸ್ವಿ ಲಕ್ಷಣ, ಕಸುವುಳ್ಳ ಸಭ್ಯವ್ಯಕ್ತಿ ನಿರ್ಮಾಣಕ್ಕೆ ಕಾರಣವಾದ ಆಟಗಳ ವೈಭವವಿದೆ. ಅದು ವ್ಯಕ್ತಿಯನ್ನು ರೂಪಿಸಿದಂತೆ ಕಾವ್ಯಕಲೆಯಾಗಿ ಹೊಮ್ಮಿದೆ.

ಬೇಂದ್ರೆಯವರ ಕಾವ್ಯದ ಅರ್ಥ, ಸಂಗೀತ, ನಾದ, ಲಯ, ಛಂದ ಆಟದಲ್ಲಿ ಅರಳಿದೆ. ಮಧುರಭಾವದ ಬಾಲ್ಯದ ಆಟ ಕಲೆಯಾಗಿ ರೂಪುಗೊಳ್ಳುತ್ತಲೇ ಅದು ಬೇಂದ್ರೆಯವರಲ್ಲಿ ಕಾವ್ಯಾತ್ಮಕ ಭಾಷೆಯಾಗಿ ವಿಕಾಸಗೊಂಡಿದೆ. ಅವರು ಆಟದ ಅಂತರಂಗ ಅರಿತಂತೆ ತಮ್ಮ ಅಂತರಂಗದ ತೀವ್ರಾನುಭೂತಿಯನ್ನು ಕಾವ್ಯವಾಗಿ ಅಭಿವ್ಯಕ್ತಿಸಿದ್ದಾರೆ. ಆಟದ ಪರಿಣತಿ ಎಂದರೆ ಬುಗುರಿಯನ್ನು ಚಾವಟಿಯಲ್ಲಿ ಸುತ್ತಿ ಬಲಗೈನಿಂದ ಮೇಲೆ ಎಸೆದು ; ಅದು ಬಲಗೈಯಲ್ಲಿ ತಿರುಗುತ್ತ ನಿದ್ದೆ ಗೈಯುವುದನ್ನು ನೋಡುವ ಆನಂದ. ಅಂತಹ ಪರಿಣತ ಕಲೆಯಾಗಿ ಕಾವ್ಯವನ್ನು ಪ್ರಯೋಗಿಸಿ ಅನುಭವಿಸಿದ್ದು ಬೇಂದ್ರೆಯವರ ಆಹ್ಲಾದ. ಅವರ ಪ್ರತಿಭೆ ಗಾಳಿಪಟದಲ್ಲಿ ಅತಿ ಸಹಜವಾಗಿ ನಲಿದಂತೆ ಕಾವ್ಯದಲ್ಲಿ ವಿಕಾಸಗೊಂಡು ನೆಲದ ರುಚಿಯನ್ನು ಅನುಭವಿಸುತ್ತಲೇ ಗಹನವಿಹಾರಿಯಾಗಿದೆ. ವರ್ಗ, ವರ್ಣ, ಧರ್ಮ, ಜನಾಂಗದ ಸೋಂಕಿಲ್ಲದ ಆಟದ ಸ್ಪಂದನ ರವದಿ, ಕಡ್ಡಿ, ತಿಪ್ಪೆಯ ಬಸುರಿನ ಮಾವಿನ ನಾದವಾಗಿ ಬೇಂದ್ರೆಯವರಿಗೆ ದಕ್ಕಿದೆ. ಬಾಲ್ಯದ ಆಟವು ಅವರನ್ನು ಆಧ್ಯಾತ್ಮಿಕ ಶೋಧಕ್ಕೆ ತೊಡಗಿಸಿ 'ಲೀಲೆಯಲಿ ಯಾವುದೂ ವಿಫಲಮಲ್ಲ' ಎಂಬ ಸಿದ್ಧಾಂತಕ್ಕೆ ಕೊಂಡೊಯ್ದಿದೆ.

ಬೇಂದ್ರೆಯವರ ಬಾಲ್ಯವನ್ನು ರೂಪಿಸಿದ ಧಾರವಾಡದ ವಿವಿಧ ಆಟಗಳು ಕನ್ನಡಿಗರ ಕ್ರೀಡಾ ಸಂಸ್ಕೃತಿಯ ಶೋಧಕ್ಕೆ ಗ್ರಾಸವಾಗಿವೆ. ಆಟವು ಆಡಿದ ಪ್ರತಿಯೊಂದು ಸಲವು ಹೊಸಕಲೆಯಾಗಿ ನವಲೀಲೆಯನ್ನು ಸೃಷ್ಟಿಸುತ್ತದೆ. ಅದರ ಕುಣಿತಕ್ಕೆ ಸಾವಿಲ್ಲ. ಅದೇ ಲಕ್ಷಣವನ್ನು ಕಾವ್ಯವು ಹೊಂದಿದೆ. ಅದು ಆಟ, ಕುಣಿತದ ಆನಂದದಂತೆ ಪರಸ್ಪರರು ಅರಿತು ಬೆರೆಯುವ ಸಂಜೀವಿನಿ ಎಂಬ ಚಿಂತನೆಯನ್ನು ಬೇಂದ್ರೆಯವರು ನೀಡಿದ್ದಾರೆ.

‘ನಾನಲ್ಲ
ನೀನಲ್ಲ
ನನ್ನಲ್ಲಿ ನೀನಿಲ್ಲ
ಸಾವಿನ ನೋವಿಲ್ಲ ॥
ಕುಣಿಯೋಣು ಬಾರs
ಕುಣಿಯೋಣು ಬಾ’.

■ ■

# ಧಾರವಾಡದ ಜನಪದ ಜೀವನ

ಧಾರವಾಡದ ಜನಪದ ಜೀವನ

ಧಾರವಾಡದ ಜನರ ಚಿತ್ರಣದಲ್ಲಿಯೇ ಬೇಂದ್ರೆಯವರ ಜೀವನಾಸಕ್ತಿ ವಿಜ್ರಂಭಿಸಿದೆ. ಆ ಜನರ ಸಂಕೀರ್ಣ ಬದುಕನ್ನು ಸೂಕ್ಷ್ಮವಾಗಿ ಗಮನಿಸಿ ಅದರ ಒಳ ಹೊರಗನ್ನು ಚಿತ್ರಿಸುವಲ್ಲಿಯೇ ಬೇಂದ್ರೆಯವರ ಜೀವನ ಪ್ರೀತಿ ಇದೆ. ಅದು ಸಮುದಾಯದಲ್ಲಿ ಒಂದಾಗಿದ್ದರೂ, ನಿರ್ಲಿಪ್ತವಾಗಿ ದೂರನಿಂತು, ಅದರ ಅರೆಕೊರೆ, ತುಂಬುತೂರೆಯನ್ನು ಕಾಣುವ ಜೀವನೋತ್ಸಾಹ ಅವರಲ್ಲಿದೆ. ಅದೇ ಅವರ ಕಾವ್ಯದ ಜೀವಾಳ.

ಭಿಕ್ಷೆ ನೀಡವುದು ಅಧಿಕ ಗರತಿಯರ ಸಹಜಗುಣವಾಗಿದ್ದಿತ್ತೆಂದು ಬೇಂದ್ರಯವರು ತಿಳಿಸಿದ್ದಾರೆ. 'ದಾನ ಇಲ್ಲದ ದತ್ತ ಇಲ್ಲ' ಎಂಬ ಚಿಂತನೆ ತಮ್ಮಲ್ಲಿ ರೂಪುಗೊಂಡ ದಾನ ಸಂಸ್ಕೃತಿಯನ್ನು, ದಾನ ನೀಡುತ್ತಿದ್ದ ಗೃಹಿಣಿ ಮಾತೆಯರನ್ನು ಅನನ್ಯವಾಗಿ ನೆನೆದಿದ್ದಾರೆ. ಹದ್ದು ಮೀರಿದ ಕೆಲವು ಪುರುಷರನ್ನು 'ದ್ಯಾಮವ್ವನ ಕೋಣ', 'ಗೂಳಿಬಸವ' ಎಂಬ ಪ್ರತಿಮೆಗಳಲ್ಲಿ ಚಿತ್ರಿಸಿ ಅಂಥವರನ್ನು ಸೈರಿಸಿಕೊಂಡ ಸಮಾಜ ಹದಗೆಡದಂತಿತ್ತು ಎಂದು ಹೇಳಿದ್ದಾರೆ. ಅಂದಿನ ಜನರ ದಾಂಪತ್ಯದ ಹೊರಗಿನ ಕಾಮಲಾಲಸೆಯನ್ನು ಸೂಕ್ಷ್ಮವಾಗಿ ಹೇಳುತ್ತಲೇ ಅದನ್ನು ನೈತಿಕ ಜೀವನ ಮೌಲ್ಯಕ್ಕೆ ಮುಖಾಮುಖಿಯಾಗಿಸಿ, 'ಮುದ್ದೆಯಾಗಿರಲಿಲ್ಲ ಒದ್ದೆಯಾಗಿದ್ದರು' ಎಂದು ಅದರ ಮಿತಿಗಳನ್ನು ಕಾವ್ಯದಲ್ಲಿ ಹಿಡಿದಿಟ್ಟಿದ್ದಾರೆ. ಕೆಟ್ಟ ಹೆಜ್ಜೆ ಇಟ್ಟು ಕವಲುದಾರಿಯಲ್ಲಿರುವ ವ್ಯಕ್ತಿ ತನ್ನ ತಪ್ಪನ್ನು ತಿದ್ದಿಕೊಂಡು ಸರಿಹಾದಿಗೆ ಬರುವ ಪರಿಸ್ಥಿತಿಯೂ ಇತ್ತು. ಅದಕ್ಕೆ ಕಾರಣ ನಮ್ಮಲ್ಲಿ ಅಂತರ್ಗತವಾದ ಮಾನವ ಧರ್ಮ. ಅದು ಕೆಡುಕರನ್ನು ಒಳಿತಿನ ಕಡೆ ಸಾಗುವಂತೆ ಪ್ರೇರೇಪಿಸುತ್ತಿತ್ತು; ಧರ್ಮದ ಬಲವು ಕಷ್ಟಕ್ಕೆ ನಷ್ಟಕ್ಕೆ ವ್ಯಕ್ತಿ ಹೊಂದಿಕೊಳ್ಳುವಂತೆ ಮಾಡುತ್ತಿತ್ತು ಎಂದು ತಿಳಿಸಿದ್ದಾರೆ. ಅವರು ಅಂದಿನ ಸಮಾಜದ ಓರೆಕೋರೆಗಳನ್ನು ಬಾಲ್ಯದ ತುಂಟ ನುಡಿಯಲ್ಲಿಯೇ ಧೈರ್ಯವಾಗಿ ಚಿತ್ರಿಸುತ್ತ, ಜನರ ಸಂಕೀರ್ಣ ಬದುಕನ್ನು ಅನಾವರಣಗೊಳಿಸಿದ್ದಾರೆ. ಅದೇ ಅಂದಿನ ಜನರ ಬೆಲೆ ಕಟ್ಟುವಿಕೆಯ ತಂತ್ರವೂ ಆಗಿದೆ.

## ನಕ್ಕು ಎಚ್ಚತ್ತಿತ್ತು ತನ್ನತನಾ

ಜನರಲ್ಲಿ ಬಡತನವಿದ್ದರೂ ಒಗರಿನ ಗತ್ತು, 'ಸಿರಿತನವಿದ್ದರೂ ಲಘುಭಾವದ ನಡತೆ', ಅಡ್ಡಾದಿಡ್ಡಿ ನಡೆದುಕೊಳ್ಳುವ ಗೊಂದಲ ಮನಸ್ಸಿದ್ದರೂ ತೂಕ, ಘನತೆಯಿಂದಿರುವದುಂಟು. ವಿವಿಧ ರೀತಿಯ ಜನರ ಜೀವನವೆನ್ನುವುದು 'ಜನವೂ ದನವೂ ಕೂಡಿ ನಡೆದಿತ್ತು ಸರ್ಕಸ್ಸು' ಎಂಬ ರೀತಿ. ಆ ಸರ್ಕಸ್ಸನ್ನು ನೋಡುವವನು ಎಚ್ಚರಿಕೆ ಇಲ್ಲದಂತಾಗಿ ದಂಗು ಬಡಿದಂತೆ ಸ್ತಂಭೀಭೂತನಾಗಿರುತ್ತಾನೆ. ಅಂತಹ ದಂಗು ಬಡಿದ ನೋಟದಲ್ಲಿ ಇದ್ದಕ್ಕಿದ್ದ ಹಾಗೆ ಹಾಸ್ಯಪಾತ್ರದ ಕೋಡಂಗಿ ಕುಣಿತದವನು ಪ್ರವೇಶಿಸಿದರೆ, ಸ್ತಂಭೀಭೂತವಾಗಿ ನೋಡುತ್ತಿದ್ದವರು - ಅಡ್ಡಾದಿಡ್ಡಿಯ ಗೊಡ್ಡೇಟಿನಿಂದ ಎಚ್ಚರಗೊಳ್ಳುತ್ತಾರೆ. ಅದು 'ನಕ್ಕು ಎಚ್ಚತ್ತಿತ್ತು ತನ್ನತನಾ' ಎಂಬ ಅರಿವು.

ಆ ಕೋಡಂಗಿ ಕುಣಿತ ಈ ಜೀವನ ಸರ್ಕಸ್‌ನಲ್ಲಿ ಹೇಗಿರುತ್ತದೆಂದರೆ ಕೃಷ್ಣನ ಜೊತೆ ರಾಧೆ ಕುಣಿಯಬೇಕಾದ ಜಾಗದಲ್ಲಿ ಇನ್ನೋರ್ವ ಕ್ಷುಲ್ಲಕನಟಿ ಚಿಮಣಾ ಕುಣಿಯುತ್ತಾಳೆ. ಅದು ರಾಧೆಗೆ ಕಾಡುಮುಳ್ಳಿನ ತಿವಿತದಂತೆ. ನಮ್ಮ ಕಲ್ಪನೆಯ ರಾಧೆಯ ಜಾಗದಲ್ಲಿ ಇನ್ನೊಬ್ಬಳು ಕುಣಿಯುತ್ತಿರುವಾಗ ಈ ವಿರುದ್ಧ ಭಾವಗಳು-ಜೀವನದ ವೈರುಧ್ಯಗಳು ಪ್ರೇಕ್ಷಕನ ಅನುಭವದ ಜೋಳಿಗೆಯನ್ನು ತುಂಬುತ್ತವೆ. ಆಗ ಅನುಭವ ಗಾಢವಾಗುತ್ತಾ ಸಾಂದ್ರವಾಗುತ್ತದೆ. ಅಂತಹ ಅನುಭವ ಬೇಂದ್ರೆಯವರಿಗೆ ಬಾಲ್ಯದಲ್ಲಿ ದೊರೆತು, ಅವರು ಆ ಸತ್ಯವನ್ನು ಕಾವ್ಯಮಾಧ್ಯಮದಲ್ಲಿ ಹಲವು ಪ್ರತಿಮೆಗಳಿಂದ ಶ್ರೀಮಂತಗೊಳಿಸಿದ್ದಾರೆ. ಬೇಂದ್ರೆಯವರು ಸಮಾಜದ ಕಪಟತನ, ಪೊಳ್ಳುಗಾರಿಕೆ, ಬೂಟಾಟಿಕೆಯನ್ನು ಹಾಸ್ಯವಾಗಿ ನಾಟಕೀಯ ದನಿಯಲ್ಲಿ ಚಿತ್ರಿಸಿದ್ದಾರೆ. ಆ ಚಿತ್ರಣದಲ್ಲಿಯೇ ವ್ಯಕ್ತಿ ಮತ್ತು ಸಮಾಜದ ತಂತುಗಳ ಎಣೆಗೊಳ್ಳುವಿಕೆಯಲ್ಲಿ ರಸಿಕರು ವಹಿಸಬೇಕಾದ ಎಚ್ಚರವನ್ನು ಸಂವಹನಗೊಳಿಸಿದ್ದಾರೆ.

ಬೇಂದ್ರೆಯವರು ಧಾರ್ಮಿಕ ಪರಂಪರೆಯಲ್ಲಿ ಆಧ್ಯಾತ್ಮಿಕ ಚಿಂತನೆಯನ್ನು ರೂಢಿಗತಗೊಳಿಸಿಕೊಂಡಂತೆ, ಸಾಮಾಜಿಕ ವಿಷಮತೆಗಳ ಪರಿಣಾಮವನ್ನೂ ಅಷ್ಟೇ ತೀವ್ರತೆಯಿಂದ ಗಮನಿಸಿದ್ದರು. ಅಂದಿನ ವೈದಿಕ ಕುಟುಂಬಗಳಲ್ಲಿದ್ದ ಬಾಲ್ಯವಿವಾಹ, ವಿಧವೆಯರ ದಾರುಣ ಸ್ಥಿತಿ ಅವರನ್ನು ತೀವ್ರವಾಗಿ ಕಾಡಿತ್ತು. ಅಂದಿನ ಆ ವಾತಾವರಣದಲ್ಲಿ ಧಾರವಾಡವನ್ನು ಕಟ್ಟಿದ ವೆಂಕಟ ರಂಗೊ ಕಟ್ಟಿ ಅವರು ತಮ್ಮ ಸ್ವಂತ ಮಗಳು ವಿಧವೆಯಾದಾಗ 'ವಿಧವಾವಪನ ಕೂಡದು ಅದಕ್ಕೆ ಧರ್ಮಶಾಸ್ತ್ರದಲ್ಲಿ ಆಧಾರವಿಲ್ಲ'ವೆಂದು ತಿಳಿಸಿದ್ದು, ಬೇಂದ್ರೆಯವರ ಮೇಲೆ ಪರಿಣಾಮವನ್ನುಂಟುಮಾಡಿತ್ತು.

## ಬಾಲ್ಯವಿವಾಹ ಹಾಗೂ ವಿಧವಾಪದ್ಧತಿಯ ನಿರ್ಮೂಲನೆಯ ತುಡಿತ

ಬೇಂದ್ರೆಯವರಿಗೆ ಭಾರತೀಯ ಸಂಸ್ಕೃತಿಯ ಅನಿಷ್ಟವಾದ ಬಾಲ್ಯವಿವಾಹ ಹಾಗೂ ವಿಧವಾಪದ್ಧತಿಯ ನಿರ್ಮೂಲನೆಯ ತುಡಿತ ತೀವ್ರವಾಗಿತ್ತು. ಆ ಸಾಮಾಜಿಕ ಅನಿಷ್ಟ ಮುಗ್ಧ

ಹೆಣ್ಣುಮಕ್ಕಳನ್ನು ಶೋಷಿಸುವುದರ ವಿರುದ್ಧ ತೀವ್ರ ಆಕ್ರೋಶವಿತ್ತು. ಅದಕ್ಕೆ ತೀಕ್ಷ್ಣವಾಗಿ ಸ್ಪಂದಿಸಿದ ಕವಿಹೃದಯ ಕನ್ನಡ ಸಾಹಿತ್ಯಕ್ಕೆ ಅಪೂರ್ವವಾದ 'ಪುಟ್ಟ ವಿಧವೆ', 'ಕಥೆಯಾದಳು ಹುಡುಗಿ', 'ಹೆಣದ ಹಿಂದೆ' ಕವನಗಳನ್ನು ನೀಡಿದೆ. 'ಪುಟ್ಟ ವಿಧವೆ' ಕವನದ ವೈಶಿಷ್ಟ್ಯವೆಂದರೆ ಆ ಕವನವನ್ನು ಓದುತ್ತಿದ್ದಂತೆ ಪ್ರತಿ ಪದಪುಂಜಕ್ಕೂ ಸಹೃದಯನ ಮನದಲ್ಲಿ ಆ ಮಾತಿಗೆ Negative (ಋಣಾತ್ಮಕ) ಅದ ನುಡಿ ಎಚ್ಚತ್ತು, ಅದು ಹೀಗಾಗಬಾರದಾಗಿತ್ತು ಎಂದು ಹೇಳಿಕೊಂಡು ಸಾಗುತ್ತದೆ. ಓದುಗನು ಕವನದ ಒಂದು ಭಾಗವಾಗಿ ಪುಟ್ಟವಿಧವೆಯ ಒಟ್ಟು ಅಸಹಾಯಕತೆಗೆ ನೋಯುತ್ತ, ವ್ಯವಸ್ಥೆಯ, ಧಾರ್ಮಿಕ ಕ್ರಿಯೆಯ ವಿರುದ್ಧ ಸಿಡಿದೇಳುತ್ತಾನೆ.

'ಆಕೆಯಿದ್ದಳು ಕೂಸು, ಆತನಿನ್ನೂ ಹುಡುಗ
ಅವರ ತಾಯ್ತಂದೆಗಳ ಹಿಗ್ಗು ಎಷ್ಟು?'

ಎಂದಾಗ, ಅವಳು ಬೆಳೆದಿದ್ದರೆ ಅವನು ಯುವಕನಾಗಿದ್ದರೆ, ಅವರ ತಾಯ್ತಂದೆ ಆ ಕೆಟ್ಟ ಹಿಗ್ಗನ್ನು ಪಡೆಯದಿದ್ದರೆ-ಎಂದು ಓದುಗನ ಮನಸ್ಸು ಹೇಳುತ್ತದೆ.

'ಆಕೆ ದೊಡ್ಡವಳಾಗಿ, ಆತ ಚಿಕ್ಕವನಿದ್ದು
ಶೋಭನ ಮಾಡಿದ್ದು ಊರಿಗಾಟ!'

ಎಂದಾಗ ಆಕೆ ದೊಡ್ಡವಳಾಗದಿದ್ದರೆ, ಆತ ಬೆಳೆದಿದ್ದರೆ ಎಂದು ಹೇಳುವ ಮನಸ್ಸು, 'ಶೋಭನವ ಮಾಡಿದ್ದು ಊರಿಗಾಟ !' ಎಂದಾಗ ಛೇ ! ಎಂತಹ ಆಟ ಆಡಿದರು ಎಂದು ನೋಯುತ್ತದೆ. ಹೀಗೆ Negative tendency ಬೆಳೆಸಿಕೊಂಡು ಕಾವ್ಯದ ಒಂದು ಭಾಗವಾಗಿ ಹೋದ ಸಹೃದಯ, ಆ ಕೂಸು ವಿಧವೆಯಾದಾಗ ನೋಯುತ್ತಾನೆ. 'ಶಾಸ್ತ್ರವಿರೆ ಬೇರೆಯ ವಿಚಾರವೇಕೆ ?' ಎಂದಾಗ ವಿಚಾರಪರನಾಗಿ ಹೀನಶಾಸ್ತ್ರದ ವ್ಯವಸ್ಥೆಯ ಬಗ್ಗೆ ಬಂಡೇಳುತ್ತಾನೆ. ಕವನ ಹೀಗೆ ಅವನನ್ನು ಕ್ರಿಯಾಶೀಲವಾಗಿಸುತ್ತ ಸಾಗಿ ಸಾಮಾಜಿಕ ಅನಿಷ್ಟವನ್ನು ಮುಂದುವರಿಸಿದ್ದಕ್ಕೆ ಕ್ರುದ್ಧನಾಗುವಂತೆ ಮಾಡುತ್ತದೆ. ಪುಟ್ಟ ವಿಧವೆಯ ಘೋರಸ್ಥಿತಿ ಕವನದಲ್ಲಿ ಹೆಪ್ಪುಗಟ್ಟುತ್ತ ಸಾಗಿದಂತೆ ಕವಿ :

'ಕುರುಡು ಧರ್ಮಕ್ಕೆ ಸ್ಮಾರಕವು ನಿಂತಂತಾಕೆ
ಮೈಮರೆತು ನಿಂತಾಗ್ಗೆ ಗೂಗೆ ಹಾಡಿತ್ತು
ಮುದ್ರೆಯೊತ್ತುವ ಕಣ್ಣು ಮೋರೆ ನೋಡಿತ್ತೊಮ್ಮೆ
ಜಾರ ಕೃಷ್ಣನ ಕಥೆಗೆ ಕೋಡು ಮೂಡಿತ್ತು !'

ಎಂದು ಸಾಮಾಜಿಕ ಅನಿಷ್ಟವಾದ ವಿಧವಾಪದ್ಧತಿಯಿಂದ ಅನೈತಿಕ ಘಟನೆಗಳು ಘಟಿಸಲು ಧಾರ್ಮಿಕ ಆಚರಣಾವ್ಯವಸ್ಥೆಯ, ಸಾಮಾಜಿಕ ಪ್ರತಿಬಂಧವನ್ನು ವಿಧಿಸುವ, ವಿಧವೆ ಎಂಬ sealಅನ್ನು ಅವಳ ಮುಖದ ಮೇಲೆ ಒತ್ತುವವನೇ ಜಾರ ಕೃಷ್ಣನ ಕಥೆಗೆ ಕೋಡು ಮೂಡಲು

ಕಾರಣವಾಗುತ್ತಾನೆ. ಸಮಾಜದಲ್ಲಿ ಈ ತರಪದ ಕಾರಣದಿಂದ ಜಾರಕೃಷ್ಣರು ಹೆಚ್ಚುತ್ತಾರೆ- ಎಂದು ಕಾವ್ಯ ಧ್ವನಿಸಿದ್ದನ್ನು ಓದುಗ ಅರಿತು, ಅವನ ಮನಸ್ಸು ಸಾಮಾಜಿಕ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುತ್ತದೆ. ಅವಳಿಗೆ ಮದುವೆ ಮಾಡಬೇಕಾಗಿತ್ತು ಎಂಬ ಸಾಮಾಜಿಕ ಸುರಕ್ಷತೆಯ ಕಡೆಗೆ ಮುಖ ಹೊರಳುತ್ತದೆ.

ಸುಲಕ್ಷಣವಾದುದನ್ನು ವಿಲಕ್ಷಣ ಮಾಡುವ ಸಾಮಾಜಿಕ ವ್ಯವಸ್ಥೆ, ಪ್ರಕೃತಿಯ ಕರೆಯುವಿಕೆಗಳು ಅನೈತಿಕ ರೂಪದಲ್ಲಿ ಚಲಾವಣೆಗೆ ಬರುವ ಈ ಹೀನ ವ್ಯವಸ್ಥೆ ಸರಿಯಲ್ಲ - ಎಂದು ಓದುಗ ಹೇಳುತ್ತಾನೆ. ಹೀಗೆ ಈ ಕವಿತೆ ಓದುಗನನ್ನು ಸಮಾಜಮುಖಿಯಾಗಿಸಿ, ವ್ಯವಸ್ಥೆಯ ಚಿತ್ರಣದಲ್ಲಿಯೇ ವ್ಯವಸ್ಥೆಯ ವಿರುದ್ಧ ಬಂಡೇಳುವ ಮನಸ್ಸನ್ನು ಸೃಷ್ಟಿಸುವ ಅಪೂರ್ವ ಕಾವ್ಯವಾಗಿದೆ. ಅಂತಹ ಶ್ರೇಷ್ಠ ಕಾವ್ಯರಚನೆಗೆ ಅವರ ಸೂಕ್ಷ್ಮ, ಚಿಕಿತ್ಸಕ, ಸಾಮಾಜಿಕ ಅರಿವನ್ನು ಜಾಗೃತಗೊಳಿಸಿದ ಬಾಲ್ಯವೇ ಕಾರಣವಾಗಿದೆ.

**'ಸತ್ತರೆ ಸತ್ತಿನೀ' ಇದ್ದವರ ಮೆರವಣಿಗೆ**

ಮರ್ತ್ಯನಾದ ಮಾನವನ ಸಾವು ಸತ್ಯ. ಅವನು ಸಾಮಾಜಿಕ ವ್ಯಕ್ತಿಯಾಗಿ ಬಾಳಿ ಕೊನೆಯುಸಿರೆಳೆದಾಗ ಅವನ ಅಂತ್ಯಸಂಸ್ಕಾರದ ಮೆರವಣಿಗೆ ಅವರವರ ಸಾಮಾಜಿಕ ರೀತಿ ರಿವಾಜಿನಂತೆ ನಡೆಯುತ್ತದೆ. ಅಂತಹ ವಿವಿಧ ಜಾತಿ ಜನಾಂಗದ ಸಾವಿನ ಮೆರವಣಿಗೆಯಲ್ಲಿ ಒಂದಾಗಿ ಸಾಗಿದ ಬಾಲಕ ಬೇಂದ್ರೆ 'ಇಳಿ ವಯಸ್ಸಿನಲ್ಲಿ ಅದನ್ನು ನೆನೆಯುವಾಗ ಅದೇ ಬಾಲ್ಯದ ಭಾವನೆಗಳಿಗೆ ಒಳಗಾಗಿದ್ದಾರೆ. ಅವರು ಚಿತ್ರಿಸಿರುವ ವಿವಿಧ ಜಾತಿ ಜನಾಂಗಗಳ ಪಾರಂಪರಿಕ ರೂಢಿಯ ಶವ ಮೆರವಣಿಗೆಗಳು ಸೂಕ್ಷ್ಮ ವಿವರಗಳಿಂದ ಕೂಡಿ ಕುತೂಹಲಕರವಾಗಿವೆ. ಅದು ಮೆರವಣಿಗೆಯ ಶವ ಮತ್ತು ಬದುಕಿರುವ ವ್ಯಕ್ತಿಗಳ ಬಂಧ, ಸಂಬಂಧದ ಅರ್ಥವಂತಿಕೆಯ ಶೋಧಕ್ಕೆ ತೊಡಗುವಂತೆ ಮಾಡಿದೆ. ಜನಪದರಲ್ಲಿ ಅಂತರ್ಗತವಾದ ಬೇಂದ್ರೆ ಮನಸ್ಸು ಮನುಷ್ಯ ಸಂಬಂಧಗಳ ಅಂತರಾರ್ಥವನ್ನು ಕಾವ್ಯ ಭಾಷೆಯಲ್ಲಿ ಅನಾವರಣಗೊಳಿಸಿದೆ. ಬೇಂದ್ರೆಯವರು ಮೂರ್ತಾನುಭವಗಳನ್ನು ಕಾವ್ಯದ ಅಮೂರ್ತ ಲೋಕಕ್ಕೆ ಕೊಂಡೊಯ್ದು ಅದು ಮತ್ತೆ ಸಹೃದಯರಲ್ಲಿ ರೂಹು ಪಡೆಯುವಂತೆ ಮಾಡಿದ್ದಾರೆ.

ಬೇಂದ್ರೆಯವರು ಚಿಕ್ಕಂದಿನಲ್ಲಿ ಬಾಲ್ಯದ ಆಟದಂತೆ ಹೆಣಗಳ ಮೆರವಣಿಗೆಯಲ್ಲಿ ಪಾಲ್ಗೊಂಡದ್ದು ಅವರ ಮಡಿ ಮೈಲಿಗೆ ರಹಿತ, ಲಕ್ಷಣಕ್ಕೆ ಸಾಕ್ಷಿಯಾಗಿದೆ. ಅದನ್ನು ಆತ್ಮಕಥೆಯಲ್ಲಿ 'ಹೆಣ ಎತ್ತುವ ಮೊದಲು ಬಾರಿಸುವ ಹಲಗೆಯಲ್ಲಿಯೂ ನಮಗೊಂದು ಸಲಿಗೆಯಿತ್ತು. ಪ್ಲೇಗು ಕಾಲರಾ ಮೈಲಿಯ ಉಪಟಳದಿಂದ ಸತ್ತವರ ಮೆರವಣಿಗೆ ನೋಡುವದು ಅಪರೂಪವಾಗಿರಲಿಲ್ಲ. ಕೆಲವೊಂದು 'ವಿಮಾನ' ಮೆರವಣಿಗೆ ನೋಡಲು ನಾವು ಸಾಲೆ ಬಿಟ್ಟು ಕೂಡ ಬರುತ್ತಿದ್ದೆವು. ಮುಸಲ್ಮಾನರ ಹೆಣದ ಹಿಂದೆ ಹೋಗುವುದರಲ್ಲಿ ಒಂದು

ಸುವಾಸನೆಯ ಎಳಿತವಿತ್ತು. ಅತಿ ಜುಗುಪ್ಸೆಯ ನೋಟ ಎಂದರೆ ಬ್ರಾಹ್ಮಣರ ಹೆಣದ್ದು. ಅದನ್ನು ನಾವು ತುಂಬಾ ಭಯದಿಂದಲೇ ನೋಡುತ್ತಿದ್ದೆವು'[೧] ಎಂದು ವಿವರವಾಗಿ ತಿಳಿಸಿದ್ದಾರೆ.

ಬೇಂದ್ರೆಯವರು ಜನಸಾಮಾನ್ಯರ ಕವಿ. ಅವರು ಸಾಧಾರಣರಲ್ಲಿ ಅಸಾಧರಣ ವ್ಯಕ್ತಿತ್ವವನ್ನು ಕಂಡು ಗೌರವಿಸುತ್ತ ಜೀವಿಸಿದವರು. 'ಬಡತನ ಒಡೆತನ ಕಡೆತನಕುಳಿದಾವೇನ । ಎದೆ ಹಿಗ್ಗು ಕಡೆಮುಟ್ಟು' ಎಂದು ಎದೆಹಿಗ್ಗಿಗಾಗಿ ಆಶಿಸಿದವರು. ಅವರು ಸದಾ ಹಂಬಲಿಸುತ್ತಿದ್ದುದು :

'ಗುಡಿಸಲವನ್ನೆ ಗುಡಿಯೆನುವಂತೆ
ಬದುಕುವರೆಲ್ಲಾ ದೀನ ಜನಾ.
ಚಿಂತೆಯ ಬಿಟ್ಟು ಎದೆಗೆದೆಕೊಟ್ಟು
ಕಳೆಯುವೆನಲ್ಲಿಯೆ ನನ್ನ ದಿನಾ'[೨]

ಎಂಬುದಾಗಿತ್ತು. ಅವರ 'ಸರ್ವವರ್ಣಮಾನವ' ಎಂಬ ಚಿಂತನೆಗೆ, ಮುಕ್ತ ಬಾಲ್ಯದಲ್ಲಿ ಅವರು ಕಂಡ ಜೀವನ ವೈವಿಧ್ಯ ಹಾಗೂ ಸಾವಿನ ಅರಿವು ಕಾರಣವಾಗಿದೆ.

'ಸಿರಿವಂತ ಇದ್ದರು, ಸಿರಿವಂತ ಸತ್ತರು
  ಸಿರಿವಂತ ಅತ್ತರು, ಅದು ಭೂಷಣಾ
ಇದ್ದರೆ ಕಲ್ಯಾಣ, ಸತ್ತರೆ ಕೈಲಾಸ
  ಅತ್ತರೆ ಭಜನೆಯ ಶಿವ ಘೋಷಣಾ'

ಸಿರಿವಂತ ಅತ್ತರೆ ಸಮಾಜ ಅದನ್ನು 'ಭಜನೆಯ ಶಿವಘೋಷಣಾ' ಎಂದು ಭಾವಿಸುತ್ತದೆ. ಬಡವರು ನೆಲ್ಲಕ್ಕಿ ಅನ್ನ ಉಂಡರೂ ಹಾರಕದ ಅಕ್ಕಿ ಅನ್ನ ಉಂಡರು ಅನ್ನುತ್ತಾರೆ. ಸಿರಿವಂತರು ಹಾರಕದ ಅಕ್ಕಿ ಅನ್ನ ಉಂಡರೂ ಸಣ್ಣಕ್ಕಿ ಅನ್ನ ಉಂಡರು ಅನ್ನುತ್ತಾರೆ. ಸಿರಿವಂತರು ಮಾಡಿದ್ದನ್ನು ತಪ್ಪು ಎಂದು ಭಾವಿಸದೆ ಸರಿ ಎಂದು ಹೇಳಬೇಕು ಎನ್ನುತ್ತಾರೆ. 'ಚಿನ್ನ ಇದ್ದೋರ್ದು ತೊನ್ನು ಮುಚ್ತು' ಎಂದು ಗಾದೆ ಮಾತಿದೆ. ಈ ಎಲ್ಲ ಅರ್ಥವೂ ಬೇಂದ್ರೆಯವರ ಕಾವ್ಯದ ಈ ನಾಲ್ಕೇ ನುಡಿಯಲ್ಲಿ ಅಡಗಿ ಕುಳಿತಿದೆ. ಸಿರಿವಂತರ ಹೆಣದ ಮೆರವಣಿಗೆಯ ವೈಭವವನ್ನು ಬೇಂದ್ರೆಯವರಷ್ಟು ವ್ಯಂಗ್ಯಾತ್ಮಕವಾಗಿ ಯಾರೂ ಬಣ್ಣಿಸಿಲ್ಲ ಎನಿಸುತ್ತದೆ.

'ಹಾರಿಮದ್ದಿನ ಸದ್ದು ಕೇಳಿದ್ದೆ ಅದುರಿದ್ದು
  ತಲೆ ಹಾಕಿತ್ತಾಗೀಗ ಸತ್ತ ಹೆಣಾ
'ಸತ್ತರೆ ಸತ್ತಿನೀ' ಇದ್ದವರ ಮೆರವಣಿಗೆ
  ಹಲಗೆ ಸೊಲ್ಲಿಸುತಿತ್ತು ಕೊನೆಯ ರಿಣಾ'

---

೧ ದ.ರಾ. ಬೇಂದ್ರೆ, ಆತ್ಮಕಥನ, ಪುರ್ವೋಕ್ತ ಪು. ೪೨೪

೨ ದ.ರಾ. ಬೇಂದ್ರೆ, ಪರಾಕಿ, ಸಮಾಜ ಪುಸ್ತಕಾಲಯ, ಧಾರವಾಡ ೧೯೭೭, ಪು. ೨೪

ಅವರ ಬಾಲ್ಯಕಾಲದಲ್ಲಿ ಹೆಣದ ಮೆರವಣಿಗೆಯಲ್ಲಿ ಒಂದು ಉದ್ದ ಕೊಳವೆಯಲ್ಲಿ ಮದ್ದು ಇಟ್ಟು, ಅದರಲ್ಲಿ ಗಟ್ಟಿಗಡಾರಿಯನ್ನು ತುರುಕಿ, ಜೋರಾಗಿ ನೆಲಕ್ಕೆ ಬಡಿದು ಪಟಾಕಿ ಹಾರಿಸುತ್ತಿದ್ದರು. ಶವವನ್ನು ಕುಳ್ಳಿರಿಸಿ ಮೆರವಣಿಗೆ ಮಾಡುವ ವೀರಶೈವ ಜನಾಂಗದ ಹೆಣ ಹೊತ್ತವರು ಆ ಪಟಾಕಿ ಸದ್ದಿಗೆ ಅದುರಿದಾಗ ಅವರು ಹೊತ್ತಿದ್ದ ಹೆಣವು 'ತಲೆಹಾಕಿತ್ತಾಗೀಗ!'. ಅದು ಸೂಕ್ಷ್ಮಗ್ರಾಹಿಯಾದ ಸಮುದಾಯದ ಬಾಲಕ ಬೇಂದ್ರೆ ಹೆಣದ ಮೆರವಣಿಗೆಯಲ್ಲಿ ಕುಣಿಯುತ್ತ ನಲಿದ ಅನುಭವ.

ಹಲಗೆ ನಮ್ಮ ಗುಂಗಿಗೆ ತಕ್ಕಂತೆ ನಾದ ಹೊಮ್ಮಿಸುವ ಗ್ರಾಮ್ಯದ ಗಮ್ಮತ್ತಿನ ಚರ್ಮವಾದ್ಯ. ಶವದ ಮೆರವಣಿಗೆಯಲ್ಲಿ ಸಾಗುವ ಜನರ ಉತ್ಸಾಹ ಕಂಡು 'ಸತ್ತರೆ ಸತ್ತಿನೀ, ಸತ್ತರೆ ಸತ್ತಿನೀ' ಎಂದು ಹಲಗೆ ನುಡಿಯುತ್ತಿದೆಯೆಂಬ ಬೇಂದ್ರೆ ಮನಸ್ಸಿನ ವಾಸ್ತವಿಕ ಅತಿ ಸೂಕ್ಷ್ಮದ್ದಾಗಿದೆ. ಇದು ಇದ್ದವರ ಮೆರವಣಿಗೆ ಎಂಬುದು ಜೀವಿಸಿರುವವರ ಎಂಬ ಅರ್ಥದ ಜೊತೆಗೆ ಹಣವುಳ್ಳವರ ಎಂಬ ಅರ್ಥವನ್ನು ವ್ಯಂಜಿಸುತ್ತದೆ. ಅಂತಹವರ ಮೆರವಣಿಗೆಗೆ ಹಲಗೆ - ತಮಟೆ ಕೊನೆಯ ಋಣವನ್ನು ಸೊಲ್ಲಿಸುತ್ತಿತ್ತು. (ಸೊಲ್ಲಿಸು ಎಂಬ ಪದವು ಸಲ್ಲಿಸು ಎಂಬ ಅರ್ಥದ ಜೊತೆಗೆ ಸೊಲ್ಲು = ಮಾತು ಆಗಿತ್ತು ಎಂಬ ಅರ್ಥವನ್ನು ಹೊಂದಿದೆ.)

ಹೆಣವಾಗಿ ಮೆರವಣಿಗೆಗೆ ಈಡಾದವನು ಈ ಸಂಸಾರದ ಸೆರೆಯನ್ನು ಬಿಡಿಸಿಕೊಂಡ. ಇದ್ದವರು ಮೆರವಣಿಗೆ ಮಾಡುತ್ತಿರುವುದರಿಂದ ಸತ್ತವನೆ ಪಾಪಿ. ಒಬ್ಬ ಈ ಜೀವನದ ಸೆರೆಯಿಂದ ಮುಕ್ತನಾದರೆ, ಅವನ ಹೆಣವನ್ನು ಹೊತ್ತವರು ಸೆರೆಯಾದ ಹೆಂಡಕ್ಕೆ ಸೆರೆ ದಾಸಯಾಗಿದ್ದಾರೆ. ಮೆರವಣಿಗೆಯಲ್ಲಿ ಕುಂಕುಮದ ಹುಡಿ, ಗುಲಾಲು ತೂರಾಡುತ್ತಾರೆ. ಸಿದ್ದಿಗೆ ವೀಳ್ಯದೆಲೆ, ಹಣ ತೂರಾಡುತ್ತಾರೆ. ಇದು ಜೀವನದ ವೈರುಧ್ಯ.

ಬೇಂದ್ರೆಯವರಿಗೆ ಮುಸಲ್ಮಾನರ ಹೆಣದ ಮೆರವಣಿಗೆ ಬಗ್ಗೆ ತುಂಬಾ ಗೌರವ. ತಡೆರಹಿತ ಬಾಲ್ಯದಲ್ಲಿ ಕಂಪಿಗೆ, ಸತ್ಯಕ್ಕೆ, ಆನಂದಕ್ಕೆ ಮನಸ್ಸು ತೆರೆದುಕೊಂಡಿರುತ್ತದೆ. ಅಲ್ಲಿ ಜಾತಿ, ಮತ, ಪಂಥದ ಕೆಸರು ಅಂಟಿರುವುದಿಲ್ಲ. ಅಂತಹ ಬಾಲ್ಯದ ಅನುಭವವನ್ನು ಬೇಂದ್ರೆಯವರು ಇಳಿವಯಸ್ಸಿನಲ್ಲಿ ಮೆಲುಕು ಹಾಕುವಾಗ ಚಿತ್ರಿಸಿರುವುದು ಮುಸಲ್ಮಾನರಲ್ಲಿ ತುಂಬಾ ಹಿಂದುಳಿದ ಪಂಗಡದವರೆಂದು ಕರೆಯುವ ಪೆಂಡಾರಿ ಸಾಬನ ಮೆರವಣಿಗೆ. ಅದು ಬೇಂದ್ರೆಯವರು ಸಾಧಾರಣರಲ್ಲಿ ಸಾಧಾರಣರನ್ನು ಪ್ರೀತಿಸುತ್ತಿದ್ದುದರ ದ್ಯೋತಕ. ಅವನ ಘೋರ ಬಡತನ, ಅಸಹಾಯ ಸ್ಥಿತಿಯ ಜೀವನರೀತಿ ಸಾವಿಗೆ ಕಾರಣವಾಗಿರುವುದನ್ನು ಬೇಂದ್ರೆಯವರು 'ಹ್ಯಾಂಗಾರೆ ಸತ್ತರು ಶೃಂಗಾರವಾಗಿದ್ದ ಪೆಂಡಾರಿ ಸಾಬನು ಕೊನೆಯ ದಿನ' ಎಂದಿದ್ದಾರೆ. 'ಹ್ಯಾಂಗಾರೆ ಸತ್ತರು' ಎಂಬ ನುಡಿಯಲ್ಲಿ ಅವನ ಜೀವನದ ಎಲ್ಲಾ ದೈನ್ಯ ಮಡುಗಟ್ಟಿದೆ. ಮುಸಲ್ಮಾನ ಜನಾಂಗದಲ್ಲಿ ಸಾವಿಗೆ ಹೆಗಲು ಕೊಡುವ ಜನಾಂಗಪ್ರೀತಿಯು ಶವಶೃಂಗಾರ ಮೆರವಣಿಗೆಯನ್ನು ಗೌರವದಿಂದ ಕಂಡಿದೆ. ಬೇಂದ್ರೆ ಬಾಲಮನಸ್ಸು ಊದುಬತ್ತಿ ಮತ್ತು ಅತ್ತರಿನ ಕಂಪಿಗೆ,

ಕಲ್ಮಾದ ಇಂಪಿಗೆ ಸೋತಿದೆ. ಕಲ್ಮಾ ಅಲ್ಲಾನ ಕುರಿತ ಪ್ರಾರ್ಥನೆ. ಅಳುವ ಅಬ್ಬರವಿಲ್ಲದೆ ಅಂತ್ಯಯಾತ್ರೆಯನ್ನು ಶಾಂತವಾಗಿ ನಡೆಸುವ ಆ ಜನಾಂಗದಲ್ಲಿ ಕುರಾನ್‌ನ ಕಲ್ಮಾ ಪಠಿಸುತ್ತಾ ಸಾಗುತ್ತಾರೆ.

'ಹಾರುವನು ಸತ್ತರೆ ಬೆನ್ಗುಂಟ ಅತ್ತರೇ?
ಹೊತ್ತವರ ಮುಖದಲ್ಲು ಪ್ರೇತಕಳೆ'

ಬ್ರಾಹ್ಮಣ ಸತ್ತರೆ ಅವನ ಬೆನ್ನ ಹಿಂದೆ ಯಾರೂ ಅಳುವವರಿರುವುದಿಲ್ಲ. ಸ್ಮಶಾನಕ್ಕೆ ಹೆಂಗಸರು ಮಕ್ಕಳು ಬರುವಂತಿಲ್ಲ. ಆ ಹೆಣವನ್ನು ಹೊತ್ತುಕೊಂಡವರಲ್ಲಿ ಹಸಿವಿನ ಬಾಧೆಯಿಂದ ಪ್ರೇತಕಳೆ ಆವರಿಸಿತ್ತು- ಎಂದು ಸಾವನ್ನು ಪ್ರೇತವಾಗಿಸಿ ಕಾಣುವ ಆ ಮನಸ್ಸನ್ನು ತುಂಬಾ ಮಾರ್ಮಿಕವಾಗಿ ಬೇಂದ್ರೆ ಚಿತ್ರಿಸಿದ್ದಾರೆ. ಪ್ಲೇಗು ಬಂದರೆ 'ಯಮನೂರ ಹಾವಳಿ'ಯಾಗಿ ಅಲ್ಲಿ 'ಸಾವಿಗೆ ಬರುತಿತ್ತು ಸುಗ್ಗಿ ಬೆಳೆ' ಎಂದು ಪ್ಲೇಗಿನ ಸಾವನ್ನು 'ಸುಗ್ಗಿ ಬೆಳೆ'ಯಾಗಿ ಬಣ್ಣಿಸಿದ್ದಾರೆ. ಬೇಂದ್ರೆಯವರು ಧಾರ್ಮಿಕ, ಮತೀಯ ಸಾಮರಸ್ಯದ ಸುಂದರ ಸಮುದಾಯದಲ್ಲಿ ಕುಡಿಯೊಡೆದ ಕಾರಣ ಮಾನವೀಯ ಚಿಂತನೆಯ ಕಾವ್ಯ ಅವರಿಂದ ಹೊಮ್ಮಿದೆ. ಅವರ ಕಾವ್ಯದಲ್ಲಿ ಜಾತ್ಯತೀತ ಚಿಂತನೆ ಅತಿಸಹಜವಾಗಿ ಪ್ರಕಾಶಗೊಂಡಿದೆ. ಅವರ ಕಾವ್ಯ ಒಂದು ಕಾಲಮಾನದ ಇತಿಹಾಸದ ದಾಖಲೆಯಂತಿರದೆ ಮಾನವೀಯ ಮೌಲ್ಯಗಳ ಶೋಧವಾಗಿದೆ.

ಜೀವಂತ ಇದ್ದಾಗ ನಮ್ಮ ಭಾಗಕ್ಕೆ ಇಲ್ಲವಾಗಿದ್ದವರು ಸತ್ತಾಗ ಬರುತ್ತಾರೆ. ಅವರು ನಿಜವಾದ ನಂಟರಲ್ಲ. ಅವರು ಗಂಟು ಮನಸ್ಸಿನ ಕನಸಿನ ನಂಟರು. ಬೇಂದ್ರೆಯವರು ಶ್ರೀಮಂತರನ್ನು ಗಂಟುಮನಸ್ಸಿನವರೆಂದು ಕರೆದಿರುವುದು ತುಂಬಾ ಅರ್ಥಪೂರ್ಣವಾಗಿದೆ. ಶವಗಳ ಮೆರವಣಿಗೆಯ ಚಿತ್ರಣದಲ್ಲಿಯೇ ಬಾಲ್ಯ ಕಂಡುಂಡ ಸತ್ಯವನ್ನು ಆಯಾ ಜನಾಂಗದ ನಂಬಿಕೆ, ಆಚರಣೆ ಹಿನ್ನೆಲೆಯಲ್ಲಿ ಶೋಧಿಸಿದ್ದಾರೆ. ವ್ಯಕ್ತಿ ಹೇಗೆ ಬದುಕಿದ್ದ ಎಂಬುದು ಸತ್ತ ನಂತರ ಜನರ ಬಾಯಲ್ಲಿ ನಿಜವಾಗಿ ಹೊಮ್ಮುತ್ತದೆ.

'ಮಣ್ಣಾದ ಮೈವಂತಾ, ಮಾತಾದ ಗುಣವಂತಾ
ತಾನಾಗಿ ಉಳಿದಿತ್ತು ತನ್ನತನಾ'.

ಮಹಿಮಾವಂತನೆಂದು ಮೈಹೊತ್ತು ಮೆರೆದ ಸಿರಿವಂತ ಮಣ್ಣಾಗಿ ಹೋದ; ಗುಣವಂತ ಎಲ್ಲರ ಬಾಯಲ್ಲಿ ಮಾತಾಗಿ ಉಳಿದ. ಅವನನ್ನು ಎಲ್ಲರೂ ನೆನೆಸುತ್ತಾರೆ. ಅರ್ಥಪೂರ್ಣವಾಗಿ ಬದುಕಿದಾಗ ತನ್ನತನ ತಾನಾಗಿ ಈ ಜಗದಲ್ಲಿ ಉಳಿಯುತ್ತದೆ ಎಂಬ ಚಿಂತನೆಯನ್ನು ಬೇಂದ್ರೆ ನೀಡಿದ್ದಾರೆ. ಸಾವನ್ನು ಅರ್ಥಮಾಡಿಕೊಂಡ , ಬೇಂದ್ರೆ ಬದುಕನ್ನು ಅರ್ಥಪೂಣವಾಗಿಸಿಕೊಂಡು ಚಿಂತನಶೀಲ ಕಾವ್ಯ ನೀಡಿದ್ದಾರೆ.

೧೮೯೮ರಲ್ಲಿ ಅವರ ತಮ್ಮ ಹುಟ್ಟಿದ, ತೀರಿಕೊಂಡ. ೧೯೦೨ರಲ್ಲಿ ಚಿಕ್ಕಪ್ಪ ಬಾಳಾಕಾಕಾ (ನರಸಿಂಹ) ಮತ್ತು ಗೋಖಲೆ ಗೋವಿಂದರಾಯರು ತೀರಿಕೊಂಡರು. ೧೯೦೭ರಲ್ಲಿ ಇಂಗ್ಲೀಷ್ ೨ನೇ ಇಯತ್ತೆ ಓದುವಾಗ ತಂದೆ ತೀರಿಕೊಂಡರು. ೧೯೧೩ರಲ್ಲಿ ಮೆಟ್ರಿಕ್ಯುಲೇಷನ್

ಪಾಸಾದಾಗ ತಮ್ಮ ಮನೆಯ ಆಧಾರವಾದ ಅಜ್ಜಿ ತೀರಿಕೊಂಡರು. ಆ ಸಾವುಗಳಲ್ಲಿ ತಮ್ಮ ರಾಘುವಿನ ಸಾವು ಅಸಹಾಯಕ ಬಡವರ ಬಾಳಿನ ಒಂದು ಗಾಥೆಯಂತಿದೆ. ಅಂತಹ ಕ್ರೂರ ನೋವನ್ನು ಅನುಭವಿಸಿದುದರಿಂದಲೇ ಬೇಂದ್ರೆ ಬದುಕಿನ ಬೆಂಕಿಯಲ್ಲಿ ಉಕ್ಕುಗೊಂಡು 'ಸಮರಸವೇ ಜೀವನ' ಎಂಬ ಚಿಂತನೆಯನ್ನು ನೀಡಲು ಸಾಧ್ಯವಾಯಿತು. ಬೇಂದ್ರೆಯವರಿಗೆ ಶಾಲೆಯಷ್ಟೇ ಮುಖ್ಯವಾದುದು ಆಟ. ಅಜ್ಜಿ ತೀರ್ಥಯಾತ್ರೆಗೆ ಹೋದಾಗ ಮನೆಯಲ್ಲಿ ತಾಯಿ ತಮ್ಮಂದಿರ ಜೊತೆ ಇದ್ದ ಬಾಲಕ ಬೇಂದ್ರೆ 'ಅಜ್ಜಿ ಹಿಂತಿರುಗಿ ಬಂದೊಡನೆ ಎರಡು ದಿನ ಆಟ ಬಿಟ್ಟಿದ್ದವನು ಹೆಚ್ಚು ಹೊತ್ತು ಆಟವಾಡಿ ತಡಮಾಡಿ ಮನೆಗೆ ಬಂದಾಗ' ತಾಯಿ ರಾಘುವಿನ ಗೊಬ್ಬರ ಜ್ವರದಿಂದ ಗಾಬರಿಯಾಗಿ, ಆ ಎಂಟೊಂಬತ್ತು ವರ್ಷದ ಹುಡುಗನನ್ನು ಬಗಲಲ್ಲಿ ಹೊತ್ತುಕೊಂಡು ಡಾಕ್ಟರಲ್ಲಿಗೆ ಹೋಗುವಳು. ತಾಯಿಯ ಜೊತೆಗೂಡಿ ಹೋದ ಬಾಲಕ ಬೇಂದ್ರೆ ತಮ್ಮ ಅಸಹಾಯಕತನವನ್ನು 'ಗೋಖಲೆ ಕೃಷ್ಣಮಾಮಾ ಬಿಲ್ಲಿನ ವಿಷಯ ಡಾಕ್ಟರಿಗೆ ಏನೋ ಹೇಳಿ ಹೋಗಿರಬೇಕು. ಡಾಕ್ಟರು ಏನೋ ಪ್ರಕೃತಿ ನೋಡಿದರು. ಔಷಧ ಬಾಟ್ಲಿಯನ್ನು ಕೊಟ್ಟರು' ಎಂದು ಹೇಳಿದ್ದಾರೆ. ಹಿಂತಿರುಗಿ ಮನೆಯ ಬಾಗಿಲಿಗೆ ಬರುವಾಗ್ಗೆ ಆ ಮಗ ತಾಯಿಯ ಕಂಕುಳಲ್ಲಿಯೇ ಪ್ರಾಣಬಿಡಲು 'ತಾಯಿ ಕುಕ್ಕರಿಸಿಬಿಟ್ಟಳು'. ತಾಯಿಯು ದುಃಖ ಕಟ್ಟೊಡೆದು ಆರ್ಭಟಿಸಿದಾಗ ಅಜ್ಜಿ, ನೆರೆಮನೆಯ ಹೆಂಗಸರು ಬಂದರು. ಅಂದಿನ ಆ ಕಾಳರಾತ್ರಿಯ ಸಾವಿನ ಸ್ಪರ್ಶ ಆ ಕುಟುಂಬವನ್ನು ಆವರಿಸಿದ ರೀತಿ, ಅದನ್ನು ಅವರು ಎದುರಿಸಿದ ಧೈರ್ಯ 'ಎಂಟು ಎದೆಯ ಬಂಟ ಬಡವ'ನದಾಗಿದೆ. ಅದನ್ನು ಬೇಂದ್ರೆಯವರು 'ಹತ್ತು, ಹನ್ನೊಂದು, ಹನ್ನೆರಡು, ಒಂದು ಎರಡು ಹೊಡೆದವು. ನೆರೆಯವರು ಮನೆ ಸೇರಿದರು. ನಾವು ಮೂವರು ಆ ಹುಡುಗನನ್ನು ಎದುರಿಗೆ ಹಾಕಿಕೊಂಡು ಕುಳಿತುಬಿಟ್ಟೆವು. ತಮ್ಮ ಕೃಷ್ಣನಿಗೇನೋ ನಿದ್ದೆ ಚೆನ್ನಾಗಿತ್ತು. ಅದೂ ಒಂದು ಸಮಾಧಾನದ ವಿಷಯ. ಬೆಳಗಾದ ಮೇಲೂ ಈ ಹೆಣ ಹೀಗೆ ಇಟ್ಟುಕೊಂಡಿರುವುದೇ ? ಎಂಬ ವಿಚಾರ ನಮ್ಮ ಅಜ್ಜಿಗೆ ತಲೆದೋರಿ ಚಿಂತೆಗೂ ಯೋಜನೆಗೂ ಪ್ರಾರಂಭವಾಯಿತು. ನೆರೆಹೊರೆಯ ಒಬ್ಬಿಬ್ಬರು ಗೃಹಸ್ಥರು ನಮ್ಮ ಸಮಾಧಾನವನ್ನಾಗಲಿ, ಸಹಾಯವನ್ನಾಗಲಿ ಮಾಡಲಾರರೇ? ಮಧ್ಯರಾತ್ರಿಗೇ ಹೋಗಿಬಿಟ್ಟಿದ್ದರು'.

'ಹಣಮಂತರಾವ ಎಂಬೊಬ್ಬ ವೈಷ್ಣವ ಸದ್ಗೃಹಸ್ಥರು ರೈಟರ ಓಣಿಯಲ್ಲಿ ಆ ಕಾಲಕ್ಕಿರುತ್ತಿದ್ದರು. ಅವರೂ ಒಂದು ಕಾಲಕ್ಕೆ ನಮ್ಮಲ್ಲಿ ಉಂಡು, ಓದಿ, ಕೆಲಸಕ್ಕೆ ಹತ್ತಿ ಈಗ ಸಂಸಾರ ಮಾಡಿಕೊಂಡಿರುತ್ತಿದ್ದರು. ರಾತ್ರಿಯಲ್ಲಿ ನಾನೊಬ್ಬನೇ ಹೋಗಿ ಆ ಗೃಹಸ್ಥರಿಗೆ ಸಧ್ಯದ ಮಾತು ಹೇಳಿ ಬರಬೇಕು ಎಂಬ ಆಜ್ಞೆಯಾಯಿತು'. ಅಜ್ಜಿಯ ಆಜ್ಞೆಯನ್ನು ಪಾಲಿಸಲು ಬೆಳಗಿನಿಂದ ಏನನ್ನೂ ತಿನ್ನದೆ ದಣಿವಾಗುವವರೆಗೆ ಆಡಿದ್ದ ಬಾಲಕ ಬೇಂದ್ರೆ ನಾಲ್ಕು ಗುಟುಕು ನೀರು ಕುಡಿದು ಹಾದಿಯಲ್ಲಿ ಬಿದ್ದ ಒಂದು ದಂಟನ್ನು ಧೈರ್ಯಕ್ಕೆಂದು ಕೈಯಲ್ಲಿ ಎತ್ತಿಕೊಂಡು[೩]

೩ ದ.ರಾ. ಬೇಂದ್ರೆ, ಆತ್ಮಕಥನ, ಪೂರ್ವೋಕ್ತ, ವಿವರಗಳಿಗೆ ನೋಡಿ ಪು. ೪೨೦, ೪೨೧, ೪೨೨

ಹಣಮಂತರಾಯರ ಮನೆ ಹುಡುಕಿ ಹೇಳಿಬರುತ್ತಾನೆ. ಅದು ಬಡತನದ ಬಾಳು ಮತ್ತು ಸ್ತ್ರೀ ಪೋಷಿತ ಬಾಲ್ಯ ಕಲಿಸಿದ ಶಿಸ್ತು. ಆ ಶಿಸ್ತೇ ಅವರ ಕಾವ್ಯದ ಶಿಸ್ತು.

'ಚಿದಂಬರ ಸತ್ತಾ - ಬೆಳಕು ಕಂಡೆ
ರಾಘೂ ಸತ್ತಾ - ಅವ್ವನ ಕೂಡ ನಾನೂ ಅತ್ತೆ
ಕಣ್ಣು ಒರಸಿಕೊಂಡೆ, ಅವ್ವಗs ನನ್ನ ಕಣ್ಣೀರು
ಕಾಣಬಾರದು ಅಂತ'[೪]

**ರಸಿಕರು ಸಂತತ ಉತ್ಸುಕರು**

ಬೇಂದ್ರೆಯವರು ವರ್ಣಿಸಿರುವ ಹಬ್ಬ ಹರಿದಿನ, ಜಾತ್ರೆಗಳ ವಿವರಗಳು ಧಾರವಾಡದ ಧಾರ್ಮಿಕ ಸಂಸ್ಕೃತಿಯ ಅಧ್ಯಯನಕ್ಕೆ ಆಕರವಾಗಿವೆ. ಒಂದುನೂರು ವರ್ಷದ ಹಿಂದಿನ ಕಾಮನಕಟ್ಟೆಯ ಜೀವನೋಲ್ಲಾಸ, ಸಹಬಾಳ್ವೆ, ಜೀವನಪ್ರೀತಿ, ಅನಸೂಯಾ ಮೈತ್ರಿ ಬೇಂದ್ರೆಯವರ ಜೀವವಾಹಕವಾಗಿ, ಅವರನ್ನು ಮಾನವ ಪ್ರೇಮಿಯಾಗಿಸಿ, ವಿಶ್ವಕುಟುಂಬಿಯಾಗಿಸಿವೆ. ಅವರು ತಾವು ಸಮೃದ್ಧವಾಗಿ ವಿಕಾಸಗೊಂಡ ಆ ಸ್ಥಳವನ್ನು ಕುರಿತು 'ಪಗಡೆಯಾಟದ ಪಟ್ಟದಂತೆ ನಾಲ್ಕೂ ದಿಕ್ಕಿಗೆ ಚಾಚಿಕೊಂಡ ಕಾಮನಕಟ್ಟೆಯ ಆ ಕೂಟ ಅಲ್ಲಿಯ ಎಲ್ಲದಕ್ಕೂ ಆಶ್ರಯಸ್ಥಾನವಾಗಿತ್ತು. ವರ್ಷಕ್ಕೆ ನಾಲ್ಕು ಸಲವಾದರೂ ಆಗುವ ದೊಡ್ಡಾಟ, ಬಯಲಾಟ, ಕಾಮನಹಬ್ಬ, ಅಲಾಬಿಯ ಮೆರವಣಿಗೆ, ಶ್ರಾವಣಮಾಸದೊಳಗಿನ ಅತಿ ವಿಜೃಂಭಣೆಯ ಸೋಗಿನ ಪರಂಪರೆ, ಜಂಗು, ಹೆಜ್ಜೆ ಮೇಳ, ಸನಾದಿಯವರ ಉತ್ಸಾಹದ ವಿಲಾಸ, ಹಬ್ಬಹರಿದಿನಗಳಲ್ಲಿ ಕಂಡುಬರುವ ಉತ್ಸಾಹದ ಉಬ್ಬು, ಹುತ್ತಪ್ಪನ ಕೆಸರಾಟ, ಕಾಮನ ಓಕಳಿ, ಸಂಕ್ರಾಂತಿಯ ಕುಸುರೆಳ್ಳು, ದಸರೆಯ ಬಂಗಾರ, ದೀವಳಿಗೆ ಆರತಿ ಎಲ್ಲವನ್ನು ಸಾಕ್ಷಿಯಾಗಿ ನೋಡುತ್ತಿತ್ತು'[೫] ಎಂದು ಹೆಮ್ಮೆಪಟ್ಟಿದ್ದಾರೆ.

'ಕರಿಯಿತ್ತು, ಮೆರಿಯಿತ್ತು, ಕಾರಹುಣ್ಣಿವಿ ಇತ್ತು
ಯಾರ ಹಂಗೂ ಇಲ್ಲ ಎರಡು ದಿನಾ
ಎತ್ತಿನ, ಕುದುರಿಯ ಕೊರಳಿಗೂ ಹೂಹಾರ
ಯಾರು ಅಂದರಣ್ಣಾ ಇವಕೆ ದನಾ?'

ಬೇಂದ್ರೆಯವರ ಎಳೆಯ ವಯಸ್ಸಿನಲ್ಲಿ ಹಬ್ಬ ಸಂಭ್ರಮಗಳು ಉಂಟುಮಾಡಿದ ಪ್ರಭಾವ ಇಳಿವಯಸ್ಸಿನ ಅಂತರ್ಯಾನದಲ್ಲಿ ಜೀವನದ ಸ್ಪಷ್ಟ ಅರ್ಥಗಳನ್ನು ಕಂಡಿದೆ. ಕಾರಹುಣ್ಣಿಮೆ

---

೪ ದ.ರಾ. ಬೇಂದ್ರೆ, ಔದುಂಬರಗಾಥೆ, ವಾಮನಬೇಂದ್ರೆ(ಸಂ.) ವರಕವಿ ಡಾ. ದ.ರಾ. ಬೇಂದ್ರೆ ಸಂಶೋಧನ ಸಂಸ್ಥೆ, ಹುಬ್ಬಳ್ಳಿ, ೨೦೦೩ ಸಂಪುಟ. ೩, ಪುಟ. ೪೨೩

೫ ದ.ರಾ. ಬೇಂದ್ರೆ, ಆತ್ಮಕಥನ ಪೂರ್ವೋಕ್ತ ಪು. ೪೨೩

ಹಬ್ಬ ಎಂದರೆ ದನಗಳ ಶೃಂಗಾರ ಮತ್ತು ಅವುಗಳನ್ನು ಕಿಚ್ಚು ಹಾಯಿಸುವ ಹರ್ಷೋದ್ಗಾರ. ಬೇಂದ್ರೆಯವರು ಕಾರಹುಣ್ಣಿವಿ ಹಬ್ಬದಲ್ಲಿ ಕರಿಯಿತ್ತು ಅಂದರೆ ದನಗಳನ್ನು ಕಿಚ್ಚು ಹಾಯಿಸುವ ಆಚರಣೆಯಿತ್ತು. ಆ ಆನಂದದಲ್ಲಿ ಮೆರಿಯಿತ್ತು ಅಂದರೆ ಮಿಂಚಿನ ವೈಭವವಿತ್ತು ಎಂದು ಬಣ್ಣಿಸಿದ್ದಾರೆ. ಅದು ಬಾಲ್ಯ ಕಂಡ ಸಾಹಸದ ಮಿಂಚು. ಆ ಉತ್ಸಾಹ ಲಹರಿಯ ಜನದನಗಳ ಸಂತೋಷ ಆಹ್ಲಾದವನ್ನು ಕಾಣಲು ಬಾನಿನಲ್ಲಿ ಕಾರಹುಣ್ಣಿವೆ ಪೂರ್ಣಚಂದ್ರನಿದ್ದು ಆ ಎರಡು ದಿನ ಯಾರ ಹಂಗೂ ಇಲ್ಲದ ಮನೋಲ್ಲಾಸವಿತ್ತು ಎಂದು ಬೇಂದ್ರೆಯವರು ಆ ಕಾಲದ ಸಂತೋಷವನ್ನು ನೆನೆದಿದ್ದಾರೆ. ಆ ಸಮಯಕ್ಕೆ ಮೊದಲು ದನಗಳಿಗೆ ಮೈತೊಳೆದು ಕೊರಳಿಗೆ ಹೂದಂಡೆ ಹಾಕುತ್ತಾರೆ. ಅವು ಸಂತೋಷದಲ್ಲಿ ಪಾಲುಗೊಳ್ಳುವುದರಿಂದ ಅವಕ್ಕೆ ಜೀವವಿದೆ, ಮನಸ್ಸಿದೆ, ಆಹ್ಲಾದದ ಸವಿಯಿದೆ. ಹಾಗಾಗಿ ಬೇಂದ್ರೆ ಪ್ರಶ್ನಿಸಿದ್ದಾರೆ 'ಯಾರು ಅಂದರಣ್ಣಾ ಇವಕೆ ದನಾ?'

ಬೇಂದ್ರೆಯವರು ಬಾಲ್ಯದ ಸವಿ ಸವಿದದ್ದು ಕಾಮನಕಟ್ಟೆಯಲ್ಲಿ. ಅಲ್ಲಿಯ ಕಾಮನಹಬ್ಬ ಅವರಿಗೊಂದು ಆನಂದದೂಟ. 'ಕಾಮನಕಟ್ಟೆ ಅಸಾಮಾನ್ಯವಾಗಿತ್ತು. ನಮ್ಮ ಸರಕಾರಿ ಕಾಮ ಊರಿಗೆ ಶ್ರೇಷ್ಠವಾಗಿತ್ತು. ನಮ್ಮ ಗೌಡರ ಮನೆಯ ಎದುರು ಹೋಳಿಪದ ಹೇಳುವ ಹೊಲತಿಯರಂತೆ ಮತ್ತೆಲ್ಲಿಯೂ ಹೇಳುತ್ತಿರಲಿಲ್ಲ.'[೬] 'ನಿಮ್ಮೋಣಿ ಕಾಮಣ್ಣಾ ಕೆಮ್ಮಣ್ಣ ಮುಕ್ಕ್ಯಾನ । ತಮ್ಮಣ್ಣಾ ಬಾರೋ ಹಂದರಕ' ಎಂದು ಯಾವ ಉಡಾಳನು ಕೇಕೆಹಾಕಲಿ, ನಮ್ಮ ಹುಡುಗರ ಗುಂಪು ಅವನ ಹಾಡು ಮುಗಿಯುವದರೊಳಗೆ ಬಾಯಿ ಹೊಯ್ದುಕೊಂಡು ಬೊಬ್ಬೆ ಎಬ್ಬಿಸಲು ಸನ್ನದ್ಧವಾಗಿರುತ್ತಿತ್ತು'[೭] ಎಂದು ನೆನೆದಿದ್ದಾರೆ. ಕಾಮಣ್ಣನಿಗೆ ಬೆಂಕಿಯ ಹೆದರಿಕೆ ಇರಲಿಲ್ಲ ; ರತಿಯ ಪ್ರಲಾಪಕ್ಕೆ ಹುಡುಗರು ಬಾಯಿ ಬಡಿದುಕೊಳ್ಳುತ್ತಿದ್ದರು.

'ಕಾಮಣ್ಣಗಿರಲಿಲ್ಲ ಕಿಚ್ಚಿನ ಬೆದರಿಕೆ
ಬಾಯ್ಬಡಿದುಕೊಂಡರು ಹುಡುಗ ಜನಾ'

ಕಾಮಣ್ಣನ ಹಬ್ಬದ ನಂತರ ಬರುವುದು ಗಣಪತಿಹಬ್ಬ, ಜನ ಗಣಪತಿಯನ್ನು ನೀರಿಗೆ ಕಳಿಸಿದರೂ ಮುಂದಿನ ವರ್ಷ ಮರಳಿ ಬಾ ಎನ್ನುವರು. ಬೇಂದ್ರೆಯವರು ಗಣಪತಿಯನ್ನು 'ಮೋರಾಯ' ಎಂದು ಧಾರವಾಡದ ಜನರ ನುಡಿಯಲ್ಲಿ ಕರೆದಿದ್ದಾರೆ. ಜನಗಳಿಗೆ ಅವನ ಬಗ್ಗೆ ಆಸೆ, ಭಕ್ತಿ, ಪ್ರೀತಿ, ಉಲ್ಲಾಸ ಅಗಾಧವಾಗಿದೆ - ಎಂಬುದನ್ನು ಬೇಂದ್ರೆಯವರು 'ಎಂಥ ಮನಾ' ಎಂಬ ನುಡಿಯಲ್ಲಿ ಧ್ವನಿಸಿದ್ದಾರೆ.

'ನೀರಿಗೆ ಕಳಿಸಿದರೂ, ಮರಳಿ ಬಾ ಎನುವರು
ಮೋರಾಯ ಓ, ಓ ಹೋಹೋ ಎಂಥ ಮನಾ !'

---

೬ ಅದೇ ಪುಟ. ೪೨೪

೭ ದ.ರಾ. ಬೇಂದ್ರೆ ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. ೫೩

ಬಾಲ್ಯದಲ್ಲಿ ಬೇಂದ್ರೆಯವರು ಕೇಳಿ ನಲಿದ ಜನಪದ ಹಾಡು ಕುಣಿತಗಳಲ್ಲಿ ಮೊಹರಂ ಹಬ್ಬದ ಹಾಡು ಒಂದಾಗಿದೆ. ಆ ಹಬ್ಬದ ಹಾಡು, ಹುಲಿವೇಷದಲ್ಲಿ ಸಮುದಾಯದ ಎಲ್ಲ ಜನರೂ ಭಾಗಿಗಳಾಗಿ ಆನಂದಿಸುತ್ತಿದ್ದುದು ಕನ್ನಡ ನೆಲದ ಸಂಸ್ಕೃತಿಯಾಗಿದೆ. ಬಾಬಯ್ಯನ ಮೆರವಣಿಗೆಯಲ್ಲಿ ಭಕ್ತಿಪೂರ್ಣವಾಗಿ ಜನ ಭಾಗವಹಿಸುತ್ತಿದ್ದುದು 'ದೇವನೊಬ್ಬ ನಾಮ ಹಲವು' ಎಂಬ ಅರಿವಿನ ದ್ಯೋತಕವಾಗಿದೆ. ಆ ಧರ್ಮನಿರಪೇಕ್ಷವಾದ ಭಕ್ತಿ, ಹಾಡಿನ ಗತ್ತು ಗಮ್ಮತ್ತು ಬೇಂದ್ರೆಯವರ ಬಾಲ್ಯವನ್ನು ಧರ್ಮಾತೀತ ಚಿಂತನೆಗೆ ಕೊಂಡೊಯ್ದು -

'ನನ್ನ ಹರಣ
ನಿನಗೆ ಶರಣ
ಸಕಲ ಕಾರ್ಯ ಕಾರಣ
ನಿನ್ನ ಮನನ-
ದಿಂದ ತನನ-
ವೆನುತಿದೆ ತನು ಪಾವನಾ'

ಎಂಬ ಜಗದ ಅನಂತಶಕ್ತನ ಪ್ರಾರ್ಥನೆಗೆ ಅಣಿಗೊಳಿಸಿದೆ.

ಬಾಬಯ್ಯನ ಹಬ್ಬದ ಹಾಡಿನ ಪ್ರಭಾವವನ್ನು ಬೇಂದ್ರೆಯವರು 'ಏ ಹುಸೇನಿ ಬಲೀ ದಲಿಯೋ ಯಾರೆ ಸುಲ್ತಾನ ಅಲ್ಬಿದಾ,ss ಓಹೋ ಇದು ನಡೆದಿತ್ತು. ಗತ್ತಿನ ಕೂಡ ಗತ್ತು; ಗಮಕದ ಜತೆ ಗಮಕಾ ![೮] ಎಂದು ನೆನೆದಿದ್ದಾರೆ.

ಬೇಂದ್ರೆಯವರು ತಮ್ಮ 'ಆತ್ಮಕಥನ'ದಲ್ಲಿ ಹೇಳಿರುವ 'ಒಂಬತ್ತು-ಗೆರೆ ದೇವರು ನಮ್ಮ ಕೂಟಿನಲ್ಲಿ ನಿಂತೇ ಎಲ್ಲರ ನಮಸ್ಕಾರ ಪಡೆಯುತ್ತಿತ್ತು'[೯] ಎಂಬುದು ಬಾಬಯ್ಯನನ್ನು ಕುರಿತದ್ದು. ಧಾರವಾಡದ ಲಕ್ಷ್ಮೀನಾರಾಯಣ ಗುಡಿಯ ಹತ್ತಿರ ಕರ್ನಾಟಕ ಹೈಸ್ಕೂಲಿನ ಸಮೀಪದ ಮಸೀದಿ ಅತ್ಯಂತ ದೊಡ್ಡದು. ಅಲ್ಲಿ ಒಂಭತ್ತು ಗೆರೆಗಳ ಪಂಜಾ ಇತ್ತು. ಹಾಗೆಯೇ ಅಲ್ಲಿ ರಥದಂತೆ ಕಾಣುವ ಕಳಸ ಸಹ ಇರುವ ಡೋಲಿ ಇತ್ತು. ಅದನ್ನು ಹೊಯ್ಯುವಾಗ 'ಏ ಹುಸೇನಿ ಬಲೀದಲಿಯೋ ಯಾರೆ ಸುಲ್ತಾನ ಅಲ್ಬಿದಾ' ಎಂದು ಹಾಡುತ್ತಿದ್ದರು. ಮುಸಲ್ಮಾನರು ಸಾಮಾನ್ಯವಾಗಿ ಬಾಬಯ್ಯನ ಮೆರವಣಿಗೆಯಲ್ಲಿ ಒಯ್ಯುವ ದೇವರ ಪ್ರತೀಕವು ಒಂದು ಹಸ್ತ. ಅಂದರೆ ಐದು ಗೆರೆಗಳ ದೇವರು. ಆದರೆ ಧಾರವಾಡದ ಆ ಮಸೀದಿಯ ಮೆರವಣಿಗೆ ದೇವರ ಪ್ರತೀಕಕ್ಕೆ ಒಂಭತ್ತು ಗೆರೆ ಇತ್ತು.

ಕಾಮನಕಟ್ಟೆಯ ಓಣಿಯಲ್ಲಿ ಒಂಭತ್ತು ಗೆರಿಯ ದೇವರು ಹಿಲಾಲು ಬೆಳಕಿನಲ್ಲಿ ಹೊಳೆಗೆ ಹೊರಟರೆ ಆ ವೈಭವ ನೋಡುವುದೇ ಒಂದು ಆನಂದ. ಆ ಚಂದದ ಮೊಹರಂ ಮೆರವಣಿಗೆ

---

೮ ಅದೇ ಪುಟ. ೫೩

೯ ದ.ರಾ. ಬೇಂದ್ರೆ, ಆತ್ಮಕಥನ, ಪೂರ್ವೋಕ್ತ, ಪು. ೪೨೪

ಕೊನೆಯ ದಿನ ಬಾಜಾರ ಬೀದಿ ಹಾಯ್ದು ಪೊಳಿಗೆ ಹೋಗಲೆಂದು ಪಾಜಾಗಟ್ಟೆಯಾಗಿದ್ದ ನುಚ್ಚಂಬಲಿ ಬಾವಿಗೆ ಹೋಗಿ, ದೇವರನ್ನು ತೊಳೆದು 'ಅಲ್ಬಿದಾಹೋ, ಅಲ್ಬಿದಾ ಹಸನ ಹುಸೇನಿ' ಎಂದು ಹಾಡುತ್ತ ಬರುತ್ತಿದ್ದುದನ್ನು ಬೇಂದ್ರೆ ನೆನೆದಿದ್ದಾರೆ. ಹಿಂದೂ ಮುಸ್ಲಿಂ ಭೇದವಿಲ್ಲದ ಬಾಲ್ಯದ ದೈವಾರಾಧನೆಯಲ್ಲಿ ತೋಯ್ದು ಆನಂದ ಆಹ್ಲಾದದ ಬೆಳಕನ್ನು ಉಂಡಿದ್ದಾರೆ.

'ಹಿಲ್ಲಾಲ ಬೆಳಕಿನಲ್ಲಿ ಹೊಳಿಗೆ ಹೊರಟರು ಚೆಂದ
ನಮ್ಮೋಣಿ ಒಂಭತ್ತು ಗೆರಿ ದೇವರು,
ಬಾಜಾರದಲಿ ಹಾಯ್ಸಿ ಪಾಜಾರಗಟ್ಟಿಗೆ
ಹೊಯ್ದಾಡಿ ಕಳಸದ ರಥ ಹೊರಟರು'

ಹಾಲಿನಂತಹ ಬೆಳದಿಂಗಳ ಶಿವರಾತ್ರಿಯಲ್ಲಿ ಬಯಲಾಟ ಹೆಚ್ಚು. ಬಯಲಾಟ ಮೈದಾನದಲ್ಲಿ ಆಡುವ ನಾಟಕ. ದೇವಾಲಯ ಸಂಸ್ಕೃತಿಗೆ ಸೇರಿದ್ದು. ಅದರ ಜೊತೆಗೆ ಕಾಮದ ದೃಷ್ಟಿಯಿಂದಲೇ ಬಂದು ಹುಡುಗರು ಪೇಟೆಯ ರಂಗು ರಂಗಿನ ಜೀವನವನ್ನು ಅರಿಸಿ, ಬಯಲಾಟಕ್ಕೆ ಆಶಿಸುತ್ತಾರೆ. ಅದನ್ನು ಸೂಕ್ಷ್ಮವಾಗಿ 'ಕ್ವಾಟಿಯ ಹುಡಿಗೆಯರು', 'ಬ್ಯಾಟಿಯ ತರುಣರು' ಎಂದು ಬೇಂದ್ರೆ ಚಿತ್ರಿಸಿದ್ದಾರೆ.

ಬೇಂದ್ರೆಯವರು ಎಳೆ ಕೂಸಾಗಿದ್ದಾಗ ಅಜ್ಜಿ ತಾಯಿಯ ಬೀಸುವ ಪದಗಳು, ದಾಸರ ಪದಗಳಿಗೆ ಒಲಿದುದನ್ನು ಈ ಹಿಂದೆಯೇ ತಿಳಿದಿದ್ದೇವೆ. ಮಕ್ಕಳ ಮನಸ್ಸು ತುಂಬಾ ಸೂಕ್ಷ್ಮವಾಗಿ ಸುಲಭಗ್ರಾಹಿಯಾಗಿರುತ್ತದೆ. ಆಗ ಆ ಎಳೆಯ ಮನಸ್ಸಿನ ಮೇಲೆ ಬಿದ್ದ ಒಳ್ಳೆಯ ಹಾಗೂ ಸ್ಪಷ್ಟ ನುಡಿಲಹರಿಗಳು ಸದಾ ಅವರಲ್ಲಿ ಉಳಿದು ಬೆಳೆಯುತ್ತವೆ. ಹಾಗೆ ಬೇಂದ್ರೆಯವರಲ್ಲಿ ಉಳಿದು ಬೆಳೆದದ್ದು ಜಾನಪದ ಹಾಡುಗಳು. ಅವರು ಬೆಳೆದಂತೆ ಕಾಮನಕಟ್ಟೆಯ ಜಾತ್ರೆ ಉತ್ಸವಗಳಲ್ಲಿ ಪಾಲ್ಗೊಂಡು ಕುಣಿದು ಕುಪ್ಪಳಿಸಿ ಜನಪದ ಬದುಕಲ್ಲಿ ಒಂದಾದರು. ಜಾನಪದ ಗಾಯಕರ ಹಾಡು ಕುಣಿತದ ನಾದ, ಲಯವನ್ನು ವಚನಗಳ ಗದ್ಯದ ಗತ್ತು ಗಮ್ಮತ್ತನ್ನು ತನ್ನದಾಗಿಸಿಕೊಂಡರು. ಆ ಅನುಭವವನ್ನು ಅವರು 'ಮದಾರ ಮಡ್ಡಿಯ ಹಣಮಂತ ದೇವರ ಗುಡಿ ನಮ್ಮ ಸ್ವಚ್ಛಂದ ಲೀಲೆಗಳಿಗೂ, ಮಂಗಾಟಗಳಿಗೂ, ಕಾರ್ತಿಕೋತ್ಸವಗಳಿಗೂ ಎಡೆಯಾಗಿರುತ್ತಿತ್ತು. ನಮ್ಮ ಮನೆಯ ಹತ್ತಿರಿನ ವೀರಭದ್ರ ದೇವರ ಗುಡಿ ನನಗೆ ಅನೇಕ ಬಗೆಯಿಂದ ಧೈರ್ಯ, ಸ್ಥೈರ್ಯ, ವಿಶ್ರಾಂತಿ ಕೊಟ್ಟ ಸ್ಥಾನವಾಗಿದೆ. ಇಲ್ಲಿಗೆ ಅಸರಂತ ಬರುತ್ತಿದ್ದ ಗುಗ್ಗುಳದ ಮೆರವಣಿಗೆಯೊಳಗಿನ ಪುರವಂತರ ವಚನಗಳು ಗದ್ಯದ ಗತ್ತು, ಗಮಕಗಳನ್ನು ನಮಗೆ ಗೊತ್ತು ಮಾಡಿಕೊಟ್ಟವು.'[೧೦] ಎಂದು ತಿಳಿಸಿದ್ದಾರೆ.

---

೧೦ ದ.ರಾ. ಬೇಂದ್ರೆ, ಆತ್ಮಕಥನ, ಪೂರ್ವೋಕ್ತ ಪು. ೪೨೯

ಬೇರೆ ಬೇರೆ ಋತುವಿನಲ್ಲಿ ನಡೆಯುವ ಹಬ್ಬ ಆಚರಣೆ ಪರಂಪರಾಗತವಾಗಿ ನಡೆದು ಕೊಂಡು ಬಂದುದು. ಆ ಹಬ್ಬಗಳ ಆಚರಣೆಯಲ್ಲಿ ರಸಿಕರು ಉತ್ಸಾಹಿಗಳಾಗಿದ್ದು, ಇರುವಷ್ಟು ಹಬ್ಬ ಸಾಲದೆಂದು ಇನ್ನೊಂದು ಹಬ್ಬಕ್ಕೆ ಆಶಿಸುವ ಮನದವರಾಗಿದ್ದರು. ಅಂತಹ ಸಮೃದ್ಧಿ ಬೇಂದ್ರೆಯವರ ಬಾಲ್ಯಕಾಲದಲ್ಲಿತ್ತು.

ಹಬ್ಬಗಳೆಂದರೆ ಭಾರತೀಯ ಸಂಸ್ಕೃತಿಯ ಕಣ್ಣುಗಳಿದ್ದಂತೆ ಹೊರ ನೋಟಕ್ಕೆ ಕೆಲಕೆಲವು ಹಬ್ಬಗಳು ಆಡಂಬರ ಪೂರ್ಣವಾಗಿ ಕಂಡರೂ ಅವುಗಳ ತಿರುಳು ಮಾತ್ರ ಅಧ್ಯಾತ್ಮವೆ. ಶಿವರಾತ್ರಿ ಎಂದರೆ ಸದಾ ಜಾಗರೂಕರಾಗಿದ್ದುಕೊಂಡು ಆತ್ಮದ ಪಾವಿತ್ರ್ಯವನ್ನು ಕಾಪಾಡಿಕೊಳ್ಳಬೇಕೆಂದು ಸಂಕೇತ. ದುಷ್ಟಶಕ್ತಿಗಳನ್ನು ಮೆಟ್ಟಿ ನಿಲ್ಲಬೇಕೆಂಬುದು, ಎಲ್ಲೆಡೆ ಬೆಳಕನ್ನೇ ಚೆಲ್ಲಬೇಕೆಂಬುದು ದೀಪಾವಳಿಯ ಸಂಕೇತ. ಕಾಮಕ್ರೋಧಾದಿಗಳನ್ನೆಲ್ಲ ಸುಟ್ಟು ಬಿಡಬೇಕು., ನಿಯಂತ್ರಣದಲ್ಲಿಟ್ಟುಕೊಳ್ಳಬೇಕು ಎಂಬುದು ಕಾಮದಹನದ ಸಂಕೇತ. ಹೀಗೆ ನಮ್ಮ ಹಬ್ಬಗಳೆಲ್ಲವೂ ಬದುಕಿನ ಒಂದೊಂದು ಶ್ರೇಷ್ಠ ತತ್ವಕ್ಕೆ ನಿದರ್ಶನಗಳು. ಆ ಹಬ್ಬಗಳಲ್ಲೆಲ್ಲ ಬೇಂದ್ರೆಯವರು ಸಾಮಾನ್ಯರಂತೆ ಪಾಲ್ಗೊಂಡು ಅಷ್ಟರಿಂದಲೇ ತೃಪ್ತರಾಗದೆ, ಅವುಗಳ ಆಧ್ಯಾತ್ಮಿಕ ನೆಲೆಯನ್ನು ಶೋಧಿಸಿ ಆನಂದಪಟ್ಟಿದ್ದಾರೆ. ಹಬ್ಬಗಳು ಅನಂತವಾಗಿರಲಿ, ಎಷ್ಟಿದ್ದರೂ ಅವು ನಮ್ಮ ವ್ಯಾವಹಾರಿಕ ಮತ್ತು ಆಧ್ಯಾತ್ಮಿಕ ಬದುಕನ್ನು ಸಮೃದ್ಧಗೊಳಿಸುವಂತಹವೇ ಅಲ್ಲವೇ ? ಎಂಬ ಚಿಂತನೆ ಇಲ್ಲಿ ಅರಳಿಕೊಂಡಿದೆ.

**ಗೆಳೆತನದ ಸಾಧನೆ**

ಬೇಂದ್ರೆಯವರು ಸ್ನೇಹಜೀವಿ. ಅವರ ಸಮರಸತತ್ವ ಗೆಳೆಯರ ಪ್ರೀತಿಯ ಫಲ. ಅವರ 'ಗೆಳೆಯರ ಗುಂಪು' ಕನ್ನಡ ಜನಾಂಗಕ್ಕೆ ಒಂದು ಆದರ್ಶ. ಅವರು ಬಾಲ್ಯದಿಂದಲೂ ಗೆಳೆಯರ ಒಡನಾಟದ ಆನಂದದಲ್ಲಿ ಕಾಲ ಕಳೆಯುತ್ತ, ಅದನ್ನೇ ಧ್ಯಾನಿಸಿ ಅದರ ಚಿಂತನೆಯನ್ನು ಕಾವ್ಯವಾಗಿರಿಸಿರುವರು. ಗೆಳೆತನ ಒಂದು ಜನ್ಮದ್ದಲ್ಲ, ಜನ್ಮಜನ್ಮಾಂತರದ್ದು ; ಅದು ಹೊಸ ಶರೀರವಾಗಿ ರೂಪುಗೊಂಡು ಹಿಂದಿನ ವಾಸನೆಯನ್ನು ಹೊಂದಿರುತ್ತದೆ ಎಂದು ಅವರು ನಂಬಿದ್ದರು. ಅದಕ್ಕೆ ಮಹತ್ವ ಕೊಟ್ಟಿದ್ದರು. ಹಲವು ಎಳೆಗಳನ್ನು ಕೂಡಿಸಿ ಹೆಣೆದುದು ಗೋಪು. ಅದು ಸೊಗಸಾಗಿ ಹೊಮ್ಮುವುದೇ ಅದರ ಲಕ್ಷಣ. ಅದಕ್ಕೆ ಪ್ರಾರಂಭ ಅಂತ್ಯ ಎಂಬುದಿಲ್ಲ. ಅಂತಹದೇ ಗೆಳೆತನ. ಬೇಂದ್ರೆಯವರಿಗೆ ಬಾಲ್ಯದ ಸ್ನೇಹದ ಹೆಣಿಗೆಯ ಗೋಪಿನಲ್ಲಿ ಹೆಣ್ಗರುಳ ಶ್ರೀಧರ ಖಾನೋಳ್ಕರ, ತುಂಟಾಟದ ರಾಮ, ಹಲವು ಆಟದ ನರಸಿಂಹ ಮೂರು ಎಳೆಗಳಾಗಿದ್ದರು. ಸ್ನೇಹವೆಂಬ ಮತ್ಸ್ಯಯಂತ್ರವನ್ನು ಭೇದಿಸಲು ಸದಾ ಎಚ್ಚರದಿಂದಿರಬೇಕು. ಅದು ಮನದ ಸಾಧನಾತಂತ್ರವೆಂಬುದು ಅವರ ನಿಲುವಾಗಿತ್ತು.

ಬೇಂದ್ರೆಯವರು ತಮ್ಮ 'ಆತ್ಮಕಥನ'ದಲ್ಲಿ ಬಾಲ್ಯದ ಗೆಳೆಯರನ್ನು ನೆನೆಯುತ್ತ ಅದು ತಮ್ಮ ಕಾವ್ಯಾಸಕ್ತಿಗೆ ಪೂರಕವಾಗಿದ್ದುದನ್ನು ದಾಖಲಿಸಿದ್ದಾರೆ. 'ನಾನು ಹಾಗೂ ಖಾನೋಳಕರರು

ಇಂಗ್ಲೀಷ್ ರೆಸಿಟೇಶನ್ನಿನಲ್ಲಿಯೂ ಕನ್ನಡ ಕವಿತೆ ಅನ್ನುವದರಲ್ಲಿಯೂ ಸಾಕಷ್ಟು ಪ್ರಮುಖರಾಗಿದ್ದವು... ಕುಂಬಾರ ಓಣಿಯಲ್ಲಿಯೇ ರಾಮೂ ದೀಕ್ಷಿತ, ನರಸಿಂಪ ಬಾಗಲವಾಡಿ ಈ ಇಬ್ಬರೂ ನನ್ನ ಬಾಲ್ಯಮಿತ್ರರಿರುತ್ತಿದ್ದರು. ಇಲ್ಲಿಯ ದೀಕ್ಷಿತರ ಮನೆಗೆ ಶ್ರೀಧರ ಖಾನೋಳಕರ ಅವರು ಕೆಲವುದಿನ ವೆಂಕಣ್ಣಾಚಾರ್ಯ ಕಟ್ಟಿ ಇವರ ಹತ್ತಿರ ಅಭ್ಯಾಸ ಹೇಳಿಸಿಕೊಳ್ಳಲು ಬರುತ್ತಿದ್ದರು. ಬಾಗಲವಾಡಿಯವರ ತಾಯಿ ನನ್ನ ತಾಯಿಯ ಜೀವದ ಗೆಳತಿಯಾಗಿದ್ದಳು. ಆ ಓಣಿಯ ಹಣಮಂತದೇವರ ಚಿಕ್ಕಗುಡಿ ನಮ್ಮ ಕಾವ್ಯಾಲಾಪ ಪ್ರಲಾಪಗಳಿಗೆ ಮುಕ್ತ ದ್ವಾರವಾಗಿತ್ತು.'[೧೧]

ಶ್ರೀಧರ ಖಾನೋಳಕರ ಅವರು ನವೋದಯದ ಪ್ರಾರಂಭದ ಕವಿಗಳಲ್ಲಿ ಒಬ್ಬರು. ಆ ಬಾಲ್ಯದ ಗೆಳೆಯ ನಿಧನ ಹೊಂದಿದಾಗ ಬೇಂದ್ರೆಯವರು 'ಶ್ರೀಧರತರ್ಪಣ' ಕವನ ರಚಿಸಿ ಅಶ್ರುತರ್ಪಣವನ್ನರ್ಪಿಸಿದ್ದಾರೆ.

'ನಾನಾ' ಹೋದನೋ! ಹೋದನೋ? ಅವನ ಬೆನ್ನೇ
'ಚಿನ್ನ'ನೂ ಹೋದನೋ?
'ನಾ' 'ನೀ' ಎನ್ನದ 'ಶ್ರೀಧರಂ' ವ್ಯಥೆಯೊಳೇ
ತಾನೀಗಳೇನಾದನೋ?

* * *

'ಬಿಂಬಕ್ಕೇಕೆಲೆ ದರ್ಪಣಂ ? ತನಗೆ ತಾನೇ ಶ್ರಾದ್ಧಸಂತರ್ಪಣಂ
ಅಂಬಾ-ಜಾತನ ಅಶ್ರುಸಂಚಿತದೊಳೇ ಆ ಶ್ರೀಧರಂಗರ್ಪಣಂ'[೧೨]

### ಕಾಲೇಜು ವಿದ್ಯಾಭ್ಯಾಸದ ಅನುಭವಗಳು

ಬೇಂದ್ರೆಯವರು ಚಿಕ್ಕಂದಿನಿಂದಲೂ ಕಷ್ಟದ ಜೀವನ ಸಾಗಿಸುತ್ತಿದ್ದಂತೆ, ಇನ್ನೂ ಹೆಚ್ಚು ಪರೀಕ್ಷೆಗೆ ಒಳಪಡಿಸುವಂತೆ ವಿಧಿ ಅವರನ್ನು ಕಾಡುತ್ತಿತ್ತು. ಅವರು ಮ್ಯಾಟ್ರಿಕ್ ಪರೀಕ್ಷೆ ಮುಗಿಸಿಬಂದ ಸಂಜೆಯೇ ತಮ್ಮ ಕುಟುಂಬದ ಆಧಾರವಾಗಿದ್ದ ಅಜ್ಜಿ ಗೋದೂಬಾಯಿಯನ್ನು ಕಳೆದುಕೊಂಡರು (೧೯೧೩). ತಾಯಿ ಮತ್ತು ಮಕ್ಕಳು ದಿಕ್ಕು ತಪ್ಪಿದಂತಾದರು. ಆದರೆ ದೈವ ದೊಡ್ಡದು. ಅವರ ಚಿಕ್ಕಪ್ಪ ಬಂಡೋಪಂತ ಬೇಂದ್ರೆ ಪುಣೆಯಲ್ಲಿ ಉತ್ತಮ ಕೆಲಸದಲ್ಲಿದ್ದರು. ಅವರು ವಿಶಾಲ ಹೃದಯಿಗಳು. ಬೇಂದ್ರೆ ಅಲ್ಲಿಗೆ ಹೋಗಿ ೧೯೧೪ರಿಂದ ೧೯೧೮ರ ವರೆಗೆ ಪುಣೆಯ ಫರ್ಗ್ಯುಸನ್ ಕಾಲೇಜಿನ ವಿದ್ಯಾರ್ಥಿಯಾಗಿ ಬಿ.ಎ. ಕಲಿತರು. ಕಾಲೇಜು ವಿದ್ಯಾಭ್ಯಾಸದ ಅವಧಿಯಲ್ಲಿ ಪುಣೆಯ ಚಿಕ್ಕಪ್ಪನ ಮನೆಯಲ್ಲಿ ಮರಾಠಿ ವಾತಾವರಣವಿತ್ತು.

---

೧೧ ಅದೇ ಪುಟ, ಪು. ೪೧೬-೪೯೮

೧೨ ದ.ರಾ. ಬೇಂದ್ರೆ, ಮರ್ಯಾದೆ, ಸಮಾಜ ಪುಸ್ತಕಾಲಯ, ಧಾರವಾಡ ೧೮೬೬, ಪು ೨೭

ಅವರ ಚಿಕ್ಕಪ್ಪನವರು ಸಾಹಿತ್ಯಪ್ರಿಯರಾಗಿ 'ಮುರಲಿ' ಎಂಬ ಹಸ್ತಲಿಖಿತ ಮರಾಠಿ ಮಾಸಪತ್ರಿಕೆ ಹೊರಡಿಸುತ್ತಿದ್ದರು. ಅದಕ್ಕೆ ಬೇಂದ್ರೆಯವರು ಸಹಾಯಹಸ್ತ ನೀಡಿದರು. ಮರಾಠಿಯನ್ನು ಶಾಸ್ತ್ರೋಕ್ತವಾಗಿ ಕಲಿಯದ ಬೇಂದ್ರೆಯವರು ಆ ಭಾಷೆಯ ಪ್ರಭುತ್ವ ಪಡೆಯಲು ಅದು ಸಹಾಯವಾಯಿತು. ಕಾಲೇಜಿನ ವಿದ್ಯಾಭ್ಯಾಸದ ಅವಧಿಯಲ್ಲಿ ಜಾಣ ವಿದ್ಯಾರ್ಥಿಗಳು ಅವರ ಸ್ನೇಹ ಬಯಸುತ್ತಿದ್ದರು ಮತ್ತು ಅವರ ಶಿಕ್ಷಕರು ಅವರನ್ನು ಮೆಚ್ಚಿ ತಮ್ಮ ಅಂತರಂಗದ ವಿದ್ಯಾರ್ಥಿಯನ್ನಾಗಿ ಸ್ವೀಕರಿಸಿದ್ದರು.

ಬೇಂದ್ರೆಯವರ ಮನೆಮಾತು ಮರಾಠಿಯಾಗಿ, ಮನದ ಮಾತು ಕನ್ನಡವಾದುದರಿಂದ ಹಾಗೂ ಅವರಿಗೆ ಎರಡೂ ಭಾಷೆಗಳ ಸಾಹಿತ್ಯದ ಮೇಲೆ ಪ್ರಭುತ್ವವಿದ್ದುದರಿಂದ, ಸ್ನೇಹಿತರ ಜೊತೆ ಖಾಡೀಲಕರರ ನಾಟಕಗಳು, ಟಿಳಕರ ಗೀತಾರಹಸ್ಯ, ರವೀಂದ್ರ ಸಾಹಿತ್ಯ ಕುರಿತು ಚರ್ಚಿಸುತ್ತಿದ್ದರು. ಅಲ್ಲಿ ಬಾಬುರಾವ್ ಬಿಡೆ ಅವರ ಸಹವಾಸದಿಂದ ಹಿಂದೀ ಸಾಹಿತ್ಯ ಮತ್ತು ಜ್ಯೋತಿಷ್ಯಶಾಸ್ತ್ರದಲ್ಲಿ ಪರಿಣತರಾದರು. ಕಾಲೇಜು ವಿದ್ಯಾಭ್ಯಾಸದ ಅವಧಿಯಲ್ಲಿಯೇ ಕನ್ನಡದಲ್ಲಿ ಕವಿತೆಗಳನ್ನು ರಚಿಸುವುದರ ಜೊತೆಗೆ ಮರಾಠಿ, ಸಂಸ್ಕೃತ ಮತ್ತು ಇಂಗ್ಲಿಷಿನಲ್ಲಿ ಸಹ ಕವನಗಳನ್ನು ರಚಿಸುತ್ತಿದ್ದರು. ಅವರ ಕಂಠಶ್ರೀ ಅದ್ಭುತವಾದುದು. ಅದು ಅವರಿಗೆ ಅವರ ತಾಯಿಯಿಂದ ಬಂದ ಬಳುವಳಿಯಾಗಿತ್ತು. ಅವರ ಕವನ ವಾಚನ ಶೈಲಿ ಕೇಳುಗರನ್ನು ಕಾವ್ಯದ ಮೂಲ ಭಾವದತ್ತ ಸೆಳೆದೊಯ್ಯುತ್ತಿತ್ತು. ಆಗ ಮೊರೋಬಾದಾದಾ ವಾಡೆಯಲ್ಲಿದ್ದ ಕರ್ನಾಟಕ ಸಂಘದಲ್ಲಿ ಪ್ರಥಮವಾಗಿ ಬೇಂದ್ರೆಯವರು ಸ್ವರಚಿತ ಕವನಗಳನ್ನು ವಾಚಿಸಿದರು. ಅವರ ಕಾವ್ಯಗುಣದ ಅರಿವು ಅಲ್ಲಿಯವರಿಗಾಯಿತು. ಪುಣೆಯಲ್ಲಿ ಕನ್ನಡ ಮರಾಠಿ ಭಾಷಾ ಸಾಹಿತ್ಯಾಸಕ್ತರು ಒಂದೆಡೆ ಸೇರಿ ಚರ್ಚಿಸುತ್ತಿದ್ದರು. ಬೇಂದ್ರೆಯವರು ಗೆಳೆಯ ನಾನಾ ಖಾಡಿಲಕರ ಅವರ ಸ್ನೇಹಫಲದಿಂದ 'ಶಾರದಾಮಂಡಲ'ವೆಂಬ ಸಾಹಿತ್ಯವೇದಿಕೆ ಸ್ಥಾಪಿಸಿದರು. ಬೇಂದ್ರೆಯವರಲ್ಲಿ ಸಾಹಿತ್ಯಪ್ರೀತಿ ಹಾಗೂ ಪುಸ್ತಕಗಳನ್ನು ಕೊಂಡು ಓದಿ ಸಂಗ್ರಹಿಸುವ ಗುಣ ಬಾಲ್ಯದಿಂದಲೇ ಜೊತೆಗೂಡಿ ಬಂದಿತ್ತು. ಅದಕ್ಕೆ ಅವರ ತಾಯಿ ಸದಾ ಪ್ರೋತ್ಸಾಹಿಸುತ್ತಿದ್ದರು. ಬೇಂದ್ರೆಯವರು ಕಾಲೇಜು ವಿದ್ಯಾಭ್ಯಾಸದ ಅವಧಿಯಲ್ಲಿ ವಿದ್ವಾಂಸರು ಹಾಗೂ ಸ್ನೇಹಿತರೊಡನೆ ಸಾಹಿತ್ಯಸಂವಾದದಲ್ಲಿ ತೊಡಗಿ ಸಾಹಿತ್ಯ ಚಿಂತನೆ ಮೈಗೂಡಿಸಿಕೊಂಡರು. ಕಾಳಿದಾಸ, ಎಮರ್ಸನ್, ಕೀಟ್ಸ್, ಶೆಲ್ಲಿಯ ಕಾವ್ಯವನ್ನು ಚೆನ್ನಾಗಿ ಅಭ್ಯಾಸ ಮಾಡಿ, ಸಂಸ್ಕೃತ ಮತ್ತು ಇಂಗ್ಲೀಷ್ ಕಾವ್ಯದ ಅಂತರಾಳವನ್ನು ಅರಿತರು.

ಕಾಲೇಜು ವಿದ್ಯಾಭ್ಯಾಸದ ಅನುಭವಗಳನ್ನು 'ಸಾಹಿತ್ಯದ ವಿರಾಟ್ ಸ್ವರೂಪ'ದಲ್ಲಿ ಅವರು ವಿವರವಾಗಿ ತಿಳಿಸಿದ್ದಾರೆ. 'ಪೂನಾದ ಆತ್ಮೀಕ ಸಾಧಕ ಮಿತ್ರರಾದ ಬಾಬುರಾವ್‌ಭಿಡೆಯವರ ಗ್ರಂಥ ಸಂಗ್ರಹ ಪ್ರೇಮವು ಉನ್ಮತ್ತನ ಜಾತಿಯದು. ಗು. ದತ್ತೋಪಂತ ಪೋದ್ದಾರ ಇದ್ದರು. ಇವರ ಸಾಹಿತ್ಯ ಭಕ್ತಿಯ ಅಖಂಡತೆ, ಸಮಗ್ರತೆ ಬೆರಗುಗೊಳಿಸುವಂತಹದು. ಅವರು ನನ್ನ ಮಿತ್ರರ ಶಿಕ್ಷಕರು ; ನಮ್ಮ ಕರ್ನಾಟಕ - ಮಹಾರಾಷ್ಟ್ರ ಮಿತ್ರಸಂಘಕ್ಕೆ (ಶಾರದಾಮಂಡಳ)

ಅವರೇ ಹಿರಿಯರು ; ಮಹಾರಾಷ್ಟ್ರ ಕುಟುಂಬ ಮಾಲೆಯ ಮೂಲಕ ಸಂಪಾದಕರಾದ ಸಹಕಾರಿ ಕೃಷ್ಣರ ಗ್ರಂಥ ಭಂಡಾರವನ್ನೇ ನಾವು ಗೆಳೆಯರು ಕೊಂಡೆವು ; ಪುತ್ರವಾತ್ಸಲ್ಯದಿಂದ ನನ್ನ ತಾಯಿ ತನ್ನ ಬಂಗಾರದ ಉಂಗುರವನ್ನೇ ಈ ಕೆಲಸಕ್ಕೆ ಕೊಟ್ಟಳು. ನಾನಾ ಖಾಡಿಲ್ಕರ ಬಾಬುರಾವ್ ಭಿಡೆ ಇವರೊಡನಾಗುತ್ತಲಿದ್ದ ಸಂವಾದ ಸಾತತ್ಯದಿಂದ ಅದಕ್ಕೆ ಹರಿತ ಬಂದಿತ್ತು. 'ವಿನೋಬಾ' (ಆಗ ಅವರು ನನ್ನ ಮತ್ತು ನಾನಾ ಖಾಡಿಲ್ಕರೊಡನೆ ೩-೪ ತಾಸಿನ ಸಂವಾದ ಸುಖ ತೋರಿಸಿದರು) ಪಿ.ವ್ಹಿ. ಪಾಠಕ ಇಂಥವರ ಚುರುಕಿನಿಂದ ಬಂದ ಚೂಪು, ಸಾಣೆಯ ಸಾಮರ್ಥ್ಯ ತಿಳಿಸಿತ್ತು. 'ಕಾಲಿದಾಸ' 'ಜ್ಞಾನೇಶ್ವರಿ' 'ಜೈನಸಂಸ್ಕೃತಿ-ಸಾಹಿತ್ಯ' ಇವುಗಳ ಅಭ್ಯಾಸವು ಘನಪಿಂಡಗೊಂಡಿತು.[೧೩]

"'ಮೇಘದೂತ', 'ಶಾಂಕುತಲ', 'ಉತ್ತರರಾಮಚರಿತೆ' ಮೆಚ್ಚಬೇಕಾದರೆ ಕಾಲೇಜು ಕಾಣಬೇಕಾಯಿತು. ಕೀಟ್ಸ, ಶೆಲ್ಲಿಗಳು ಹೃದಯ ಹೊಕ್ಕದ್ದು ಅಲ್ಲಿ. ಅವರ ಚಿತ್ರಗಳನ್ನು ನನ್ನ ಡಾಯರಿಯಲ್ಲಿಟ್ಟು, ಡಾಯರಿಯನ್ನು ಒಳಜೇಬಿನಲ್ಲಿಟ್ಟು, ಕೀಟ್ಸನನ್ನು ಹೃದಯಗತಮಾಡಿಕೊಳ್ಳುವ ತಂತ್ರ ಮಾಡಿದೆ".[೧೪] ಕಾಲೇಜುವಿದ್ಯಾಭ್ಯಾಸ, ಸಾಹಿತ್ಯಾಸಕ್ತರ ಸಹವಾಸ, ಹಿರಿಯ ಚಿಂತಕರೊಡನೆ ಸಂವಾದದ ಫಲ :

'ಒಂದೊಂದು ಹುಚ್ಚಾಗಿ, ಸಂವಾದ ಕೆಚ್ಚಾಗಿ
ಹರಿಹಾಕುತ್ತಿತ್ತಾಗ ಬಾಳಗುರಿ
ಹಲವೊಂದು ಹಿರಿಯರ ನಡೆನುಡಿ ಕಂಡಾಗ
ಯಜ್ಞದ ಕೆಂಡಕೆ ಮೂಡಿತುರಿ'

ಯಜ್ಞದ ಕೆಂಡವು ಸದಾಕಾಲ ಜಾಗೃತವಾಗಿಯೇ ಇರುತ್ತದೆ. ಆದರೆ ತನ್ನಷ್ಟಕ್ಕೇ ಗುಪ್ತವಾಗಿರುತ್ತದೆ. ತುಪ್ಪ ಸಮಿತ್ತು ಮುಂತಾದ ಯಜ್ಞದ್ರವ್ಯಗಳನ್ನು ಸಮರ್ಪಿಸಿದಾಗ ಅದು ತನ್ನ ಕೆನ್ನಾಲಿಗೆಗಳನ್ನು ಚಾಚುತ್ತ ಪ್ರಜ್ವಲಿಸತೊಡಗುತ್ತದೆ. ಹೀಗೆಯೆ ಬೇಂದ್ರೆಯವರು ಮಹಾತ್ಮರನ್ನು ಕಂಡಾಗ, ಶ್ರೇಷ್ಠ ಮೌಲ್ಯಗಳನ್ನು ಎತ್ತಿ ಹಿಡಿದುದನ್ನು ಕಂಡಾಗ ಅದನ್ನೆಲ್ಲಾ ಕಾವ್ಯವಾಗಿಸಬೇಕೆಂಬ ಹಂಬಲವನ್ನು ತುಂಬಿಕೊಳ್ಳುತ್ತಿದ್ದರು. ಅವರಲ್ಲಿ ಸುಪ್ತವಾಗಿದ್ದ ಕವಿಯು ಆಗ ಜಾಗೃತಗೊಂಡು ಮೆರೆದಾಡಲು ಹಂಬಲಿಸುತ್ತಿದ್ದನು.

ಕಾಲೇಜು ವಿದ್ಯಾಭ್ಯಾಸದ ಅವಧಿಯಲ್ಲಿಯೇ ಅವರು ಶ್ರೀ ಅರವಿಂದರ 'ಆರ್ಯ' ಪತ್ರಿಕೆಯ ಪ್ರಭಾವಕ್ಕೆ ಒಳಗಾದರು. ಅದನ್ನು ಅವರು 'ನಾನು ಫರ್ಗ್ಯುಸನ್ ಕಾಲೇಜಿನಲ್ಲಿ ಬಿ.ಎ. ಕ್ಲಾಸಿನಲ್ಲಿದ್ದೆ. ನನ್ನ ಗೆಳೆಯರು ಶ್ರೀ. ಕೇಸರಿ ಅವರು ಹಾಸ್ಟೆಲಿನಲ್ಲಿರುತ್ತಿದ್ದರು... ೧೯೧೭ ಆಗಸ್ಟ್ ಸುಮಾರು ಇರಬೇಕು, ಅವರಲ್ಲಿ ನಾನು 'ಆರ್ಯ' ಕಂಡದ್ದು. ನೋಡಿ ಚಿತ್ತವು

---

೧೩ ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಪೂರ್ವೋಕ್ತ ಸ್ವರೂಪ ಪು. ೪೫

೧೪ ಅದೇ ಪು. ೫೩

ಆಕರ್ಷಿತವಾಯ್ತು. ಗೀತೆಯ ಬಗ್ಗೆ ಆ ಸಂಚಿಕೆಗಳಲ್ಲಿ ಲೇಖನ ಬರುತ್ತಿದ್ದವು... ಕೀಟ್ಸನ ಕಾವ್ಯದ ಬಗ್ಗೆ ಶ್ರೀ ಅರವಿಂದರು ಬರೆಯುವಾಗ ಈ ವಾಕ್ಯ ಹಾಕುತ್ತಾರೆ. "He (Keats) saw her (Poetry) in three of her four forms, Sensuous beauty, Imaginative beauty, Intellectual beauty and Ideal beauty" (Arya P.P 627-628), ಈ ನಾಲ್ಮೊಗದ ದರ್ಶನ ನನ್ನ ಜೀವನಕ್ಕೆ ಚತುರ್ಮುಖತೆಯನ್ನು ಕೊಟ್ಟಿತು. ಈ ಚತುರ್ಮುಖತೆಯನ್ನು ಅನೇಕ ಬಗೆಗಳಲ್ಲಿ ನಾನು ಕಂಡಿದ್ದೇನೆ. ಈ ಆತ್ಮಚರಿತ್ರೆಯ ಮಟ್ಟಿಗೆ ಕೌಟುಂಬಿಕ ಅಥವಾ ದೈಹಿಕ ; ವಿಮರ್ಶಕ ಅಥವಾ ಸಾಂಸ್ಕೃತಿಕ ; ಸೃಜನಶೀಲ ಅಥವಾ ಪ್ರಾತಿಭ ; ಸಾಧಕ ಅಥವಾ ಸಾತ್ವಿಕ ಎಂದು ಸುಳಿ ಹಿಡಿದಿದ್ದೇನೆ[೧೫] ಎಂದಿದ್ದಾರೆ. ಅದು ಬೇಂದ್ರೆಯವರನ್ನು ರೂಪಿಸಿದ ಚಿಂತನಶೀಲ ತುಂಬುಯೌವನದ ಕಾಲ. ಆ ಉಲ್ಲಾಸದ ವಯಸ್ಸಿನಲ್ಲಿ ಅವರು ಆದರ್ಶವನ್ನು ಮೈದುಂಬಿಸಿಕೊಂಡು ಕವಿಯಾಗಿ ವಿಜೃಂಭಿಸಿದರು.

ಬೇಂದ್ರೆಯವರು ಕನ್ನಡ ಪ್ರಾದೇಶಿಕ ಭಾಷೆ ಮತ್ತು ಸಂಸ್ಕೃತಿಯ ಪುನರುತ್ಥಾನದತ್ತ ಗಮನ ಹರಿಸಿದಾಗ ಅವರ ಉದ್ದೇಶ ಪ್ರಾದೇಶಿಕತ್ವವನ್ನು ಉಳಿಸಿಕೊಳ್ಳುತ್ತ ರಾಷ್ಟ್ರೀಯತ್ವದಲ್ಲಿ ಒಂದಾಗುವುದಾಗಿತ್ತು. ರಾಷ್ಟ್ರೀಯತ್ವ ಮತ್ತು ಪ್ರಾದೇಶಿಕತ್ವ ಒಂದಕ್ಕೊಂದು ಪೂರಕವಾಗಿರಬೇಕೆಂಬ ಚಿಂತನೆ ಅವರಲ್ಲಿತ್ತು. ರಾಜಕೀಯವಾಗಿ ರಾಷ್ಟ್ರೀಯ ಐಕ್ಯತೆ ಎಷ್ಟು ಮುಖ್ಯವೋ ಸಾಹಿತ್ಯ ಮತ್ತು ಸಾಂಸ್ಕೃತಿಕವಾಗಿಯೂ ಅಷ್ಟೇ ಮುಖ್ಯ ಎಂಬ ಅರಿವಿತ್ತು. ಆ ದೃಷ್ಟಿಯಲ್ಲಿ ಕ್ರಿಯಾಶೀಲವಾಗಿ ರಾಷ್ಟ್ರೀಯ ವ್ಯಕ್ತಿಗಳಾದ ಕವಿ ರವೀಂದ್ರನಾಥ ಠಾಗೂರ್ ಮತ್ತು ಯೋಗಿ ಅರವಿಂದರ ಪ್ರೇರಣೆಗೆ ಒಳಗಾಗಿ ಕಾವ್ಯಾನುಶೀಲರಾಗಿದ್ದರು. ಹಾಗಾಗಿ ಬೇಂದ್ರೆ ಕಾವ್ಯವು ಭಾರತ ರಾಷ್ಟ್ರೀಯ ಮತ್ತು ಕರ್ನಾಟಕ ಪ್ರಾಂತೀಯ ಭಾವಗಳು ಒಂದಾದ ಸುಮಧುರ ನೆಲೆಯಾಗಿದೆ.

ಬೇಂದ್ರೆಯವರು ಕಾಲೇಜು ವಿದ್ಯಾಭ್ಯಾಸದ ಅವಧಿಯಲ್ಲಿ ಕಾವ್ಯ, ನಾಟಕ, ಶಾಸ್ತ್ರ, ವಿಜ್ಞಾನ, ರಾಜಕಾರಣವನ್ನು ಆಳವಾಗಿ ಅಭ್ಯಾಸಮಾಡಿ ಸ್ನೇಹಿತರೊಡನೆ ಚರ್ಚಿಸಿ ವಿಷಯದ ನಿಖರತೆ, ಸ್ಪಷ್ಟಗೊಳಿಸಿಕೊಳ್ಳುವ ಹವ್ಯಾಸ ಬೆಳೆಸಿಕೊಂಡರು ಎಂದು ಈಗಾಗಲೇ ತಿಳಿಸಿದ್ದೇವೆ. ಆ ಚರ್ಚೆ, ನಿರರ್ಗಳವಾಗಿ ಮಾತನಾಡುವ ಕಲೆ ಅವರ ಜೀವನದ ಒಂದು ಭಾಗವಾಯಿತು. ಅವರ ವಾಕ್‌ಶಕ್ತಿಯಲ್ಲಿ ಓಜಸ್ಸು, ತೇಜಸ್ಸು, ಮಂತ್ರಸಾಮರ್ಥ್ಯ ಅವತರಣವಾಗಿ ಅವರು ಕ್ರಮೇಣ ಜನಕ್ಕೆ ಕಾವ್ಯಾನಂದ ಹಂಚಿ, ನುಡಿಜ್ಯೋತಿ ಬೆಳಗಿ, ಜ್ಞಾನದ ಬೆಳಕು ಹಬ್ಬಿಸಿದರು. ಅವರ ಮಾತೆಲ್ಲ ಜ್ಯೋತಿಯಾಯಿತು. ಧಾರವಾಡದ ಕನ್ನಡದ ಕಂಪನ್ನು ಅವರು ಪುಣೆಯಲ್ಲಿ ಹಬ್ಬಿಸುತ್ತಿರುವುದು ಧಾರವಾಡದ ಹಿರಿಯರಿಗೆ ಹೆಮ್ಮೆ ಎನಿಸಿತು.

---

೧೫ ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ - ಪು - ೩೮

ಆ ಕಾಲದಲ್ಲಿ 'ಅಂಬಿಕಾತನಯದತ್ತ'ನಾಗಿ ರೂಪುಗೊಂಡ ಬೇಂದ್ರೆಯವರು ಅದನ್ನು ಹೀಗೆ ನೆನೆದಿದ್ದಾರೆ : '೧೯೧೮ರಲ್ಲಿ ಬಿ.ಎ ಪರೀಕ್ಷೆ ಕೊಟ್ಟು, ಧಾರವಾಡದಲ್ಲಿ ನಡೆಯುವ ೪ನೆಯ ಸಾಹಿತ್ಯ ಸಮ್ಮೇಳನಕ್ಕಾಗಿ ಅದರ ನೆಪದಿಂದ ಎಂದರೂ ಸಲ್ಲಬಹುದು, ಬೇಸಿಗೆಯ ರಜೆ ಬೇರೆ, ಧಾರವಾಡಕ್ಕೆ ಬಂದು ಬಿಟ್ಟೆ. ಕಾಮನಕಟ್ಟೆಯ ಕೂಟಿಗಿದ್ದ ಗೋಖಲೆಯವರ ಮನೆ ನಮ್ಮ ತಾಯಿಗೆ ತವರುಮನೆಯಿದ್ದಂತೆ. ಗೋಖಲೆ ಚಿದಂಬರಬಾಯಿಯು ನನ್ನ ತಾಯಿಯ ತಾಯಿ ಗೋದುಬಾಯಿಯನ್ನು ಅಕ್ಕನಂತೆ ಗೌರವವಾಗಿ ನಡೆಸಿಕೊಳ್ಳುತ್ತಿದ್ದಳು. ಈಕೆ ಬಡವಿ, ಆಕೆ ಭಾಗ್ಯವತಿ. ಆದರೂ ಯಾವುದೋ ಹೃದಯಸಂಬಂಧ ಅವರನ್ನು ಕೂಡಿಸಿತ್ತು. ಈ ಗೋಖಲೆಯವರ ಮನೆಯಲ್ಲಿಯೇ ನನ್ನ ಪ್ರಾರಂಭದ ಕೆಲವು ಕನ್ನಡ ಕವಿತೆ ಬರೆದೆ, ವಿಶೇಷವಾಗಿ 'ಕೋಗಿಲೆ ಕೋಗಿಲೆ ಎಂದು ಬಂದೆನೀ' ಎಂದು ನೀಳ್ಗವನ ಬರೆದದ್ದು ಇಲ್ಲಿಯೇ. ಅವರ ಮನೆಗೆ ಹತ್ತಿರದ ನವಲಿ ಅವರ ಹಿತ್ತಲಲ್ಲಿ ದೊಡ್ಡದೊಂದು ಹುಣಸೇಮರ, ವರ್ಷವರ್ಷವೂ ಒಂದು ಕೋಗಿಲೆ ಅಲ್ಲಿ ತನ್ನ ಆಸ್ಥಾನ ನಡೆಸುತ್ತಿತ್ತು. 'ಕೋಗಿಲೆ' ಕವನಕ್ಕೆ ಅದು ನಿಮಿತ್ತ. ಈ ನೀಳ್ಗವನ, ಕೆಲವು ಬಿಡಿಗವನ, ಕೆಲವು ಭಾಷಾಂತರ, ಕೆಲವು ಪ್ರಾಯೋಗಿಕ ನುಡಿಗಳು, ಸಾಲುಗಳು, ಇಷ್ಟು ಬಂಡವಲಿನಿಂದ ನಾನು ಕವಿಯಾಗಿಬಿಟ್ಟಿದ್ದೆ. ನಾನು ಕವಿಯಾಗುವುದಿರಲಿ, ನನ್ನ ಸಮಕಾಲದ ಗೆಳೆಯರು - ವಯಸ್ಸಿನಿಂದ ಹಿರಿಯರು ನನ್ನನ್ನು 'ನವಕರ್ನಾಟಕದ ಕವಿ' ಎಂದು ಹಿಗ್ಗಿಸಿದರು. ಡೆಕ್ಕನ್ ಕಾಲೇಜ ಕರ್ನಾಟಕ ಸಂಘದ ವಾರ್ಷಿಕ ಅತಿಥಿ ಎಂದು ನಾನು ಹೋಗಿದ್ದೆ. ಪೂನಾ ಕರ್ನಾಟಕ ಸೋಶಿಯಲ್ ಕ್ಲಬ್‌ನಲ್ಲಿ ನನ್ನ ತುತ್ತೂರಿ ಓದಿದ್ದೆ, ಊದಿದ್ದೆ. 'ಕೋಗಿಲೆ' ಕವನ ಮೊದಲೊಮ್ಮೆ 'ಸ್ವಧರ್ಮ'ದಲ್ಲಿ ಮುದ್ರಿತವಾಗಿ ೧೯೫೯ರ ನನ್ನ 'ಸಂಚಯ'ದಲ್ಲಿಯೂ ಸಂಗ್ರಹಿತವಾಗಿದೆ. 'ತುತ್ತೂರಿ' ದಿವಂಗತ ಬಳವಂತರಾವ್ ಜಠಾರ ಅವರು ನನ್ನ ಪ್ರೋತ್ಸಾಹನ ನಿಮಿತ್ತದಿಂದ (ಅದೂ ಒಂದು ಕಾರಣ) ಹೊರಡಿಸಿದ 'ಪ್ರಭಾತ' ಎಂಬ ಕವಿತಾ ಮಾಸಿಕದಲ್ಲಿ ಪ್ರಕಾಶಿತವಾಯಿತು[೧೬].

■ ■

---

೧೬ ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ - ಪು - ೩೭

## ಬೇಂದ್ರೆ ಮಾಸ್ತರು

ಬೇಂದ್ರೆಯವರು ಬಿ.ಎ. ಅಭ್ಯಾಸ ಮಾಡಲು ಪುಣ್ಯನಗರಿ ಪೂನಾದಲ್ಲಿದ್ದಾಗ ಅವರು ಕಂಡ ವಿಸ್ಮಯಗಳು, ವೈಚಿತ್ರ್ಯಗಳು, ಹೊಸ ಅನುಭವಗಳು ಸಂತೋಷದಿಂದ ಕುಣಿದಾಡುವಂತೆ ಮಾಡಿದ್ದವು. ಹಾಗೆ ಆನಂದದಲ್ಲಿ ಓಹೋ, ಆಹಾ ಎಂದು ಆಶ್ಚರ್ಯದಲ್ಲಿರುವಾಗಲೇ ಅದರ ವಾಸ ಕೊನೆಯಾಯಿತು. ಅಲ್ಲಿದ್ದಾಗ ಅವರು ಮಾಡುತ್ತಿದ್ದ ಧಾರವಾಡದ ಧ್ಯಾಸ ಅಂದರೆ ಧ್ಯಾನ ಹಾಗೂ ಕನ್ನಡದ ಅಭ್ಯಾಸ ಮನೆಮಾತಾದ ಮರಾಠಿಗೂ ಒಂದು ಹೊಸತನ ತಂದಿತ್ತು. ಪೂನಾ ಬಿಟ್ಟು ಧಾರವಾಡಕ್ಕೆ ಬರುವಾಗ ಮನಸ್ಸು ಆದರ್ಶ ಶಾಲಾ ಶಿಕ್ಷಕನಾಗಬೇಕು, ಕನ್ನಡ ನಾಡುನುಡಿಯನ್ನು ಮಕ್ಕಳಲ್ಲಿ ಬಿತ್ತಿ ಅವರನ್ನು ಉತ್ತಮ ಪ್ರಜೆಗಳನ್ನಾಗಿಸಬೇಕು ಎಂಬ ಹೆಬ್ಬಯಕೆ ಹೊಂದಿತ್ತು. ಶಾಲೆಯ ವಿದ್ಯಾರ್ಥಿವೃಂದದ 'ಎಳೆ ಗೆಳೆಯ ಓಳಿ'ಯಲ್ಲಿರಬೇಕು, ವಿದ್ಯಾರ್ಥಿವೃಂದದ ಮಾಲೆಯಲ್ಲಿ ತಾನಿರಬೇಕು ಎಂಬ ಬಸಿರಿನ ಬಯಕೆಯಂತಹ 'ಯಾವ ಜನ್ಮದ ಭಾವವೋ ಯಾವ ಜನ್ಮದ ಪುಣ್ಯ'ವೋ ಅವರನ್ನು ಅತ್ತ ಸೆಳೆಯುತ್ತಿತ್ತು. ಆ ಬಯಕೆಯ ಫಲವೆಂಬಂತೆ ಅವರು ೧೯೧೮ರಲ್ಲಿ ಶಿಕ್ಷಕರಾದರು. ಅದನ್ನು ಅವರು 'ಹಿರಿಯರಾದ ಪೋದ್ದಾರ, ಹರ್ಡೀಕರ, ಹುಕ್ಕೇರಿಕರ, ಗುತ್ತಲ, ಆಲೂರ ಇವರ ಮಾರ್ಗದರ್ಶನದಿಂದ ನಾನು ವಿದ್ಯಾರ್ಥಿಯಾಗಿ ಬೆಳೆದ ವಿಕ್ಟೋರಿಯಾ ಹಾಯ್‌ಸ್ಕೂಲಿಗೆ (ಈಗ ವಿದ್ಯಾರಣ್ಯ ಹಾಯ್‌ಸ್ಕೂಲ) ಶಿಕ್ಷಕನಾಗಿ ಬಂದು ಸೇರಿದೆ'[೧] ಎಂದು ಹೇಳಿದ್ದಾರೆ.

ಶಿಕ್ಷಕನಾಗಿ ಧಾರವಾಡದಲ್ಲಿ ಜೀವನ ಪ್ರಾರಂಭಿಸಿದ ಬೇಂದ್ರೆಯವರು ತಮ್ಮ ಕಾಮನಕಟ್ಟೆಯ ಸಂಬಂಧವನ್ನು ಜೀವನದ ಹೋರಾಟ,

---

೧ ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಪೂರ್ವೋಕ್ತ, ಪು. ೬೦

ಸಾವುನೋವು, ಕಾವ್ಯಲೀಲೆಯನ್ನು ಆತ್ಮಕಥೆಯಲ್ಲಿ ಹೀಗೆ ದಾಖಲಿಸಿದ್ದಾರೆ : 'ನಾನು ಬಿ.ಎ. ಆದ ಮೇಲೆ ಮತ್ತೆ ಇದೇ ಕಾಮನಕಟ್ಟೆಯಲ್ಲಿ ಮನೆ ಮಾಡಿ ಆರು ವರ್ಷಕಾಲ ಕಳೆದೆ. ಆ ಆರು ವರ್ಷದ ಕಾಲದಲ್ಲಿ ನನ್ನ ಚೊಚ್ಚಲ ಮಗ ಕ್ಷೇಮೇಂದ್ರನನ್ನು, ಒಬ್ಬ ಆಪ್ತ ಸೋದರನನ್ನು, ತಾಯಿಯನ್ನು ಒಂದೇ ಮನೆಯಲ್ಲಿ ಕಳೆದುಕೊಂಡೆ. ಬಾಳಾಚಾರ್ಯ ಸಕ್ಕರಿ ಅವರ ಅಟ್ಟದ ಮೇಲೆ ಎಳೆಯರ ಗೆಳೆಯರ ಗುಂಪಿನ ಅಡಿಗಲ್ಲಾದ ಚಿದಂಬರನನ್ನು ಕಳೆದುಕೊಂಡೆ. ನನ್ನ ಮದುವೆ, ಗೆಳೆಯರ ಗುಂಪಿನ ಪ್ರಾರಂಭ, ಪ್ರಾರಂಭದ ಕಾವ್ಯಲೇಖನ, ಕೃಷ್ಣಾಕುಮಾರಿ ಎಂಬ ಆಖ್ಯಾನ ಕಾವ್ಯದ ಪ್ರಕಾಶನ, 'ಜಯ ಕರ್ನಾಟಕ'ದ ಪ್ರಾಥಮಿಕ ವಿಲಾಸ, 'ಪ್ರಭಾತ'ದ ಮಿಂಚು ಎಲ್ಲಾ ಇಲ್ಲಿ ಉಗಮಗೊಂಡವು. ನನ್ನ ಕವಿತ್ವಕ್ಕೆ ಮುದ್ರೆ ಬಿದ್ದುದು ಕಾಮನಕಟ್ಟೆಯ ಆಸ್ಥಾನದಲ್ಲಿ. ಸಾಧನಕೇರಿಯ ಸಾಧನೆಯಂತೆಯೇ ಕಾಮನಕಟ್ಟೆಯ ಸಾಧನೆಯೂ ನನ್ನ ಜೀವನದ ಮೇಲೆ ಗಾಢ ಸಂಸ್ಕಾರ ಮಾಡಿದೆ. ಕಾಮನಕಟ್ಟೆ ಸಾದಾ 'Common' ಕಟ್ಟೆಯಲ್ಲ, ಅದು 'Uncommon' ಕಟ್ಟೆ.'[೨]

ಬೇಂದ್ರೆಯವರು ೧೯೧೨ರಿಂದಲೇ ಕನ್ನಡ ಹಾಗೂ ಮರಾಠಿಗಳಲ್ಲಿ ಕಾವ್ಯರಚನೆ ಮಾಡುತ್ತಿದ್ದರು. ಅವರು ಫರ್ಗ್ಯುಸನ್ ಕಾಲೇಜಿನಲ್ಲಿ ಕಲಿಯುವಾಗ 'Ben Ramson' ಎಂಬ ಹೆಸರಿನಲ್ಲಿ ಕವಿತೆಗಳನ್ನು ಇಂಗ್ಲೀಷ್‌ನಲ್ಲಿ ರಚಿಸಿದ್ದರು. ಅವರ ಪ್ರಥಮ ಪ್ರಕಟಿತ ಕವನಗಳು 'ತುತೂರಿ' ಮತ್ತು 'ಸರಸ್ವತಿ'. ಅವು ಪ್ರಭಾತ ಪತ್ರಿಕೆಯ ಆಗಸ್ಟನ ಪ್ರಥಮ ಸಂಚಿಕೆಯಲ್ಲಿ 'ಅಂಬಿಕಾತನಯದತ್ತ' ಕಾವ್ಯನಾಮದಿಂದ ಪ್ರಕಟವಾದವು. 'ತುತೂರಿ'ಯಲ್ಲಿ ಕಾವ್ಯಮೊಳಗಿಸುವ ಧ್ವನಿ, ನಾಡುನುಡಿಯ ಅಭಿಮಾನ, ನಾಡಿಗರನ್ನು ಎಚ್ಚರಿಸುವ ನುಡಿಗಳಿವೆ. ಅವು ಕನ್ನಡಿಗರ ಮಂಗಲ ನಾದವಾಗಿ ಹೊಮ್ಮಿವೆ. ಆ ಕವಿತೆಯ ರಚನೆಯನ್ನು ಕುರಿತು ಕವನದ ಪ್ರಾರಂಭದಲ್ಲಿ ಅವರು 'ಈ ಕವಿತೆಯನ್ನು ಮಹಾರಾಷ್ಟ್ರ ಕವಿ ಕೇಶವಸುತ ಇವರ 'ತುತಾರಿ'ಯ ಹೆಸರನ್ನು ಕೇಳಿ ಬರೆದೆನೇ ಹೊರತು ಅದನ್ನು ನಾನು ಓದಿಲ್ಲ' ಎಂದು ತಿಳಿಸಿದ್ದಾರೆ.

ಬೇಂದ್ರೆಯವರು ಶಿಕ್ಷಕರಾಗಿ ವಿದ್ಯಾರ್ಥಿ ವೃಂದದ ಮನಸ್ಸನ್ನು ಸೂರೆಗೊಂಡದ್ದನ್ನು ಈಗಲೂ ಧಾರವಾಡದ ಎಸ್.ಜಿ. ನಾಡಿಗೇರ ಅವರ ಜೊತೆ ಮಾತಾಡಿ ಸವಿಯಬಹುದಾಗಿದೆ. ಆ ಸವಿಯನ್ನು ಅವರ ಇನ್ನೊಬ್ಬ ವಿದ್ಯಾರ್ಥಿಯಾಗಿದ್ದ ಗೋ.ವೆ. ಚುಳಕಿಯವರು ವರ್ಣಿಸಿರುವುದು ಹೀಗಿದೆ : 'ಇವರು ಶಿಕ್ಷಕರಾಗಿ ಬಂದುದೊಂದೇ ತಡ ವಿದ್ಯಾರ್ಥಿಗಳ ಮನಸ್ಸನ್ನು ಆಕರ್ಷಿಸಿಯೇ ಬಿಟ್ಟರು. ಈ ಶಿಕ್ಷಕರ ಜಾತಿಯೇ ಬೇರೆ ಎಂದೆನಿಸಿಬಿಟ್ಟಿತು. ವಿದ್ಯಾರ್ಥಿಗಳ ಬುದ್ಧಿಮಾಪನ ಶಕ್ತಿಯನ್ನು ಕಂಡುಹಿಡಿಯಬಲ್ಲ ಬೇಂದ್ರೆಯವರ ವಿಲಕ್ಷಣ ತಾರ್ಕಿಕ ಬುದ್ಧಿಯು ಬೆರಗುಗೊಳಿಸುವಂತಹದು. ಬೇಂದ್ರೆಯವರಿಗೆ ಆಗ ರವೀಂದ್ರರ 'ಸಾಧನಾ' ಎಂದರೆ ಅಚ್ಚುಮೆಚ್ಚಿನ

---

೨ ದ.ರಾ. ಬೇಂದ್ರೆ, ಆತ್ಮಕಥನ, ಪೂರ್ವೋಕ್ತ, ಪು. ೪೨೫

ಗ್ರಂಥ. ಆ ವಿಚಾರ ಪಥದಿಂದ ನಮ್ಮ ಮನಸ್ಸನ್ನು ಎಷ್ಟೋ ತಿಳಿಯನ್ನಾಗಿ ಮಾಡಿದರು. ರವೀಂದ್ರರ ಸಾಹಿತ್ಯರುಚಿಯನ್ನು ಓದಿ ಹೇಳಿ ತಲೆಯಲ್ಲಿ ತುಂಬಿದ್ದಲ್ಲದೆ, ಅರವಿಂದ ಯೋಗಿಗಳ 'ತಾಯಿ'ಯ ಬಗ್ಗೆ, 'ಯೋಗ ಮತ್ತು ಅದರ ಉದ್ದೇಶ', ಗೀತೆಯ ಮೇಲಿನ ನಿಬಂಧಗಳು ಮೊದಲಾದ ಗಂಭೀರ ವಿಷಯಗಳ ತಿರುಳನ್ನು ನಮ್ಮ ಮೆದುಳಿನಲ್ಲಿ ಸೇರಿಸಿದರು. ನಡುನಡುವೆ ತಮ್ಮ ಕಾವ್ಯದ ಸ್ವಾನುಭವಗಳನ್ನು ವಿಶದೀಕರಿಸುತ್ತ, ಕನ್ನಡದ ಇಂಪನ್ನೂ ಕಂಪನ್ನೂ ನಮ್ಮ ಜೀವನದಲ್ಲಿ ಬಿತ್ತಿದರು."[೩]

**'ಸಖೀಗೀತ'ದ ನಾಯಕಿ : ಲಕ್ಷ್ಮೀಬಾಯಿ**

ಬೇಂದ್ರೆಯವರು ತಾಯಿಯು ಒಪ್ಪಿದ ನರಗುಂದದ ಜೋಗಳೇಕರ ವಾಸುದೇವರಾಯರ ಮಗಳು ರಂಗೂಬಾಯಿಯನ್ನು ೧೯೧೯ರಲ್ಲಿ ಹುಬ್ಬಳ್ಳಿಯಲ್ಲಿ ವಿವಾಹವಾದರು. ರಂಗೂಬಾಯಿಯವರು ಅಯ್ಯನವರ ಶಾಲೆಯಲ್ಲಿ ಓದಿದ ಸುಸಂಸ್ಕೃತ ವಧು. ಅವರು ಯುವಕವಿ ಬೇಂದ್ರೆಯವರನ್ನು ಕೈಹಿಡಿದು ಅವರ ಕಾವ್ಯರಚನೆಗೆ ಸ್ಫೂರ್ತಿಯಾದರು. ಅವರು ಮಹಾರಾಷ್ಟ್ರೀಯರ ಸಂಪ್ರದಾಯದಂತೆ ಪತಿಯ ಮನೆಯಲ್ಲಿ ಲಕ್ಷ್ಮೀಬಾಯಿ ಎಂಬ ಹೊಸ ಹೆಸರಿನಿಂದ ಕರೆಯಲ್ಪಟ್ಟರು. ಲಕ್ಷ್ಮೀಬಾಯಿಯವರು ಸಖೀಗೀತದ ನಾಯಕಿಯಾಗಿ 'ನನಗೂ ನಿನಗೂ ಅಂಟಿದ ನಂಟಿನ । ಕೊನೆ ಬಲ್ಲವರಾರು ಕಾಮಾಕ್ಷಿಯೇ !' ಎಂಬ ತಾತ್ವಿಕ ಚಿಂತನೆಗೆ ಕಾರಣರಾದರು. ಅಂದಿನ ಸಖಸಖಿಯ ಚಿತ್ರಣವನ್ನು ನೀಡುತ್ತ ವಾಮನ ಬೇಂದ್ರೆಯವರು 'ನನ್ನ ತಾಯಿಯವರ ವಿವಾಹವಾದಾಗ ಅವರಿಗಿನ್ನೂ ಹದಿಮೂರು ವರ್ಷ; ತಂದೆಯವರಿಗೆ ಇಪ್ಪತ್ಮೂರು. ಆಸ್ತಿಪಾಸ್ತಿ ಹೊಲಮನೆ, ಅಪ್ತೇಷ್ಟರುಗಳಿಂದ ಸಮೃದ್ಧ ಮನೆತನಕ್ಕೆ ಸೇರಿದ ತಾಯಿ ನಾಲ್ಕು ವರ್ಷ ಪ್ರಾಥಮಿಕ ಶಿಕ್ಷಣ ಮಾತ್ರ ಪೂರಯಿಸಿದ್ದರಾದರೆ ತಂದೆಯವರಾಗಲೆ, ಪದವೀಧರ. ಉದಿತೋದಿತಕವಿ. ಆದರೆ ಅವರು ಬೆಳೆದ ವಾತಾವರಣ ಮಾತ್ರ ಭಿನ್ನ. ಮನೆಯಲ್ಲಿ ತಾಯಿ ಮತ್ತು ಒಬ್ಬ ತಮ್ಮನನ್ನು ಬಿಟ್ಟು ಮತ್ತಾರೂ ಇರಲಿಲ್ಲ'[೪] ಎಂದು ಹೇಳಿದ್ದಾರೆ.

ಈ ವಿವರಗಳಿಂದ ನಮಗೆ ಇಬ್ಬರು ವ್ಯಕ್ತಿಗಳ ಚಿತ್ರಣ ಕಂಡು ಬರುತ್ತದೆ. ಒಬ್ಬರು - ನಮಗೆ ಈಗಾಗಲೇ ಪರಿಚಯವಾದ ಬೇಂದ್ರೆಯವರು - ಜೀವನದ ನೋವು ಸಾವನ್ನು ಕಂಡು ಬೆಳೆಯುತ್ತ ಪ್ರೌಢರಾದವರು ; ಇನ್ನೊಬ್ಬರು - ವಧು ಲಕ್ಷ್ಮೀಬಾಯಿ, ಸಮೃದ್ಧಿಯ ತವರು ಮನೆಯಿಂದ ಕಲ್ಯಾಣವನ್ನರಸುತ್ತ ಗಂಡನ ಮನೆಗೆ ಬಂದವರು. ಒಂದು ಕಡೆ ಪದವೀಧರನಾಗಿ ಕವಿ ಎಂಬ ಸಾಮಾಜಿಕ ಮಾನ್ಯತೆ ಪಡೆದ ಪ್ರೌಢವಯಸ್ಕ, ಮತ್ತೊಂದು

---

೩ ಗೋ.ವೆ.ಚುಳಕಿ, ಗೆಳೆಯರ ಗುಂಪಿನ ಮೊದಲು, ಕವಿವರ ಬೇಂದ್ರೆ, ಪೂರ್ವೋಕ್ತ, ಪು-೮೫, ೮೬

೪. ವಾಮನ ಬೇಂದ್ರೆ, 'ಅನುಬಂಧ-೧, ನನ್ನ ತಾಯಿ', ದ.ರಾ.ಬೇಂದ್ರೆ, ಮತ್ತೆ ಶ್ರಾವಣಾ ಬಂತು, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೩, ಪು-೫೮.

ಕಡೆ ಪ್ರೈಮರಿ ವಿದ್ಯಾಭ್ಯಾಸದ, ರೈತಾಪಿ ಸಮಾಜದ ಅರಿವಿದ್ದ ಮುಗ್ಧ ಹೆಣ್ಣು. ಈ ಹಿನ್ನೆಲೆಯಲ್ಲಿ ಸಖೀಗೀತದ ನಾಯಕ ನಾಯಕಿಯರು ಬದುಕನ್ನು ಗ್ರಹಿಸುವಲ್ಲಿ ತಮ್ಮ್ಮದೇ ಆದ ಅಂತರವನ್ನಿಟ್ಟುಕೊಂಡು ರಸದ ಹುಡುಕಾಟ ನಡೆಸಿದ ಮೊದಲ ಘಟ್ಟ ಪರಿಚಯವಾಗುತ್ತದೆ.

'ಸಖೀಗೀತ' ಕಾವ್ಯದಲ್ಲಿ ಬೇಂದ್ರೆಯವರು ವಿವಾಹ ದಿಬ್ಬಣವನ್ನು ಕಾವ್ಯಮಯವಾಗಿ ವರ್ಣಿಸುತ್ತ ತನ್ನ ಸಖಿಯನ್ನು 'ಅಂತಃಪಟದಾಚೆ ವಿಧಿ ತಂದ ವಧು ನೀನು ಮಾಲೆಯ ಸಾವರಿಸಿ ನಿಂತಿದ್ದೀಯೆ' ಎಂದು ಬಣ್ಣಿಸಿ ಅವಳನ್ನು 'ವಿಧಿತಂದ ವಧು' ಎಂದಿದ್ದಾರೆ. ಅಕ್ಕಲಕೋಟ ಮಹಾರಾಜರ ಆದೇಶವನ್ನು ಅನುಸರಿಸಿ ಅಂಬಿಕೆ ಸೊಸೆಯನ್ನು ಆರಿಸಿದ್ದರು. ಆದುದರಿಂದ ಬೇಂದ್ರೆಯವರು 'ವಿಧಿತಂದ ವಧು' ಎಂಬುದಾಗಿ ಸಂಬೋಧಿಸಿದ್ದಾರೆ.

'ಆಟದ ಕನ್ನಿಕೆ ಮಂಗಳ ಲಗ್ನಕೆ
ಮಾಲೆಯನಿಕ್ಕುತ ಮಡದಿಯಾದೆ
ನಾಟಿಸಿ ಕಣ್ನೋಟ ಸೋಕಿಸಿ ಕೈಬೆರಳು
ಮರವಟ್ಟ ಮನ-ಬನ ಚಿಗುರಿಸಿದೆ'

ಎಂದು ಹೇಳಿರುವಲ್ಲಿ ಆಕೆಯ ಚಿಕ್ಕ ವಯಸ್ಸು, ಮುಗ್ಧತೆ ಮತ್ತು ಆಕೆಯ ಸ್ಪರ್ಶ ಅವರಲ್ಲಿ ಉಂಟು ಮಾಡಿದ ರೋಮಾಂಚನ, ಅವರಲ್ಲುಂಟಾದ ಸೃಜನಶಕ್ತಿಯ ಚೇತರಿಕೆಯನ್ನು ಸೂಚಿಸುತ್ತದೆ.

ವಿವಾಹದ ನಂತರ ಪತಿಪತ್ನಿಯರ ಪ್ರಣಯ ಅವರು ಪಟ್ಟ ಸಂತಸ ಪದಪದದಲ್ಲಿ ಹೊಗರನ್ನು ಹೊಂದಿದಂತೆ ವರ್ಣಿತವಾಗಿದೆ.

'ನೀನು ದೊಡ್ಡವಳಾದೆ ಮೈಸಲಿಗೆ ಬೆಳೆಸಿದೆ
ಏಕಾಂತಕೆಳಸಿದೆ - ಎಳೆ - ಕೆಳದಿಯೆ
ಏನು ಸಂಭ್ರಮವದು ! ಹರೆಯದ ಹಬ್ಬವು
ಕನಸು ಮನಸೂ ಹೆಣೆದು ಬೆಳೆಬೆಳೆದೆವೇ'

ಇದರಲ್ಲಿಯ ಎರಡನೆಯ ಸಾಲು ಆಕೆ ಆತನನ್ನು ಸೆಳೆದ ರೀತಿ ಚಿತ್ರಿಸುತ್ತ, ಅವಳು ಎಳೆಯ ಸ್ನೇಹಿತೆ ಎಂಬುದನ್ನು ಧ್ವನಿಸಿದೆ. 'ಳ'ಕಾರದ ಒಳ ಪ್ರಾಸ ಸೆಳೆತವನ್ನು ಸ್ಪಂದಿಸುತ್ತದೆ. ಆತ ಆಕೆಯನ್ನು ಆಸ್ವಾದಿಸಿದ ರೀತಿಯು 'ನಿಂತ ನಿಲುವೆಲ್ಲವೂ ತ್ರಿಭಂಗಿಯೆ !' ಎಂಬ ಸಾಲಿನಲ್ಲಿದೆ. 'ತ್ರಿಭಂಗಿ' ಎಂಬ ಶಬ್ದ ಶಿಲ್ಪಶಾಸ್ತ್ರದಲ್ಲಿ ಸ್ತ್ರೀ ನಿಲುವಿನ ಸೌಂದರ್ಯಸೂಚಕ. ಅದು ಯೌವನದ ಆಟದ ಕಾಲ. ಆದುದರಿಂದ ಆ ಕಾಲ ಜಾರಿದ ರೀತಿಯು ಬೇಂದ್ರೆ ಸವಿದ ಬಾಲ್ಯದ ಶಿಸ್ತಿನ ಆಟದ ತನ್ಮಯತೆಯ ನೆನಪನ್ನು ತರುತ್ತದೆ.

'ಹಗಲೆಲ್ಲೊ ಹಾರಿದವು ಇರುಳೆಲ್ಲೋ ಜಾರಿದವು
ಋತು ನಿದ್ದೆ ಮಾಡಿದವು ಬುಗುರೆಯೊಲೇ'

ಅದರ ಫಲ 'ನನೆ ಕೊನೆ ಕಾತಿತು ಅತ್ತೆಯ ಸೊಸೆಮುದ್ದು । ಚೊಚ್ಚಿಲ ಬಸಿರಿ ನೀ ಎದೆ ತೆರೆದೆ ।'

ಸಖಿ ಪೆತ್ತ ಮಗು (ಕ್ಷೇಮೇಂದ್ರ) ಹೆಚ್ಚು ದಿನ ಉಳಿಯದೆ ಸತ್ತಾಗ ಸಖಿಗೆ ಬದುಕಿನ ಕ್ರೂರತೆ ಪರಿಚಯವಾಗುತ್ತದೆ. ಆಗ ಅವರಿಬ್ಬರೂ ನೊಂದ ರೀತಿ :

'ಬೆರಗಾದೆ ಬೆಪ್ಪಾದೆ ನಮ್ಮಿಬ್ಬರ ಅಳಲು
ಮೌನ ಮೀಟಿದ ಹಾಗೆ ನರಳುತಿರೆ'

ಎಂಬಲ್ಲಿ ದಂಪತಿಗಳ ಮೌನದ ಮೊದಲ ಪರಿಚಯವಾಗುತ್ತದೆ. ಅವಳ ನೋವು ಅಲ್ಲಿ ಮೌನವಾಗುತ್ತ ಸಾಗಿ, ಮುಂದೆ ಮೌನವೇ ಅವಳ ಪ್ರತಿಮೆಯಾಗುತ್ತದೆ.

ಬ್ರಿಟಿಷ್ ವಸಾಹತಿನ ವಿರೋಧಿ ಶಾಂತಕವಿಗಳು ಅವರ ಗುರುಗಳಾಗಿ, ಆ ಚಿಂತನೆಯ ಕಾವ್ಯದುರಿಯನ್ನು ಅವರಲ್ಲಿ ಹೊತ್ತಿಸಿದ್ದರು. ರಾಷ್ಟ್ರೀಯ ಚಳುವಳಿ ಧಾರವಾಡದಲ್ಲಿ ರೂಪುಗೊಂಡ ಕಾಮನಕಟ್ಟೆಯಲ್ಲಿಯೇ ಬೆಳೆಯುತ್ತಿದ್ದ ಬೇಂದ್ರೆಯವರು ರಾಷ್ಟ್ರೀಯ ಚಿಂತಕರಿಂದ ಪ್ರೇರಣೆಗೊಂಡು ವಸಾಹತುವಿರೋಧಿ ಮೂಲಭಾವಗಳನ್ನು ತಿಳಿಯುತ್ತ ಅದರ ಮೂಲೋತ್ಪಾಟನೆಗೆ ಜನಾಂಗವನ್ನು ರೂಪಿಸಬೇಕಾದ ಶಿಕ್ಷಕವೃತ್ತಿ ಹಾಗೂ ಕಾವ್ಯಮಾಧ್ಯಮದತ್ತ ತಮ್ಮನ್ನು ತೊಡಗಿಸಿಕೊಂಡರು. ಬಿ.ಎ. ಪದವೀಧರನಾಗಿ ಉತ್ತಮವಾದ ಲೌಕಿಕ ಜೀವನ ನಿರ್ವಹಣೆಗೆ ಸಾಧನಾ ಮಾರ್ಗವಾಗಿಸಿಕೊಳ್ಳಬಹುದಾದ ವಿದ್ಯೆಯನ್ನು ಬೇಂದ್ರೆಯವರು ನಾಡಿನ ವಿದ್ಯಾರ್ಥಿಗಳನ್ನು ರೂಪಿಸುವ ಶಿಕ್ಷಕವೃತ್ತಿಗೆ ಮೀಸಲಾಗಿರಿಸಿಕೊಂಡರು. ಅವರ ಮಾನಸಿಕ ಪ್ರಪಂಚವನ್ನು ಹಣಸಂಪಾದನೆಗೆ ವಿದ್ಯೆ ಒಂದು ಮಾರ್ಗ ಎಂಬ ಭೌತಿಕ ಲಾಲಸೆ ಪ್ರವೇಶಿಸಲಿಲ್ಲ. ಅವರು ಜನಸಮೂಹದಿಂದ ದೂರವಾಗಿ ವೈಯಕ್ತಿಕ ಆಸೆಗಳ ಭೌತಿಕ ಸಮೃದ್ಧಿಗೆ ಮನಸ್ಸುಗಳನ್ನು ಕೊಡದೆ, ಜನಸಂವಹನದ ಮೂಲ ನೆಲೆ ಶಾಲಾಶಿಕ್ಷಣದತ್ತ ಮನಸ್ಸು ಮಾಡಿದ್ದು, ಅವರ ಮನುಷ್ಯ ಚೇತನದ ಎಚ್ಚರಗೊಳಿಸುವ ಮೂಲಭಾವವನ್ನು ಪರಿಚಯಿಸುತ್ತದೆ. ಬಾಲ ಮನಸ್ಸುಗಳನ್ನು ಸೃಜನಶೀಲಗೊಳಿಸುವ ಬೇಂದ್ರೆಯವರ ಆಲೋಚನೆಗಳು ಅವರ ಸೃಜನಶೀಲ ವ್ಯಕ್ತಿತ್ವವಾಗಿದೆ. ಅದೇ ಅವರ ಕಾವ್ಯಸೃಷ್ಟಿಯ ಮೂಲ ಆಂತರಿಕ ಶಕ್ತಿಯಾಗಿದೆ.

ಶಾಲಾಶಿಕ್ಷಕರಾದ ಬೇಂದ್ರೆಯವರು ಬಡತನದಲ್ಲಿಯೇ ಜೀವನ ಸಾಗಿಸುತ್ತಿದ್ದರು. ಅವರ ಎಲ್ಲ ಆದರ್ಶ ಬದುಕಿಗೆ ನೆರವಾಗಿ, ಸಾಹಿತ್ಯಾಸಕ್ತಿಗೆ ಇಂಬುಗೊಟ್ಟು ಸಂಸಾರ ನಡೆಸಿದ ಶ್ರೇಯಸ್ಸು ಲಕ್ಷ್ಮೀಬಾಯಿಯವರದಾಗಿದೆ. ಬೇಂದ್ರೆಯವರಿಗೆ ಕಾವ್ಯದ ಸಿರಿತನದಲ್ಲಿ ಬದುಕಿನ ಬಡತನ ಸಿರಿತನವೆಂಬುದು ಅಷ್ಟು ಮುಖ್ಯವಾಗಿರಲಿಲ್ಲ. 'ಶಿಕ್ಷಕರ ಬಡಸಂಸಾರ ನಿರ್ವಿಘ್ನವಾಗಿ

ಸಾಗಿತು. ಬಡಸಂಸಾರ ಎಂಬ ಭಾವನೆಯೇ ಬೇಂದ್ರೆಯವರಿಗೆ ಬರಲಿಲ್ಲ. ಊಟಕ್ಕೆ ಇರದಿದ್ದರೆ ಉಪವಾಸ ಮಾಡಿದರೇನು ತಪ್ಪು ? ಉಪವಾಸವ್ರತವನ್ನೂ ಸಾಧಿಸಿದಂತೆ ಆಯಿತು ಎಂಬುದೆ ಅವರ ಜೀವನ ದೃಷ್ಟಿ'[೫] ಎಂದು ವಾಮನ ಬೇಂದ್ರೆಯವರು ವಿವರಿಸಿದ್ದಾರೆ.

ಬೇಂದ್ರೆಯವರು ಶಿಕ್ಷಕರಾಗಿ ಮಕ್ಕಳಿಗೆ ಉತ್ತಮವಾಗಿ ಕಲಿಸಿದರು. ಕವಿಭಾವದ ಅವರು ಮೈತುಂಬಿ ಮನದುಂಬಿ ಪಾಠ ಕಲಿಸಿ ಬೇಂದ್ರೆ ಮಾಸ್ತರರಾದರು. ವಿದ್ಯಾರ್ಥಿಮಿತ್ರರಾದ ಪ್ರಹ್ಲಾದ ನರೇಗಲ್ಲ, ಕೃಷ್ಣಕುಮಾರ ಕಲ್ಲೂರ, ಗಂಗಾಪ್ರಸಾದ ತಿವಾರಿ, ರಾಮು ಅಭ್ಯಂಕರ, ದ.ಪ. ಕರಮಕರ, ಸಗರ, ರಾಯದುರ್ಗ, ಬ್ಯಾಳಿ, ಶಾಂತಗೇರಿ ಮುಂತಾದವರೊಡನೆ ಸುಂದರಕಾಂಡ, ವಾಯುಸ್ತುತಿ, ಸೌಂದರ್ಯಲಹರಿ, ವಿಷ್ಣು ಸಹಸ್ರನಾಮ, ಲಲಿತಾಸಹಸ್ರನಾಮ ಪಠಣ ಮಾಡುತ್ತ ಸ್ನೇಹಸಾಧನೆ ಮಾಡಿದರು. ಆದರ್ಶ ಶಿಕ್ಷಕರಾದ ಬೇಂದ್ರೆಯವರು ತಮ್ಮ ಅಭ್ಯಾಸದ ಫಲವನ್ನು ವಿದ್ಯಾರ್ಥಿಗಳಿಗೆ ಉಣಬಡಿಸಿದರು. ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಸಕ್ತಿ ಉಂಟಾಗಲು ಕೈಬರಹದ ಪತ್ರಿಕೆ ನಡೆಸಿದರು.

ಬೇಂದ್ರೆಯವರು ಶಾಲಾ ಶಿಕ್ಷಕರಾದ ಆಲೋಚನೆಯಲ್ಲಿ ಬ್ರಿಟಿಷ್ ಪ್ರಭುತ್ವವನ್ನು, ಅದರ ಶೋಷಣೆಯನ್ನು ಧಿಕ್ಕರಿಸಿದ ಮನೋಭಾವವಿದೆ. ಆ ಪ್ರಭುತ್ವವಿರೋಧಿ ಮನಸ್ಸು ಸಮುದಾಯದ ಪರವಾಗಿದ್ದು, ಜನಾಂಗವನ್ನು ಎಚ್ಚರಿಸುವ ತವಕವಿದೆ. ಕವಿ ಸಾರ್ವಜನಿಕ ವ್ಯಕ್ತಿತ್ವವನ್ನು ಹೊಂದಿದವನು. ಅವನು ಸಮುದಾಯದ ಪ್ರತಿನಿಧಿ. ಅವನ ಕಾವ್ಯಾಭಿವ್ಯಕ್ತಿ ಜನಪರವಾಗಿರಬೇಕೆಂಬ ಅರಿವಿದ್ದ ಬೇಂದ್ರೆಯವರು ಶಿಕ್ಷಕರಾಗಿ ತಮ್ಮಲ್ಲಿನ ಕವಿಯನ್ನು ಸಮರ್ಥವಾಗಿ ಪೋಷಿಸಿದರು. ಶಿಷ್ಟಶೈಲಿಯಲ್ಲಿ ಕಾವ್ಯರಚಿಸುವ ಮಾರ್ಗಪದ್ಧತಿಯನ್ನು ಅನುಸರಿಸಿ, ಅದರಲ್ಲಿ ಜಾನಪದೀಯ ಸತ್ತ್ವ, ಚೈತನ್ಯವನ್ನು ಕಸಿಗೊಳಿಸಿ, ವಿಶಿಷ್ಟ ಶೈಲಿಯನ್ನು ರೂಪಿಸಿ, ಮಾರ್ಗ ಹಾಗೂ ದೇಸಿಯ ಸಮತೋಲನವನ್ನು ಸಾಧಿಸಿದರು.

### ಹಗಲಿರುಳು ಕೋಗಿಲ ದನಿಯಾಗಿ ಕೂಗಿತ್ತೊ

ಬೇಂದ್ರೆಯವರ ಕಾವ್ಯದ ಪ್ರತೀಕ - ಕೋಗಿಲೆ. ಕೋಗಿಲೆ ಅವರನ್ನು ಬಾಲ್ಯದಿಂದಲೂ ತನ್ನ ಮಧುರ ಕೂಗಿನಿಂದ ಸೆಳೆದು ಕಾಡಿದೆ. ಅವರು 'ಸಾಹಿತ್ಯದ ವಿರಾಟ್ ಸ್ವರೂಪ'ದಲ್ಲಿ ಗೋಖಲೆಯವರ ಮನೆಯಲ್ಲಿದ್ದ ಹುಣಿಸೆ ಮರದಲ್ಲಿ ಹಾಡುತ್ತಿದ್ದ ಕೋಗಿಲೆ ತನ್ನನ್ನು ಬಾಲ್ಯದಲ್ಲಿ ಸೆಳೆದಿದ್ದನ್ನು ಹೇಳಿಕೊಂಡಿದ್ದಾರೆ. ಅವರ ಬಹುಚರ್ಚಿತ ಅಧ್ಯಾತ್ಮ ಕವನ 'ಜೋಗಿ'ಯ 'ಹಗಲಿರುಳು ಕೋಗಿಲದನಿಯಾಗಿ ಕೂಗಿತ್ತೋ । ಕೂಹೂ ಎಂಬೋ ಮಂತ್ರ ಒಂದೇ ಸಮ' ಎಂಬ ನುಡಿ ಬಾಲ್ಯದಿಂದಲೂ ಅವರನ್ನು ಆಕರ್ಷಿಸಿ ಚಿಂತನೆಗೊಳಪಡಿಸಿದೆ. ಕೋಗಿಲೆ ಅವರ ಆತ್ಮದ ಒಳದನಿಗೆ ಪ್ರತೀಕವಾಗಿದೆ. 'ಒಂದೇ ಸಮ' ಎಂಬ ಜನಪದ ನುಡಿ ಒಂದೇ ಉಸಿರಿನ ಬಿಡುವಿಲ್ಲದ ಹಾಗೆ ನುಡಿವ ನುಡಿ. ಬೇಂದ್ರೆಯವರಿಗೆ ಇಳಿವಯಸ್ಸಿನಲ್ಲಿಯೂ

---

೫ ವಾಮನ ಬೇಂದ್ರೆ, 'ಬೇಂದ್ರೆ ಜೀವನ ಪರಿಚಯ'; ಧಾರವಾಡ, ೧೯೯೦, ಪು-೨೬

ತಾವು ಬಾಲ್ಯದಲ್ಲಿ ಓಡಿಯಾಡಿದ ಧಾರವಾಡದ ಹಳ್ಳಕೊಳ್ಳದ 'ಸೆನಪಾದ' ಅಂದರೆ (ನೆನಪು + ಆದ) ನೆನಪು ಇದೆ. ಬೇಂದ್ರೆಯವರ ಅಧ್ಯಾತ್ಮಕವನಗಳಲ್ಲಿ 'ಸಣ್ಣ ಸೋಮವಾರ'ವೂ ಒಂದಾಗಿದೆ. ಅದು ಅವರು ಸೋಮೇಶ್ವರ ಜಾತ್ರೆಗೆ ಕುಣಿದು ಕುಪ್ಪಳಿಸಿ ಹೋಗುತ್ತ ಆ ದೈವದ ಆರಾಧನೆಯಲ್ಲಿ ಒಂದಾದ ಬಾಲ್ಯದ ಮಧುರ ನೆನಪಾಗಿದೆ. ಶ್ರಾವಣ ಸೋಮವಾರ, ಹಳ್ಳಿಯ ಜನರ ಮಾತಿನಲ್ಲಿ ಅಪಭ್ರಂಶವಾಗಿ 'ಸಣ್ಣ ಸೋಮವಾರ'ವಾಗಿದೆ. 'ಸಣ್ಣ ಸೋಮವಾರ' ಕವನವು ಗ್ರಾಮೀಣ ಜನರ ಮುಗ್ಧ ಭಕ್ತಿಯ ಅಧ್ಯಾತ್ಮ ಚಿಂತನಾಲಹರಿ. ಅದು ಮನಸ್ಸಿನ ಶಾಂತಿಗಾಗಿ ಸೋಮೇಶ್ವರನನ್ನು ಧ್ಯಾನಿಸುತ್ತ ತಮ್ಮ ತಮ್ಮ ಅರಿವಿನ ಅಂತರಾಳವನ್ನು ಆ ದೇವಾಲಯದ ಗರ್ಭಗುಡಿಯಲ್ಲಿ ಕಂಡುಂಡ ಅನುಭವ. ಮುಗ್ಧ ಜನರು ಕಂಡ ಅಹಂಕಾರರಹಿತವಾದ ದಿವ್ಯ ಬೆಳಕು.

**ಸೋಮೇಶ್ವರದ ಹಾದಿ - ಏನೋ ಭ್ರಮ!**

'ಸಣ್ಣ ಸೋಮವಾರ' ಧಾರವಾಡದ ಪರಿಸರದಲ್ಲಿ ಅರಳಿದ ಬೇಂದ್ರೆಯವರ ಆಸ್ತಿಕ ಭಾವ ಬೆಳೆದು, ಆಧ್ಯಾತ್ಮಿಕ ಅನುಭಾವವಾದುದರ ಬಗೆಯನ್ನು ತಿಳಿ ಹೇಳುವ ಕವನವಾಗಿದೆ. ಅವರ ಧಾರವಾಡದ ನೆಲೆಗಟ್ಟು ಭಾರತೀಯ ಧಾರ್ಮಿಕ ಹಿನ್ನೆಲೆಯಲ್ಲಿ ಹೊಮ್ಮಿ, ಒಂದು ಕಾಲದ ಮಿತಿಯ ಅನುಭವ ಸರ್ವಕಾಲಿಕವಾಗಿ, ಸೋಜಿಗದ ಚಿಕ್ಕಂದಿನ ನಂಬಿಕೆಯ ಭಾವ ಪ್ರಕೃತಿಸಹಜ ಪ್ರಕಾಶವಾಗಿ ಆ ಕವನದಲ್ಲಿ ಮೂಡಿದೆ.

ಬಂತಣ್ಣ ಸಣ್ಣ ಸೋಮವಾರ
ಕಾಣಬೇಕಣ್ಣ ಸೋಮೇಶ್ವರ ॥ ಪ ॥

ಎಂಬ ಪ್ರಾರಂಭದ ನುಡಿಯಲ್ಲಿ ತಮ್ಮ ಎಪ್ಪತ್ತನೇ ವಯಸ್ಸಿನಲ್ಲಿ ಬಾಲ್ಯದ ನೆನಪನ್ನು ಮಾಡಿಕೊಳ್ಳುತ್ತಿರುವ ಕವಿಯಲ್ಲಿ ಆ ಸೋಮೇಶ್ವರನ ಕಾಣ್ಕೆಯ ಭಾವವಿದೆ. ತಮ್ಮ ಬಾಲ್ಯದ ಸುಂದರ ಚಂಚಲತೆ, ಮಕ್ಕಳಾಟ, ನೋಟ, ಹಸಿರುತೋಟ, ಸುತ್ತಮುತ್ತ ಪಯಿರಿನ ಮಾಟ, ಮುಗಿಲು, ಮೋಡ, ಮಿಂಚು, ಗುಡುಗು, ಚಳಿಗಾಳಿಯ ಬೆಡಗಿಗೆ ಪಕ್ಕಾದ ಮನಸ್ಸಿದೆ. ಶ್ರಾವಣ ಮಾಸದಲ್ಲಿ ಕವಿಯಲ್ಲಿನ ಶ್ರಾವಣಪ್ರತಿಭೆ ಜಾಗೃತವಾದ ಪ್ರಕೃತಿಯಿದೆ. ಆ ಪ್ರಕೃತಿಯಲ್ಲಿ ಸೋಮೇಶ್ವರನನ್ನು ನೋಡಲು ಹೋಗುವಾಗಿನ ಮುಕ್ತ ಮನಸ್ಸು ಮತ್ತು ಮಕ್ಕಳಿಗೆ ಇಷ್ಟವಾದ ಫರಾಳದ ರುಚಿಯಿದೆ :

'ನಾ ಮುಂದ ತಾ ಮುಂದ
ನಡಿಗಿಯು ತರತರದಿಂದ
ಸಾಲಿsಗೆ ಸೂಟಿ, ಎಂಥ ಹ್ವಾರೆ?
ಕಾಯಿಕಪ್ಪುರ ಕಟಿಕೊಂಡು
ಬೆಲಪತ್ರಿ ಹಿಡುಕೊಂಡು
ಸಂಗಾಟ ಫರಾಳ ಬ್ಯಾರೇ'

ಆ ಸೋಮೇಶ್ವರನಿರುವ ಸೀಮೆ ಧಾರವಾಡದ ಏರು ಇಳುವಿನ ಚಲನಶೀಲತೆಯ ಜೀವತುಂಬಿದ ಬೀಡಾಗಿ, ಮಂಗಗಳು ಟೊಂಗೆಯಿಂದ ಟೊಂಗೆಗೆ ಏರಿ ನೀರಲಹಣ್ಣು ಉದುರಿಸುವ, ಗೂಡ್ಸುಗಾಡಿ ದುಡುದುಡು ಬರುವ, ಅದರ ಶಬ್ದ ಕೇಳಿ ಮಕ್ಕಳು ರೈಲಾಗಿ ಠೀಕು ಜೋಡಿ ಜೋಡಿ ನಿಂತುನಿಂತಲ್ಲೆ ಕುಣಿವ ಕುಣಿತವಿದೆ. ಆ ಜೀವಗತಿ ಆಸ್ತಿಕತೆಯ ಜೀವಂತಿಕೆಯನ್ನು ಬಿಂಬಿಸುತ್ತದೆ :

'ತಗ್ಗಿನ್ಯಾಗ ಗಿಡದ ಗುಂಪು
ಹೊಂಡsದ ನೀರ ತಂಪು
ದೂರಿಂದ ಕಂಡರೂ ಸೊಂಪು'

ಎಂಬ ವಾಸ್ತವ ಚಿತ್ರಣ ವಯಸ್ಸಾದ ಶರೀರದಿಂದ ಮಕ್ಕಳಾಗಿದ್ದಾಗಿನ 'ನಾ ಮುಂದ ನೀ ಮುಂದ' ಎಂದು ಗುಂಪಾಗಿ ನಡೆದ, ತಂಪಾದ ಮನದ ಆನಂದವನ್ನು 'ದೂರಿಂದ ಕಂಡರೂ ಸೊಂಪು' ಎಂದು ನೆನೆಯುತ್ತಿದೆ.

ಸೋಮೇಶ್ವರನನ್ನು ಕಾಣಲು ಹೋಗುವಾಗಿನ ಭಜನಿಯ ಮ್ಯಾಳದ ಧನಿ 'ಅಲ್ಲಾ ದೂರಾ ಅಲ್ಲಾ ಸನಿ' ಎಂಬ ಸೋಮೇಶ್ವರನ ಅನುಭವವಾಗಿ ನಡುವೆ ಕೂಗುವ ಕೋಗಿಲೆಯ ಧ್ವನಿ ಆಧ್ಯಾತ್ಮಿಕ ಅನುಭವದ ಕೂಗಾಗಿ, ಮಾನಸ ಸರೋವರ ಹೊಕ್ಕು 'ಹರಹರ ಮಹಾದೇವ' ಎಂಬ ಭಾವದಲ್ಲಿ ಜೀವ ಈಸಾಡುವ ಅನುಭವ ನೀಡುತ್ತದೆ. ಆ ಕೋಗಿಲೆಯ ಧ್ವನಿ ವಾಸ್ತವಿಕ ಅರಿವನ್ನು ನೀಡುತ್ತ ಆಧ್ಯಾತ್ಮಿಕ ಸ್ತರಕ್ಕೊಯ್ಯುವ ಅಲೌಕಿಕ ಧ್ವನಿಯಾಗಿದೆ. ಭಜನೆಯ ಧ್ವನಿ ನಿರ್ದಿಷ್ಟತೆ ಸೂಚಿಸಿದರೂ ಸುತ್ತ ಬದುಕಿನ, ವಾಸ್ತವದ ಅರ್ಥಬಂಧದ ಜೊತೆಗೆ ಆ ಕೋಗಿಲೆಯ ಧ್ವನಿ ದೇವರು-ಭಕ್ತ, ಜೀವ-ಮಹಾದೇವ ಸಂಬಂಧ ಕಲ್ಪಿಸುವ ಆಧ್ಯಾತ್ಮಿಕ ಸೇತುವಾಗಿ ಬಂದಿದೆ. ಆ ಧ್ವನಿ ಸಾಮಾನ್ಯತೆಯನ್ನು ಅಸಾಮಾನ್ಯತೆಗೆ ಕರೆದೊಯ್ಯುವ ಸಾಧನದ ಸಂಕೇತವಾಗಿ ಕಾವ್ಯದಲ್ಲಿ ಮೂಡಿದೆ. ಆ ಸುತ್ತಲ ವಾತಾವರಣದಲ್ಲಿ ಸೋಮೇಶ್ವರನನ್ನು ಕಂಡಾಗ ಮನದ ಮೇಲಾಗುವ ಪ್ರಭಾವ :

'ಗರ್ಭಗುಡಿಯೊಳಗ ಲಿಂಗ
ನಿದ್ದಿಯೊಳಗs ನೋಡಿದ್ದಾಂಗ
ಕಣ್ಣು ಮುಚ್ಚತಾವ ನಮೋ ಎಂದು
ಗವೀಯೊಳಗಿನ ದಾರಿ
ಹರದಾರಿ ಹರದಾರಿ
ಮಿಂಚಿತ್ತು ಚಂದ್ರ ಕ್ವಾರಿ ಒಂದು.
ನಿಂತ ಮೈಯಾಗಿ ಖಂಬ
ಸೋರ್‍ಯಾವ ಜಂಬಗಿಂಬ
ಹಿಡಿದಾನ ಕೈಯ್ಯ ಶಿವನೆ ಬಂದು'

ಎಂಬ ಆಸ್ತಿಕ ಭಾವದಿಂದ ನಮೋ ಎಂದು ಕಣ್ಣು ಮುಚ್ಚಿದಾಗ ಮನದ ಒಳಹಾದಿಯಲ್ಲಿ ಹರದಾರಿಯಲ್ಲಿ ಶಿವನ ದಾರಿಯಲ್ಲಿ ಹರದಾರಿ ಹರದಾರಿ ಹರಿದು ಸಾಕಷ್ಟು ಸಾಗಿದಾಗ, ಚಂದ್ರನ ಬೆಳಕು ಗೋಚರಿಸಿ, ಮೈಕಂಬವಾಗಿ ನಿಂತು, ಜಂಬಗಿಂಬ ಎಲ್ಲ ಸೋರಿ, ಶಿವನೆ ಬಂದು ಕೈಹಿಡಿದ ಭಾವ ಮನದುಂಬುತ್ತದೆ. ಜೀವ - ಮಹಾದೇವರ ಅರಿವು ಒಂದು ಬಗೆಯ ನಿದ್ದೆಯೊಳಗೆ ನೋಡಿದ ಭಾವ ತಂದರೂ, ಅದರ ದಾರಿ ಹರದಾರಿಯ ರೀತಿಯಲ್ಲಿ ಕಾಣಿಸುವುದು ಭಗವಂತನನ್ನು ಅನುಭವಿಸುವ ಪರಿಯನ್ನು ಕಾವ್ಯವಾಗಿಸಿದೆ.

ಎಚ್ಚರಾದಾಗ, ನಿದ್ದೆಯಲ್ಲಿ ನೋಡಿದ ಮತ್ತು ಶಿವನೆ ಬಂದು ಕೈ ಹಿಡಿದಿದ್ದಾನೆ ಎಂಬ ಭಾವ ಹುಚ್ಚುಚ್ಚಾರ ಎನಿಸಿ, ಎಲ್ಲರ ಕೂಡ ಕೈ ಮುಗಿದು ಬೆಂಡು ಬತ್ತಾಸು ತಿನ್ನುತ್ತ ನುರಿಸಿಕೊಳ್ಳುತ್ತ ಸಾಗುತ್ತಿದ್ದೆವು- ಎಂದು ಬೇಂದ್ರೆಯವರು ಹೇಳಿದ್ದಾರೆ. ಹಾಗೆ ಹೇಳುತ್ತಾ ಭಾವ ಅನುಭಾವದ ತೆಳುಪರದೆಯ ಅರಿವನ್ನು ತಿಳಿಯುತ್ತಾ, ತಿಳಿಸಲು ಪ್ರಯತ್ನಿಸುತ್ತಾ ಅವರು ಓದುಗರನ್ನು ಎಚ್ಚರಿಸುತ್ತಾ ಸಾಗಿದ್ದಾರೆ.

ಆ ಚಿಕ್ಕಂದಿನ ಅನುಭವ ಮತ್ತೊಂದು ಮಜಲಿನ ಅನುಭವಕ್ಕಾಗಿ ಶಾಲ್ಮಲಿಯ ರೂಪಕಕ್ಕೆ ಜಿಗಿಯುತ್ತದೆ. ಧಾರವಾಡದ ಸೋಮೇಶ್ವರನ ನೆಲದ ಶಾಲ್ಮಲಿ ಚಿಕ್ಕನದಿಯಾಗಿ ಹುಟ್ಟಿ ಬೆಳೆವ ರೀತಿಯನ್ನು ಬೇಂದ್ರೆಯವರು ಚಿತ್ರಿಸಿದ್ದಾರೆ. ಅವಳು ಬೆಳೆದು ಗಂಗಾವಳಿಯಾಗಿ ಗೋಕರ್ಣದ ಮಹಾಬಲೇಶ್ವರನನ್ನು ಕಂಡು ಸಾಗರ ಸೇರುವಾಗ ಇಡೀ ಪ್ರಕೃತಿಯೆ ಮಹಾಬಲವಾಗುತ್ತದೆ. ಸಣ್ಣಭಾವದ ಸೆಜ್ಜಿಸಾಲು ನಂದಿಹೋಗಿ, ಹಿರಿದಾದ ಬೂರಲ ದೀಪದ ಮಾಲೆಯಾಗಿ ಬೆಳಗಿ, ತನ್ನ ಗತ್ತಿನ ಸಪ್ಪಳ ಮಾಡದ ನಡಿಗೆಯಿಂದ ಜೀವಾತ್ಮ - ಪರಮಾತ್ಮನನ್ನು ಸೇರಿದ ಭಾವವಾಗಿ ಅಭಿವ್ಯಕ್ತಗೊಳ್ಳುತ್ತದೆ.

ಕೆಲವು ತಿಂಗಳ ಧಾನ್ಯ ಬೆಳೆಯಾಗಿ ಬೆಳೆದು, ದೀಪದ ಕುಡಿಯಂತೆ ಸೆಜ್ಜೆತೆನೆಯಿದ್ದು, ಅದು ಆಕಾಶ ಮುಖಿಯಾದರೂ ಅದಕ್ಕೆ ಅಸಾಮಾನ್ಯತೆಯ ಎತ್ತರಕ್ಕೇರುವ ನಿಲುವಿಲ್ಲ. ಆ ಎತ್ತರ ಭಾವದ ಊರ್ಧ್ವಗಾಮಿತ್ವದ ಸಂಕೇತವಾಗಿ ಬೂರಲಮರವಿದೆ. ಗೋಕರ್ಣದ ಮಹಾಬಲನನ್ನು ಕಾಣಲು ಶಾಲ್ಮಲಿ ಗಂಗಾವಳಿಯಾದಂತೆ ಸಜ್ಜೆಧಾನ್ಯದ ವ್ಯಕ್ತಿ ವಿಕಾಸಹೊಂದಿ, ಬೂರಲ ವೃಕ್ಷವಾಗಿ ಹೂತು, ಮೇಲ್ಮುಖದ ಬೆಳಕು ಕಾಣುವ ಬೆಳಕಾಗಬೇಕು ಎಂಬ ಭವ್ಯರೂಪಕ ನೀಡಿದ್ದಾರೆ.

'ಶಾಲ್ಮಲಿ ಸಣ್ಣ ಬಾಲಿ
ಕಿವಿಯಲ್ಲಿ ತಾಳೆ ವಾಲಿ
ಗರಿಗರಿ ಬನದಾಗ ಅಡಗಿ
ಗಂಗಾ ಹೊಳಿಯಾಗಿ
ಸಾಗರ ಬಿದ್ದು ಸಾಗರಕಾಗಿ

ಹೊರಟಾಳ ಗೋಕರ್ಣಕಡಿಗಿ.
ಬೂರಲ ದೀಪಮಾಲಿ
ನಂದಿಸಿ ಸಜ್ಜಿ ಸಾಲಿ
ಗತ್ತಿನs ಸಪ್ಪಳಿಲ್ಲದ ನಡಿಗಿ'.

ಹಾಗೆ ತನ್ನ ಚಿಕ್ಕಂದಿನ ಭಾವ ಬೆಳೆದು ಸುತ್ತಲ ಪ್ರಕೃತಿ ಬೂರಲ ದೀಪಮಾಲೆಯಾಗಿ ಸಜ್ಜಿ ಸಾಲು ಭಾವದ ಕಿರಿತನ ನಂದಿ, ಸಾಗರ ಬಿದ್ದು ಸಾಗರವಾಗುವ ಅಲೌಕಿಕತೆಯ ಭಾವ, ಗತ್ತಿನ ಸಪ್ಪಳಿಲ್ಲದ ನಡಿಗೆಯಾಗುತ್ತದೆ. ಆ ಗತಿಯಲ್ಲಿ ಶಿವದರ್ಶನವಾದ ಬಗೆಯನ್ನು 'ಶಿವರಾತ್ರಿ ಬೆಳಕೆ, ಬೆಳ್ಳ ಬೆಳಗು. ಕೈಲಾಸಾನೆ ಹೊರಗು ಒಳಗು' ಎಂಬ ನುಡಿಗಳಲ್ಲಿ ಮೂಡಿಸಿದ್ದಾರೆ.

ಅಲೌಕಿಕತೆಯ ಭಾವಲೋಕದಿಂದ ಹೊರಬಂದು ಎಚ್ಚರಗೊಂಡ ಬೇಂದ್ರೆಯವರು ವಾಸ್ತವದ ಚಿಕ್ಕಂದಿನ ಅನುಭವ, ಹಿರಿಯರ ಸಹಜ ಮಾತಿನ ಹಾದಿಹಿಡಿದು 'ನಮ್ಮ ಖ್ಯಾಲಾ' ಅಲ್ಲೇ ಸುತ್ತಾಡುವ ಬಗೆಯನ್ನು ಹೇಳಿದ್ದಾರೆ, ಹಾಗೆ ಹೇಳುತ್ತ ಮತ್ತೆ ಭಾವಲೋಕಕ್ಕೆ ಜಿಗಿದು ಒಳಹೊರಗು ಒಂದಾಗುವ ; ಭಾವ ಅನುಭಾವ ಒಂದಾಗಲೆಳಸುವ ಬಗೆಯನ್ನು ಕಾವ್ಯವಾಗಿಸಿದ್ದಾರೆ.

'ಭಾsವಾs ಇದ್ದಾಂಗ ದೇವಾ
ಹೇಳಿದ್ರು ಹಿರಿಯರು
ಅಲ್ಲೆ । ಸುತ್ತಾಡತಾವ ನಮ್ಮ ಖ್ಯಾಲಾ
ಎಣಿಸಿದರ ಏನೋ ಕನಸ
ಕಂಡ್ಹಾಂಗ ಅನಸ್ತದ
ಕಣ್ಣು ಆಗ್ತಾವ ಹ್ಯಾಂಗೋ ತೇಲುಮೇಲಾ'

ಆಧ್ಯಾತ್ಮಿಕ ಭಾವ, ಕವನ ಬೆಳೆದಂತೆ ಕವಿಗಾದ ಒಟ್ಟು ಅನುಭಾವದ ಭಾವಪ್ರಪಂಚವಾಗಿ 'ಎಣಿಸಿದರ ಏನೋ ಕನಸ ಕಂಡ್ಹಾಂಗ ಅನಸ್ತದ ಕಣ್ಣು ಆಗ್ತಾವ ಹ್ಯಾಂಗೋ ತೇಲುಮೇಲಾ' ಎಂಬಲ್ಲಿ ದಟ್ಟವಾಗಿದೆ.

ಚಿಕ್ಕಂದಿನ ನೆನಪು ಮನದ ಒಳಕೋಣೆಯಲ್ಲಿ (ಒರಿಯೊಳಗ) ಅನುಭಾವವಾಗಿ, ಎಣ್ಣೆದೀಪ ಮಿಣುಗಿದಂತೆ ಶಾಂತವಾಗಿ ಉರಿದ ಬೆಳಕಾಗಿದೆ. ಅಲ್ಲಿ ಬೆಳಕಿರುವುದರಿಂದ ಆ ಕಾಲ ಎಲ್ಲಿಯೂ ಹೋಗಿಲ್ಲ ಅದು ಇಲ್ಲೆ ಇದೆ ಎಂದು ಪ್ರತ್ಯಕ್ಷ ನೋಡಿದ್ದ, ಕಂಡ ನೆನಪು ಆಧ್ಯಾತ್ಮಿಕ ನಿರೂಪಣೆಯಾಗಿ ಅನುಭಾವಕಾವ್ಯವಾಗಿ ಹರಿದಿದೆ. ಆ ಆನಂದಭಾವದಲ್ಲಿ ಕವಿ ಹಾಡಿದ್ದಾರೆ :

'ನೆನಪಿನ ಓರಿಯೊಳಗ
ಮಿಣುಕ್ತಾವ ಎಣ್ಣೀದೀಪ
ಎಲ್ಲೆ । ಹೋದಾವೋ ಗೆಳೆಯಾ ಆ ಕಾಲಾ?
ಬಂತಣ್ಣ ಸಣ್ಣ ಸೋಮವಾರಾ.
ಕಾಣಬೇಕಣ್ಣ ಸೋಮೇಶ್ವರಾ'[೬]

## ಹಾಲಗೇರಿಯ ದತ್ತಾತ್ರೇಯ

ಬೇಂದ್ರೆಯವರ ಬಾಲ್ಯದಲ್ಲಿ ಹಾಲು ಕೆರೆಯು ಹಾಲಗೇರಿ ಆಗಿ, ಜನರ ಬಾಯಲ್ಲಿ ನಲಿದಾಡುತ್ತಿತ್ತು. ಆ ಹಾಲಗೇರಿ ಇಂದು ಸಂತೆಯ ಮಾಳವಾಗಿದೆ. ಹಾಲಗೇರಿಯ ದತ್ತಾತ್ರೇಯ ದೇವಸ್ಥಾನ ಇಂದಿಗೂ ಧಾರವಾಡದ ಜನಕ್ಕೆ ಧಾರ್ಮಿಕ ಪುಣ್ಯಸ್ಥಳವಾಗಿದೆ. ಆ ಹಾಲಗೇರಿಯ ದತ್ತನನ್ನೇ ಪ್ರದಕ್ಷಿಣೆ ಹಾಕುತ್ತಾ, ಅವರ ಮನಸ್ಸು ಭಾವವನ್ನೇ ಮರು ಸಂಭವ ಅಂದರೆ ಪುನರ್ಜನ್ಮದಂತೆ ಅನುಭವಿಸುತ್ತಿತ್ತು. ಬಾಲ್ಯದ ಹಾಲಗೇರಿ, ದತ್ತಾತ್ರೇಯ, ತಾಯಿ ಅಂಬವ್ವ, ಧಾರವಾಡದ ಪರಿಸರ ಮೈದುಂಬಿಕೊಂಡ ಕವನ 'ತುಂಬಿತ್ತು ಹಾಲಗೇರಿ'. ಅದು ಅವರ ಧಾರ್ಮಿಕ ಭಾವಕೋಶದ ಕೇಂದ್ರಸ್ಥಾನ. ಆ ಕವನದ 'ಭಾವ'ದಲ್ಲಿ ೬ನೆ ನುಡಿಯ ವಿವರ ನೀಡುತ್ತ ವಾಮನ ಬೇಂದ್ರೆಯವರು 'ಬೇಂದ್ರೆ ಚಿಕ್ಕವರಿದ್ದಾಗ ಶ್ರಾವಣದ ಒಂದು ಸಂಜೆ ತಾಯಿಯೊಂದಿಗೆ ಹಾಲಗೇರಿ ಕೆರೆಗೆ ಹೋದಾಗ ಕಾಲು ಜಾರಿ ನೀರೊಳಗೆ ಮುಳುಗಿ ಹೋಗುತ್ತಿದ್ದರು. ತಾಯಿ ಬಟ್ಟೆಗಳನ್ನು ಒಗೆದು ಬೇಂದ್ರೆಯವರನ್ನು ಹೊರತೆಗೆದು ಬದುಕಿಸಿದರು. ಅಂದೇ ಬೇಂದ್ರೆಯವರಲ್ಲಿ ವರಕವಿತ್ವ ಮತ್ತು ದತ್ತಶಕ್ತಿ ಪ್ರವೇಶವಾದುದು ಎಂಬ ಅನುಭವ ಅವರದಾಗಿತ್ತು'[೭] ಎಂದು ತಿಳಿಸಿದ್ದಾರೆ. ಆ ಕವನ ಬೇಂದ್ರೆಯವರ ಬಾಲ್ಯದ ಬೆಳಕಿಂಡಿಯಾಗಿದೆ.

'ಮುಟಗೀಯೊಳಗ ಹಿಂಡಿದ ಅರಿವಿ
ತಾಯಿಗಿತ್ತು ಗಾಳೀ ಪರಿವಿ
ಹಿಗ್ಗು ಹರವಿ ಹರವಿ
ತೋರೀತಿತ್ತು ಬಿನ್ನಾಣದ ಬೆಡಗು
ತೋರೋ ಕಡಿಗೆ ತೋರು
ಉಳಿದ ಕಡಿಗೆ ಅಡಗು.
ದೇವನ ಮುಂದ ದೇಪರಾಜಾ ದೇಮದ ಹಿಂದ ವಿದೇಹ ತೇಜಾ

---

೬ ದ.ರಾ. ಬೇಂದ್ರೆ, ಮುಗಿಲ ಮಲ್ಲಿಗೆ, ಪ್ರತಿಭಾ ಗ್ರಂಥಮಾಲೆ, ಧಾರವಾಡ ೧೯೬೧ ಪು-೭೩

೭ ದ.ರಾ. ಬೇಂದ್ರೆ, ಅಂಬಿಕಾತನಯದತ್ತರ ಸಮಗ್ರ ಕಾವ್ಯ, ದರ್ಶನ ಸಂಪುಟ ೨, ವಾಮನ ಬೇಂದ್ರೆ (ಸಂ), ವರಕವಿ ಡಾ. ದ.ರಾ. ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ ೨೦೦೩, ಪು-೪೪೪

ಅಭಿನಯಕ್ಕ ಅನುಭಾವಾ
ಪಾತ್ರ ಶೀಲಕ್ಕ ಸ್ವಭಾವಾ
ರಸಾ ಇದ್ದರ ಭಾವಾ
ಇರದಿದ್ದರ ಅಭಾವಾ'[೮]

ಬೇಂದ್ರೆಯವರು ಆಧ್ಯಾತ್ಮಿಕ ಚಿಂತನೆಯಲ್ಲಿ ವಿಹರಿಸುತ್ತಲೇ ತಾವು ಬಾಲ್ಯದಲ್ಲಿ ಹುಣಿಸೆಮರ ಏರಿ ಮರಕೋತಿ ಆಟ ಆಡಿದ್ದನ್ನು, ಆ ಚಂಚಲ ಮನಸ್ಸನ್ನು ನೆನೆಯುತ್ತಾ ಬಾಲ್ಯದ ದಿನಗಳ ಆನಂದವನ್ನು ಅಭಿವ್ಯಕ್ತಿಸಿದ್ದಾರೆ.

'ಹಾಲಗೇರಿಯ ದತ್ತ, ಅವನನ್ನೆ ಸುತ್ತುತ್ತ
ಚಿತ್ತ ಧ್ಯಾನಿಸುತ್ತಿತ್ತು ಮರು ಸಂಭವ
ಮತ್ತೆ ಕಾಮನಕಟ್ಟಿ ! ಹುಣಿಸೆಮರಗಳನೇರಿ
ಮಂಗಮನಸಾಡಿತ್ತು ಹೋದ ಭವ'

**ಬಂದೆ ತವರು ಮನೆಗೆ**

ಬೇಂದ್ರೆಯವರು ಧಾರವಾಡವನ್ನು 'ತವರುಮನೆ' ಎಂದು ಕರೆದಿದ್ದಾರೆ. 'ತವರು ಮನೆ' ಎಂದು ಬಳಸಿರುವುದರಿಂದಲೇ ಪ್ರೀತಿಯ ಆಧಿಕ್ಯವನ್ನು ಅನ್ಯಾದೃಶವಾಗಿ ದಾಖಲಿಸಿದ್ದಾರೆ. 'ತೌರೂರ ದಾರಿಯಲಿ ಕಲ್ಲಿಲ್ಲ ಮುಳ್ಳಿಲ್ಲ' ಜನಪದ ಹಾಡು ತೌರು ಮನೆಯ ಸಡಗರದಲ್ಲಿ ಕಲ್ಲು ಮುಳ್ಳು ಹೆಚ್ಚಿನಿಸುವುದಿಲ್ಲ ; ತಾಯಿಯ ಪ್ರೀತಿಯಲ್ಲಿ ಅದು ಲೆಕ್ಕಕ್ಕೆ ಬಾರದು ಎಂದಿದೆ. 'ಎಣ್ಣೆ ಮೇಲಿನ ನುಣುಪು ತಪ್ಪು. ಹೆಣ್ಣಿಗೆ ತೌರು ಮನೆ ಆಸೆ ತಪ್ಪು', ಎಂಬಲ್ಲಿ ತಪ್ಪು ಎಂದರೆ ತಪ್ಪಿದರೆ ಎಂಬ ಅರ್ಥವಿದೆ. ಕೊನೆಗೊಳಿಸಲಾಗದ ಜಿಡ್ಡು ತಪ್ಪಲ್ಲ. ಹಾಗೆಯೆ ತೌರಿನ ಮೇಲಿನ ಆಸೆ ಹೆಣ್ಣಿಗೆ ತಪ್ಪಲ್ಲ. ಇದು ಸ್ತ್ರೀಭಾವದ ಜಾನಪದ ಸಂಸ್ಕೃತಿ. ಈ ಹಿನ್ನೆಲೆ 'ತವರು ಮನೆ'ಗೆ ಇರುವುದರಿಂದ ಅವರು ಧಾರವಾಡವನ್ನು ಕುರಿತು ಹೆಣ್ಣಿನ ಮನದಿಂದ ನುಡಿದಿದ್ದಾರೆ :

'ಬಂದೆ ತವರು ಮನೆಗೆ, ಬಡತನ ಎಂದೆನೇ?
ಶಾಲಾ ಮಾಸ್ತರನಾಗಿ ನಾ ಧುಮುಕಿದೆ
ಹೊಸಕವನ ಹೇಳುತ್ತ, ಹೊಸಧಾಟಿ ಹಾಡುತ್ತ
ಕಾವ್ಯ ಪ್ರಭಾತದ ಹದಿ ಹಾಕಿದೆ'

'ಬಡತನ ಎಂದೆನೆ' ಪದದ ಹಿಂದಿನ ಮನಸ್ಸಿನ ಭಾವಲಹರಿಯನ್ನು ನೋಡಿದರೆ ಅಚ್ಚರಿಯಾಗುತ್ತದೆ. ತವರು ಮನೆ ಎಂದಾಗ ಪ್ರೀತಿ ಕೆನೆಗಟ್ಟಿರಬೇಕಾದರೆ ಆ ಮನೆಯ ಬಡತನದ ಕೊರತೆ ಕಾಣಿಸುವುದಿಲ್ಲ. ಬೇಂದ್ರೆಯವರ ಬಾಲ್ಯಕಾಲದಲ್ಲಿ ಕವನವನ್ನು ವಾಚನ

೮ ಅದೇ, ಪು-೪೪೨

ಮಾಡುತ್ತಿರಲಿಲ್ಲ. ಸಾಭಿನಯವಾಗಿ ಹಾಡುತ್ತಿದ್ದರು. ಅಂತಹ ಕವನ ಕೇಳುತ್ತ ತವರು ನೆಲ ಧಾರವಾಡಕ್ಕೆ ಬಂದಾಗ ತನಗೆ ಬಡತನದ ಬವಣೆ ಕಾಡಲಿಲ್ಲ ; ಉನ್ನತ ಹುದ್ದೆಗೆ ಹೋಗದೆ ಶಾಲಾ ಮಾಸ್ತರನಾದೆ ; ಆಗ ತಾನೇ ಮೂಡಿದ್ದ ಕನ್ನಡ ನವೋದಯ ಸಾಹಿತ್ಯಕ್ಕೆ ತಳಪಾಯ ಹಾಕಿದೆ- ಎಂದು ಕಾವ್ಯಸೃಷ್ಟಿಲೀಲೆಗೆ ತೆರೆದುಕೊಂಡು ಮನಸ್ಸನ್ನು, ಭಾವದಾನಂದವನ್ನು ಸಾರಿದ್ದಾರೆ.

ಬೇಂದ್ರೆಯವರಿಗೆ ಧಾರವಾಡದ ತಾಯಿ ದುರ್ಗಾದೇವಿಯ ಬಗ್ಗೆ ಅಪಾರವಾದ ಭಕ್ತಿ. ಅವರಿಗೆ ಆಕೆ ಧಾರವಾಡದ ಪೋಷಕಳು, ರಕ್ಷಕಳು. ಧಾರವಾಡದ ತಾಯಿಯನ್ನು ಕುರಿತು ಬರೆದ ಹಾಡಾಗಲಿ, 'ನಾವು ಬರ್ತೇವಿನ್ನ ನೆನಪಿರಲಿ ತಾಯಿ। ನಂ ನಮಸ್ಕಾರ ನಿಮಗs ಕಾಯ್ದಿರಿ ಕೂಸಿನ್ಹಾಂಗ ನಮಗ ॥' ಎಂಬ ಲಾವಣಿಯಾಗಲಿ ಮಾತೃಶಕ್ತಿಯನ್ನೆ ಕುರಿತದ್ದು. ಬೇಂದ್ರೆಯವರು ಆ ತಾಯಿ ದುರ್ಗೆಗೆ ಪೂರ್ಣ ಶರಣುಹೋದ ಭಾವವನ್ನು

'ಧಾರವಾಡದ ತಾಯೆ ನನಗಾ। ಧಾರ ನೀನಲ್ಲದಿಲ್ಲ
ಭಾರ ನಿನ್ನ ಮೇಲೆ ಇರಲು । ಯಾರಿಗಾರು ಎಂಬರೇನೆ ?'[೯]

ಎಂದು ವ್ಯಕ್ತಪಡಿಸಿದ್ದಾರೆ. ದುರ್ಗಾಮಾತೆಯ ದರ್ಶನ ಭಕ್ತರಿಗಾಗುವುದು ಅವಳ ಕಣ್ಣಿಂದ. ಅದೇ ಅವರನ್ನು ಕಾಪಾಡುವ ಬೆಳಕು. ಆದುದರಿಂದ ಕವಿ :

'ನಿನ್ನ ಕಣ್ಣ - ಕಡಗೋಲಿಂದ
ನನ್ನ ಹೃದಯ ಕಡಿಯೇ ತಾಯಿ
ಎನ್ನ ಹೃದಯ ಕಡೀ........'

ಎಂದು ಪ್ರಾರ್ಥಿಸಿದ್ದಾರೆ. ಕಾಮ ಈ ಜೀವನದಲ್ಲಿರುವ ಅರಿಷಡ್ವರ್ಗದಲ್ಲಿ ಒಂದು. ಅದನ್ನು ಗೆಲ್ಲಬೇಕು ಎಂದು ಪ್ರಯತ್ನಿಸುವುದರಲ್ಲಿಯೇ ಜೀವನದ ಸಾರ್ಥಕತೆ ಇದೆ. ಆದ ಕಾರಣ ಅವರು ಧಾರವಾಡದ ತಾಯಿಯನ್ನು :

'ಕಾಮ ಮೆತ್ತಿ ಬತ್ತಿದ ಮನಕೆ ನೇಮನಿತ್ಯ ಬಂತೆಲ್ಲಿಂದ
ಪ್ರೇಮವಾಹಿನಿ ನೀ ಹರಿಯದಲೆ ತಾಮಸ ತಾ ಹರಿದೀತೇನೆ ?'

ಎಂದು ಪ್ರಶ್ನಿಸಿ ಪ್ರೇಮವೇ ಬೆಳಕು, ಪ್ರೇಮವೇ ತಾಯಿ, ಅದು ತನ್ನ ಮೇಲೆ ಹರಿದಾಗ ಕಾಮ, ಕ್ರೋಧ, ಮೋಹ, ಲೋಭ, ಮದ, ಮಾತ್ಸರ್ಯಗಳ ಕತ್ತಲು ದೂರವಾಗುವುದು ಎಂದು ಆ ತಾಯಿಯನ್ನು ಪ್ರಾರ್ಥಿಸಿದ್ದಾರೆ. ಇದು ಸುಲಭದಲ್ಲಿ ಆಗುವುದಿಲ್ಲ. ಹೃದಯ ಪರಿವರ್ತನೆಯಿಂದ ಆಗಬೇಕು. ತಾಯಿ ತನ್ನ ಕಣ್ಣ ಕಡೆಗೋಲಿನಿಂದ ಹೃದಯ ಕಡೆದಾಗ

---

೯ ದ.ರಾ. ಬೇಂದ್ರೆ, ಸಖೀಗೀತ, ಶ್ರೀಮಾತಾ ಪ್ರಕಾಶನ, ಧಾರವಾಡ, ೧೯೯೦, ಪು-೯೭.

ಬೆಣ್ಣೆ ಬರುತ್ತದೆ. ಅದರ ಸವಿಯನ್ನು ತನಗೆ ತಾಯಿ ಉಣಿಸುತ್ತಾಳೆ ಎಂದು ಭಾವಿಸಿ, ಅವಳಿಂದ ಸಾತ್ವಿಕ ಬಲ ಸಿಗುತ್ತದೆ ಎಂದು ತಿಳಿದು ಪ್ರಾರ್ಥಿಸಿದ್ದಾರೆ.

'ಎನ್ನ ಹೃದಯ ಕಡೀ.....
ಬೆಣ್ಣೆ ಮೇಲೆ ತೇಲಿಸಿ ತಂದು
ನನ್ನ ಬಾಯ್ಗೆ ಹಿಡೀ
ನೀನೇ ಬಾಯ್ಗೆ ಹಿಡೀಯೆ ತಾಯಿ'

ಬೇಂದ್ರೆಯವರ ಕಾವ್ಯ ರೂಪುಗೊಂಡು ನಾಡಿನ ತುಂಬ ಕಂಪು ಹರಿಸಿದ್ದು ಧಾರವಾಡದ ಬದುಕು, ಭಾಷೆ, ಸಂಸ್ಕೃತಿ ಪರಿಸರದ ಕಾವಿನಲ್ಲಿ. ಅವರಿಗೆ 'ಶಾಂತಿ ರಸವೇ ಪ್ರೀತಿಯಿಂದ ಮೈದೋರಿದ್ದು', 'ಎದೆಯಲಿದ್ದ ತನನ ತಾನ ಮೌನವೆತ್ತ ಗಾನವಾಗಿ' ಶ್ರಾವಣ ಪ್ರತಿಭೆಯಿಂದ ಗೋಚರವಾದದ್ದು, ಅವರು 'ಏಕೆ ಬಂದೆ ? ಏನು ತಂದೆ ? ಹೇಳೋ ಹೇಳು ಶ್ರಾವಣ ನೀನು ಬಂದಕಾರಣ' ಎಂದು ವರುಣನನ್ನು ಪ್ರಶ್ನಿಸಿದ್ದು, 'ಗರುಡನ ಹಕ್ಕಿಯು ಗರಿಗೆದರಿ ಹಾರಿತು ಬಾನಾಗ ಕರಿದಿತು ಬರಿಹಾಲನೆ' ಎಂದು ಕವಿಯಾಗಿ ಹಾಡಿದ್ದು, 'ಚಿತ್ತ ಪಾಕದೊಳಿಳಿದ ರಸರುಚಿ ಅಮೃತವಾಗಿದೆ ಬಾಳಿಗೆ' ಎಂದು ಸಾವು, ನೋವನ್ನು ನುಂಗಿ ಅದನ್ನು ಅಮೃತವಾಗಿಸಿಕೊಂಡು 'ಪಟ್ಟ ಪಾಡೆಲ್ಲವು ಹುಟ್ಟು ಹಾಡಾಗುತ ಹೊಸದಾಗಿ ರಸವಾಗಿ ಹರಿಯುತಿವೆ' ಎಂದು ಕನ್ನಡ ಕಾವ್ಯವನ್ನು ಹೊಸದಾಗಿ, ನವೋನವ ಛಂದಸ್ಸಿನಲ್ಲಿ ರಚಿಸಿ ಹಾಡಿದ್ದು ಧಾರವಾಡದಲ್ಲಿ. ಅವರಿಗೆ ಧಾರವಾಡ 'ಮಾವು ಮಲ್ಲಿಗೆಗಳ ಬೀಡು'. ಧಾರವಾಡದ ಭಾಷೆಯನ್ನು ಕುರಿತು ಬೇಂದ್ರೆಯವರು 'ಧಾರವಾಡ ಕನ್ನಡಕ್ಕೆ ಕೊಂಕಣಿ, ಮರಾಠಿಗಳ ಸಂಪರ್ಕವಿರುವಂತೆ ಹವ್ಯಕರ ನೆರೆಯೂ ಇದೆ. ಇಲ್ಲಿಯ ಭಾಷೆ ರಾಜಭಾಷೆಯ ಮರ್ಯಾದೆಯದಲ್ಲ. ಜನಭಾಷೆಯ ಬೀಸುತನದ್ದು. ಬಾಯಿ ಬಿಗಿಹಿಡಿದು ಮಾತನಾಡಿ ಅದಕ್ಕೆ ಗೊತ್ತಿಲ್ಲ. ಪೇಶ್ವಾ ಮತ್ತು ಹೈದರ-ಟೀಪು ಸ್ತುಲಾನರ ಇಬ್ಬದಿಯ ದಾಳಿಗಳ ಹೋರಾಟದಲ್ಲಿ ಬಂದ ಬಂಡುಗಾರಿಕೆಯು ಪುಂಡತನ ಅದರ ಮಾತಿನ ಮಲಕಿನಲ್ಲಿ, ಒರಟು ಹಾರಾಟ-ಏರಾಟಗಳಲ್ಲಿ ಕಂಡು ಬರುವದು. ಪುಲಿಗೆರೆಯ ಅಂದರೆ ಬನವಾಸಿ-ಲಕ್ಷೇಶ್ವರ ಪ್ರಾಂತದ ನುಡಿಯು ಧಾರವಾಡದ ಬುನಾದಿಗಿದೆ. ಮುಳಗುಂದದ ನಯಸೇನ, ಕೋಳಿವಾಡದ ಕುಮಾರವ್ಯಾಸ, ಕರ್ಜಗಿಯ ದಾಸರು, ಸರ್ವಜ್ಞ, ಶರೀಫಸಾಹೇಬ ಇವರೇ ಮೊದಲಾದವರು ಇದನ್ನು ಬೆಳೆಸಿಕೊಂಡು ಬಂದರು. ಗಳಗನಾಥ, ಆಲೂರ, ಮದವೀಡು ಕೃಷ್ಣರಾಯರು, ತೂರಮರಿ, ಹೊನ್ನಾಪುರಮಠ, ಶಾಂತಕವಿ, ನಾರಾಯಣರಾವ ಹುಯಿಲಗೋಳ, ಗರೂಡ ಸದಾಶಿವರಾವ ಈ ಕವಿಗಳು, ವಾಗ್ಮಿಗಳು, ನಾಟಕಕಾರರು ಅದರ ಕೆಚ್ಚು ಉಳಿಸಿದ್ದಾರೆ'[೯] ಎಂದು ಹೆಮ್ಮೆಯಿಂದ ಹೇಳಿದ್ದಾರೆ. ಧಾರವಾಡದ ನುಡಿಯನ್ನು ಬಾನುಲಿಯಲ್ಲಿ ಕೇಳಿದರೂ ಕೋಕಿಲದ ನುಡಿಯಂತೆ ಮಧುರ ಎಂದಿದ್ದಾರೆ.

---

೯. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು-೯೩೭, ೯೩೮

'ಸೂತ್ರ ಸರಿಯಾಗಿರಲು ಪಾತ್ರವಾಡುವದು ಪಟ
ನೇತ್ರದಲ್ಲರಳುವದು ನವಿಲು ಗರಿಯು
ಧಾರವಾಡದ ಮಾತು ಬಾನುಲಿಯಲಾಡಿದರೆ
ಎದೆಗೂಡ ಕುಕಿಲಗದು ಸುಗ್ಗಿ ಕರೆಯು'

ಅವರಿಗೆ ಧಾರವಾಡದ ಮಣ್ಣು, ಹುಲ್ಲು, ಕಲ್ಲು, ಹುಡಿ ಎಲ್ಲವೂ ಪವಿತ್ರ. ಅವರು ಧಾರವಾಡದಲ್ಲಿ ಬಾಲ್ಯದಲ್ಲಿ ಕಂಡ ಚಿಗರಿಯನ್ನು ಕುರಿತು ಉಲ್ಲಾಸಮನದಿಂದ ಹಾಡಿದ್ದಾರೆ :

'ಧಾರವಾಡದ ಶಿಲೆಯು ನಮ್ಮ ಶಾಲಿಗ್ರಾಮ
ಮಾವು ಮಲ್ಲಿಗೆ ಚಿಗುರು ನಮ್ಮ ತುಳಸಿ
ಮುತ್ತುರುಳಬಹುದೆಂದು ದಿಕ್‌ನಾಗ ಜಡೆಯುವರೆ?
ಇಲ್ಲಿ ನಾಗರಖಂಡ ಸುತ್ತ ಬಳಸಿ'.

'ಗುಪ್ತಗಾಮಿನಿ ನಮ್ಮ ಶಾಲ್ಮಲೆಯು ಸೆಲೆ ಆಳ
ಸಂಜೆ-ನಂಜನು ತೊಳೆಯೆ ಧುಮುಕುತಿಹಳು
ಏಕಾಂಗಿ, ನಿಃಸಂಗಿ, ಗಂಗಾವಳಿಯ ಭಂಗಿ
ಕನ್ನಡವ ಒಪ್ಪಿಡಿಯಲಮುಕುತಿಹಳು'.[೧೦]

ಬೇಂದ್ರೆಯವರಿಗೆ ಅವರು ಹುಟ್ಟಿ ಬೆಳೆದ ನೆಲ ಧಾರವಾಡ ಪವಿತ್ರವಾಗಿದೆ. ಅವರು ಬೆಳೆದು ದೊಡ್ಡವರಾದ ರೀತಿ ಆಟದಂತೆ ನಡೆದುಹೋಗಿದೆ. ಆದ ಕಾರಣ ಅದು 'ಕಳೆದ ಜನ್ಮದ್ಹಾಂಗ' ಆಗಿದೆ. ಅವರಿಗೆ ಧಾರವಾಡದ ಭೂಮಿ, ಧಾರವಾಡದ ದುರ್ಗೆ ತಾಯಿಯಾದ ಹಾಗೆ ಆ ಸಮುದಾಯದಲ್ಲಿ ವಾತ್ಸಲ್ಯದ ಸವಿಯುಣಿಸಿದ ಎಲ್ಲ ಹೆಣ್ಣುಗಳೂ ಪವಿತ್ರವಾಗಿದ್ದಾರೆ. ಆದ ಕಾರಣ ಅವರು ಆ ಸ್ತ್ರೀಯರಲ್ಲಿ ತಾಯಿಯನ್ನು ಕಂಡಿದ್ದಾರೆ. ತಾಯಿಯೆಂದರೆ ಬೇಂದ್ರೆಯವರಿಗೆ ಸೌಂದರ್ಯ, ಜ್ಞಾನ, ಸಾಮರಸ್ಯ ಹಾಗೂ ಶಕ್ತಿಯ ಸಂಕೇತ.

'ಅಕ್ಕ-ತಂಗಿ-ಮಗಳು-ತಾಯಿ-ಹಡೆದ ತಾಯಿ...
ಕನ್ನಿ-ಗೆಳತಿ-ಮಡದಿ-ದಾಯಿ-ಸಾಕುದಾಯಿ
ಜೋಡೆ-ಸೂಳೆ ಮತ್ತೆ ಮಾಯಿ-ವಿಧೀ ಮಾಯಿ'

ಇದು ಬೇಂದ್ರೆ ಕಂಡ ಸ್ತ್ರೀಯ ವಿರಾಟ್ ಸ್ವರೂಪದ ತಾಯಿ ಚೇತನ. ಅವರು ತಾಯಿಯನ್ನು ನೆನೆದಾಗ ತನ್ನ ಅಹಂಕಾರವನ್ನು ತನ್ನ ಕಾಮವನ್ನು ನೆನೆಯುತ್ತಾ ತನ್ನ ಮಡ್ಡ ಅಂದರೆ ಅಹಂನ ಕೊಬ್ಬನ್ನು ಇಳಿಸುವವಳು ತಾಯಿ, ತನ್ನನ್ನು ಮಾನವಂತನನ್ನಾಗಿ ಮಾಡುವವಳು ತಾಯಿ ಎಂದಿದ್ದಾರೆ. ಅದು ಅವರು ತಾಯಿಗೆ ಕಾಯಾ, ವಾಚಾ, ಮನಸಾ ಅರ್ಪಿಸಿಕೊಂಡ ಬಗೆಯಾಗಿದೆ.

---

೧೦. ದ.ರಾ.ಬೇಂದ್ರೆ, ಅರಳು ಮರಳು, ಶ್ರೀಮಾತಾ ಪ್ರಕಾಶನ, ಧಾರವಾಡ ೧೯೮೫, ಪು-೪೨೭

‘ನೂರಾರು ವೇಷ ಕಳಿಸಿದಿರಿ
ಮಡ್ಡ ಇಳಿಸಿದಿರಿ
ಮಾನ ಬೆಳೆಸಿದಿರಿ
ಯಾಕೋ ಕರುಣ ಬಂತು ತಮಗs
ನಾ ಶರಣು ಬರಲಿಲ್ಲ ಸುಮಗs’

ಎಂದು ಸತ್ಯಶೋಧನಾ ಮನದಿಂದ ಧಾರವಾಡದ ತಾಯಿಗೆ ಶರಣು ಹೋಗಿದ್ದಾರೆ. ಈ ಜಗತ್ತಿನಲ್ಲಿ ಮಣ್ಣಿನ ಗೊಂಬೆಯಾದ ತಾನು ಏನೂ ಅಲ್ಲ. ತನ್ನನ್ನು ಹೆತ್ತು ಹೊತ್ತು ಪೊರೆವವಳು ಈ ಪ್ರಕೃತಿ ಮಾತೆ, ನೆಲದಾಯಿ. ಅವಳೇ ಧಾರವಾಡದ ತಾಯಿ. ಅವಳ ರಕ್ಷಣೆ ಒಂದಿದ್ದರೆ ತನಗೆ ಸ್ವರ್ಗ-ನರಕ ಯಾವುದೂ ಲೆಕ್ಕಕ್ಕೆ ಬರುವುದಿಲ್ಲ ಎಂದು ಸಮರ್ಪಣ ಭಾವದಿಂದ, ಆರಾಧನಾ ಭಾವನೆಯಿಂದ ಹಾಡಿದ್ದಾರೆ.

‘ಮಾಡಿತೇನು ಮಣ್ಣಿನs ಗೊಂಬಿ ?
ನಿಮ್ಮ ಹೆಸರ ನಂಬಿ
ಹೊತ್ತುಕೊಂಡು ಕಂಬಿ-ಕುಣಿತಿರಲಿ
ಸ್ವರ್ಗ-ನರಕ ಯಾವುದೂ ಇರಲಿ !’ (ಹಾಡು-ಪಾಡು)

ಬೇಂದ್ರೆಯವರನ್ನು ಹತ್ತಿರದಿಂದ ಕಂಡಿದ್ದ ಚಿ.ಗ. ಕುಲಕರ್ಣಿಯವರು ಅವರನ್ನು ಕುರಿತು ಹೀಗೆ ನುಡಿದಿದ್ದಾರೆ: ‘ಬೇಂದ್ರೆಯವರ ಮಾತು ಎಂದಿಗೂ ಮೋಹಕ. ನಡೆ ಆಕರ್ಷಕ, ಎಂತಲೇ ನಾನು ಹೆಚ್ಚೆಚ್ಚು ಅವರೊಡನೆ ಬೆರೆಯಹತ್ತಿದೆ. ಬೇಸಿಗೆಯ ಬಿಡುವಿನಲ್ಲಿ ಕಾಲೇಜದಿಂದ ಮನೆಗೆ ಬಂದ ಮೇಲೆ, ಯಾವ ದಿನಗಳನ್ನು ಇತರರು ಮೋಜಿನಲ್ಲಿ, ಕುಶಾಲಿನಲ್ಲಿ ಕಳೆವರೊ ಅಂಥ ದಿನಗಳನ್ನು ಇವರು ಮಹಾಭಾರತ, ರಾಮಾಯಣದಂಥ ಪ್ರಚಂಡ ಗ್ರಂಥಗಳನ್ನು ತಲ್ಲೀನತೆಯಿಂದ ಓದುವದರಲ್ಲುಪಯೋಗಿಸುವರು ; ಅಷ್ಟೇ ಅಲ್ಲ, ಅವರ ತಾಯಿಗೆ ಅದನ್ನು ಅರ್ಥಮಾಡಿ ಹೇಳುವರು. ಇದರಲ್ಲಿಯೇ ಅವರ ಅಸಾಮಾನ್ಯತೆ ಕಂಡು ಬರುತ್ತಿತ್ತು.

‘ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಅವರು ಶಿಕ್ಷಕರೆಂದು ಸೇರಿದ ತುಸು ದಿನಗಳಲ್ಲಿಯೇ ವಿದ್ಯಾರ್ಥಿಗಳಿಗೆ ಪ್ರೀತಿಯವರಾದರು. ಫುಟ್‌ಬಾಲ್ ಅವರ ಪ್ರೀತಿಯ ಆಟ. ಶಿಕ್ಷಕನೆಂಬ ಅಭಿಮಾನಕ್ಕೊಳಪಡದೆ ಅವರು ವಿದ್ಯಾರ್ಥಿಗಳ ಜೊತೆಯಲ್ಲಿ ಆಡುವರು, ಹರಟೆ ಹೊಡೆಯುವರು ..... ಅವರು ತತ್ವಜ್ಞಾನದ ಮಾರ್ಗವನ್ನಾಶ್ರಯಿಸಿರುವದು ಕೇವಲ ಶಾಬ್ದಿಕವಾಗಿರದೆ ಅನುಭವಗಮ್ಯವಾಗಿದ್ದುದು ಅವರ ಆಚರಣೆಯಿಂದಲೇ ಗೊತ್ತಾಗುತ್ತದೆ.’[೧೧] ೧ನೇ ವರ್ಗದಿಂದ ಬಿ.ಎ. ವರೆಗೆ ಬೇಂದ್ರೆಯವರ ಜೊತೆಯಲ್ಲಿಯೇ ಶಾಲಾ ಕಾಲೇಜುಗಳಲ್ಲಿ

---

೧೧ ಚಿ.ಗ. ಕುಲಕರ್ಣಿ, ಅಪೇಕ್ಷೆ, ಚುಳಕಿ ಗೋವಿಂದರಾಯರು(ಸಂ.) ಕವಿವರ ಬೇಂದ್ರೆ, ೧೯೪೬, ಪು. ೭೮, ೭೯, ೮೧

ಅಭ್ಯಾಸ ಮಾಡಿದ ಗೆಳೆಯ ಹಾಗೂ ನವೋದಯದ ಕವಿ ಶ್ರೀಧರ ಖಾನೋಳಕರ ಅವರು ಬೇಂದ್ರೆಯವರಲ್ಲಿದ್ದ ಉತ್ಕಟ ಕರ್ನಾಟಕ ಸೇವಾ ಮನೋಭಾವ, ಶಿಕ್ಷಕನಾಗಿ ಕನ್ನಡ ಮಕ್ಕಳನ್ನು ರೂಪಿಸಬೇಕೆಂಬ ಅದಮ್ಯ ಬಯಕೆ ಮತ್ತು ಕನ್ನಡ ಕಾಳಜಿಯನ್ನು ವರ್ಣಿಸಿರುವುದು ಮನನೀಯವಾಗಿದೆ. 'ಶ್ರೀ ಬೇಂದ್ರೆಯವರು ಬಿ.ಎ. ದಲ್ಲಿರುವಾಗಲೇ ಅವರ ನಿಶ್ಚಯವಾಗಿತ್ತು. ಕರ್ನಾಟಕದ ಸೇವೆಗಾಗಿ ಏನಾದರೂ ಮಾಡಬೇಕು. ತನಗೆ ಯಾವದು ಸಾಧ್ಯ ? ಜ್ಞಾನದಾನ-ಶಿಕ್ಷಣ. ಆದ್ದರಿಂದ ಬಿ.ಎ. ಆದ ಕೂಡಲೇ ಅವರು ಧಾರವಾಡಕ್ಕೆ ಹೋಗಿ ಮಾಸ್ತರರಾದರು. ಆಗಿನ ಕಾಲದಲ್ಲಿ ಅಂದರೆ ೧೯೧೭-೧೮ರಲ್ಲಿ ಸರಕಾರೀ ನೌಕರಿ ಹಿಡಿದಿದ್ದರೆ ಅವರಿಗೆ ಈಗ ಐನೂರರಷ್ಟು ಸಂಬಳವು ದೊರೆಯುವಷ್ಟು ಸೌಕರ್ಯವು ಇತ್ತು. ಅವರಿಗೆ ಒಂದೇ ಒಂದು ಧ್ಯೇಯ ಕರ್ನಾಟಕದ ಸಂಸ್ಕೃತಿಯ ಉನ್ನತಿ. ಆ ಧ್ಯೇಯವನ್ನು ಸಾಧಿಸುವುದು ಇನ್ನೆಲ್ಲಿಯೂ ಇಲ್ಲ. ಕರ್ನಾಟಕದಲ್ಲಿ ಅದೂ ಅಧ್ಯಾಪಕರಾಗಿ ಅಂದರೆ ಎಳೆ ಮಕ್ಕಳಿಗೆ ಕರ್ನಾಟಕಾಭಿಮಾನವನ್ನು ಕಲಿಸಿ ಅದನ್ನು ಬೇರೂರುವಂತೆ ಮಾಡುವುದು. ಆ ಅಭಿಮಾನವು ಒಣ ಜಂಭವಲ್ಲ. ಕರ್ನಾಟಕದಲ್ಲಿ ಹುಟ್ಟಿದ ವೀರರ, ವೇದಾಂತಿಗಳ ಚರಿತ್ರ ಮಹಾತ್ಮ್ಯವನ್ನು ತಿಳಿದು, ಕರ್ನಾಟಕದ ಕಲೆಯ ವೈಭವವನ್ನು ಕಂಡುಹಿಡಿದು, ಕನ್ನಡ ವಾಙ್ಮಯದಲ್ಲಿ ಅಡಕವಾಗಿರುವ ಉಚ್ಚ ಜೀವನ ತತ್ವಗಳನ್ನು ಕಲಿತು ನಡೆದು ತೋರಿಸಿ 'ಇದು ನೋಡಿರಿ ನಮ್ಮ ಕರ್ನಾಟಕ. ಇಷ್ಟು ದೊಡ್ಡದು. ಇದರ ವಿಷಯವಾಗಿ ಅಭಿಮಾನ ತಾಳಿರಿ' ಎಂದು ತೋರಿಸುವದು. ಈ ಧ್ಯೇಯವನ್ನು ಸಾಧಿಸುವದಕ್ಕೋಸ್ಕರ ಅವರು ಪಟ್ಟ ಕಷ್ಟಗಳು, ಅವರು ಮಾಡಿದ ಸಾಹಸ, ಅವರು ಕೈಕೊಂಡ ದಾರಿದ್ರ್ಯ, ಅವರು ಆಚರಿಸಿದ ದೀರ್ಘೋದ್ಯೋಗ ಇವುಗಳನ್ನೆಲ್ಲ ನೋಡಿದರೆ, ಎದೆಯು ತಣ್ಣಗಾಗುವದು ! ಬೆಟ್ಟಿಯಾದವರಿಗೆಲ್ಲ 'ಕನ್ನಡ ಓದಿರಿ' ಇದೇ ಮಂತ್ರವನ್ನು ಎಷ್ಟೋ ದಿವಸ ಹೇಳುತ್ತ ನಡೆದ ಇವರನ್ನು ನೋಡಿ ಈ ಗೃಹಸ್ಥನಿಗೆ ಬೇಸರಿಕೆ ಹೇಗೆ ಬರುವುದಿಲ್ಲವೆಂದು ನನಗೆ ಆಶ್ಚರ್ಯವಾಗುತ್ತಿತ್ತು.'[೧೨]

ಬೇಂದ್ರೆಯವರು ತಮ್ಮ ಇಪ್ಪತ್ತರ ಹರೆಯದ ಏರುವಯಸ್ಸಿನಲ್ಲಿ ಆದರ್ಶಗಳಿಂದ ತುಂಬಿಹೋಗಿದ್ದರು. ಬಿ.ಎ. ವಿದ್ಯಾಭ್ಯಾಸ ಮಾಡಿದ್ದು ಅಂದು ಬ್ರಿಟಿಷ್ ಸಾರ್ವಭೌಮರ ಪ್ರೀತ್ಯಾದರ ಗಳಿಸಿ ಉತ್ತಮ ಹುದ್ದೆ ಪಡೆದು ಸುಖ ಜೀವನ ಸಾಗಿಸುವುದನ್ನು ಧಿಕ್ಕರಿಸಿದರು. ಅಂದಿನ ಮರಾಠಿ ಪ್ರಾಬಲ್ಯದ ವ್ಯವಸ್ಥೆಯಲ್ಲಿ ಮನೆಮಾತು ಮರಾಠಿಯಲ್ಲಿ ಬರೆದು ಸುಲಭ ಪ್ರಾಮುಖ್ಯತೆ ಪಡೆಯಬಹುದಾದುದನ್ನು ಕ್ಷುಲ್ಲಕವೆಂದೆಣಿಸಿದರು. ತನ್ನ ತವರು ನೆಲದ, ತನ್ನ ಮನದ ಕನ್ನಡ ನುಡಿ ಚಾರಿತ್ರಿಕವಾಗಿ ದುರ್ದೆಶೆಯಲ್ಲಿರುವುದನ್ನು ಕಂಡು, ಪ್ರೀತಿಯಿಂದ ತಬ್ಬಿ ಕಾವ್ಯ ರಚಿಸಿದರು. ಶಿಕ್ಷಕರಾಗಿ ಕನ್ನಡ ಮಕ್ಕಳನ್ನು ರೂಪಿಸಿದರು. ತಮ್ಮನ್ನು ಕನ್ನಡಕ್ಕೆ ಅರ್ಪಿಸಿಕೊಂಡರು. ಕನ್ನಡ ನವೋದಯ ಕಾವ್ಯಪ್ರಭಾತದ ಹದಿಹಾಕಿದರು. ಕನ್ನಡ ನಾಡು ನುಡಿಗೆ ಆದರ್ಶವಾಗಿ ಬೆಳಗಿದರು.

---

೧೨ ಶ್ರೀಧರ ಖಾನೋಳಕರ, ಗೆಳೆಯ ಬೇಂದ್ರೆ, ಅದೇ ಪು. ೧೧, ೧೫, ೧೬

## ಕಾವ್ಯಪ್ರಭಾತದ ಹದಿಹಾಕಿದೆ

ಬೇಂದ್ರೆಯವರು 'ಭಾವಗೀತೆಗಳಲ್ಲಿ ನಾನು ಗತಾನುಗತಿಕ ಷಟ್ಪದಿಗಳನ್ನು ಬಳಸಿದೆ. ಸಂಗಡವೇ ಹೊಸ ಛಂದಸ್ಸುಗಳ ಪ್ರಯೋಗವನ್ನೂ ಮಾಡಿದೆ. ಮುಂದೆ ಮಾಸ್ತಿಯವರಿಗೂ ನನಗೂ ಗಹನ ಸ್ನೇಹಕ್ಕೆ ದಾರಿ ಮಾಡಿಕೊಟ್ಟ, ಮೊದಲು 'ಸ್ವಧರ್ಮ'ದಲ್ಲಿ ಬೆಳಕು ಕಂಡ ಮತ್ತು ಗರಿಯಲ್ಲಿ ಪ್ರಥಮ ಪದ್ಯವಾಗಿ ಮುದ್ರಿತವಾದ 'ಬೆಳಗು' ('ಮೂಡಲ ಮನೆಯಾ ಮುತ್ತಿನ ನೀರಿನ') ಕವಿತೆಯೇ ಬಹುಶಃ ನನ್ನ ಮೊದಲ ನೂತನ ಛಂದಃಪ್ರಯೋಗ (೧೯೧೯). ಇದು ಹೊಸ ಛಂದಸ್ಸು... ಬಹುಶಃ ಇಕ್ಕಟ್ಟಾದ ಮಾತ್ರಾ ಮಿತಿಗಳುಳ್ಳ ಷಟ್ಪದಿಗಳು, ನನ್ನ ಸ್ವಾಭಾವಿಕ ಸ್ವಾತಂತ್ರ್ಯಪ್ರಿಯ ಆತ್ಮಕ್ಕೆ ಹಿಡಿಸಿರಲಿಕ್ಕಿಲ್ಲ. ಧಾರವಾಡದಲ್ಲಿ ಯಾವಾಗಲೂ ಕಿವಿದೆರೆದು ಓಡಾಡುವ ನನಗೆ, ದಾಸರ ಪದದಿಂದ, ಗೊಲ್ಲರ ಹಾಡಿನ ವರೆಗೆ ಎಲ್ಲವನ್ನೂ ಕೇಳಿ, ಕೇಳಿ ಒಂದು ಸಂಸ್ಕಾರ ಬಂದಿರಬೇಕು. ಸಾಂಗತ್ಯ ಮತ್ತು ಲೋಕ ಗೀತಗಳ ಅಂಶಗಣಗಳು ಕೊಡುವ ಸ್ವಾತಂತ್ರ್ಯ ಮಾಧುರ್ಯಗಳು ರಕ್ತಗತವಾಗಿರಬೇಕು. ಇವೆಲ್ಲ ಸೇರಿ ಛಂದಸ್ಸುಗಳಲ್ಲಿ ನವನವೋನ್ವೇಷಣೆ ನನಗೆ ಸಾಧ್ಯವಾಗಿರಬೇಕು'[೧೩] ಎಂದು ಹೇಳಿದ್ದಾರೆ. ಅವರು ಜನಪದ ಮತ್ತು ಶಿಷ್ಟ ಆಲೋಚನೆ ಮತ್ತು ಶೈಲಿಯನ್ನು ತನ್ನದಾಗಿಸಿಕೊಂಡು, ಅದರ ಪಕ್ವಫಲದಂತೆ ತಮ್ಮ ಕಾವ್ಯಛಂದಸ್ಸನ್ನು ರೂಪಿಸಿಕೊಂಡಿದ್ದಾರೆ. ಅವರ ಪ್ರತಿ ಕವನದಲ್ಲಿಯೂ ಹೊಸ ಹೊಸ ಛಂದಶ್ಶರೀರವಿದೆ. ಭಾವಲಹರಿಗೆ ತಕ್ಕಂತೆ ಛಂದಸ್ಸಿನ ಸೃಷ್ಟಿಯಾಗಿದೆ.

ಪ್ರತಿಯೊಬ್ಬ ಕವಿಯೂ ತನ್ನದೇ ಆದ ಶೈಲಿಯಲ್ಲಿ ನುಡಿಯುತ್ತಾನೆ. ಅದು ಅವನ ಕಾವ್ಯ ಭಾಷೆ. ಅದು ಅವನ ಕಂಠದ ದನಿಯಂತೆ ಅತಿ ಸಹಜವಾದುದು. ಅದು ಅವನದೇ. ಹಾಗೆ ಬೇಂದ್ರೆಶೈಲಿ ತನ್ನದೇ ಆದ ಪಾಂಗಿನಿಂದ ಕೂಡಿದೆ. ಜಾನಪದರ ಗ್ರಾಮೀಣತೆ, ಸರಳತೆ, ನಾದ ಲಯದ ಕುಣಿತ ಆನಂದದ ಭಾಗವಾದ ಬೇಂದ್ರೆಯವರು ಜಾನಪದ ಭಾಷೆಯನ್ನು ಶಿಷ್ಟಕಾವ್ಯವನ್ನು ಕಸಿಗೊಳಿಸಲು ಬಳಸಿದ್ದಾರೆ. ಅವರ ಕಾವ್ಯದಲ್ಲಿ ಜಾನಪದ ಭಾಷೆ ಶಿಷ್ಟದ ನಿಯೋಗಕ್ಕೆ ಒಳಗಾಗಿದೆ. ಅವರ ಛಂದಸ್ಸು ಸ್ಫೂರ್ತವಾಗಿ ಹೊಮ್ಮಿಬಂದಂತೆ ಶೈಲಿಯು ಅತಿ ಸಹಜವೆಂಬಂತೆ 'ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸ, ಮುಸೆದ ಗಾಳಿ ಪಕ್ಕ ಪಡೆಯುತಿತ್ತು ಸಹಜ ಪ್ರಾಸ' ಎಂಬ ಅವರ ಸ್ಫೂರ್ತಕಾವ್ಯದಂತೆ ಜೊತೆ ಜೊತೆಗೆ ಹೊಮ್ಮಿ ಬಂದಿದೆ. ಅದನ್ನು ಅವರು ಹೀಗೆ ವ್ಯಕ್ತಪಡಿಸಿದ್ದಾರೆ : "ನನ್ನ ಜನಪದ ಶೈಲಿಯ ಮಾತೂ ಅಷ್ಟೆ. ನನ್ನ ಕಿವಿಗೆ ನಾನೇ ಪ್ರಮಾಣ. 'ಗ್ರಾಂಥಿಕ' ಎನಿಸುವ ಶೈಲಿಯಲ್ಲಿ ಬರೆದಾಗಲೂ ಜನಪದದ ಹಸುರು ಮಾತುಗಳು ಅಲ್ಲಲ್ಲಿ - ಮೊದಲಿನಿಂದಲೂ - ತಾವಾಗಿ ಬರುತ್ತವೆ. ಅದನ್ನು ಹೊರದಬ್ಬಲು ನಾನು ಇಷ್ಟಪಡುವುದಿಲ್ಲ. ಯಾವುದಕ್ಕೆ ಯಾವ ಶೈಲಿ ಯೋಗ್ಯವೋ

೧೩. ದ.ರಾ.ಬೇಂದ್ರೆ, 'ಸಾಹಿತ್ಯ ಮತ್ತು ಸಾರ್ಥಕತೆ' ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ ಶ್ರೀಮಾತಾ ಪ್ರಕಾಶನ, ಧಾರವಾಡ ೧೯೯೮, ಪು-೮೦

ಆ ಶೈಲಿಯಲ್ಲಿ ನನ್ನ ಹಾಡು ತಾನಾಗಿ ಬರುತ್ತದೆ"[೧೪]

ಕಾವ್ಯವನ್ನು ಕುರಿತು ಶ್ರೀ ಅರವಿಂದರು ತಿಳಿಸಿದ ಚತುರ್ಮುಖ ಸೌಂದರ್ಯವನ್ನು ನಾಲ್ವರಿ - ನಾಲ್ಕು ಬಗೆಯ ತಿಳುವಳಿಕೆ ಜ್ಞಾನ ಎಂಬುದಾಗಿ ಬೇಂದ್ರೆ ತಿಳಿದರು. ಭಗವದ್ಗೀತೆಯೊಳಗಿನ 'ಇಂದ್ರಿಯಾಣಿ ಪರಾಣ್ಯಾಹುಃ ಇಂದ್ರಿಯೇಭ್ಯಃ ಪರಂ ಮನಃ॥ ಮನಸಸ್ತು ಪರಾ ಬುದ್ಧಿಃ ಯೋ ಬುದ್ಧೇಃ ಪರತಸ್ತು ಸಃ ॥' ಎಂಬ ಶ್ಲೋಕವು ಇಂದ್ರಿಯ, ಮನ, ಬುದ್ಧಿ ಹಾಗೂ ಪರಾತ್ಪರ ಪರಮಾತ್ಮ ವಸ್ತು ಎಂಬಲ್ಲಿ ಸೌಂದರ್ಯದ ನಾಲ್ಕು ನೆಲೆಗಳನ್ನೇ ವಿವರಿಸಿರುವುದಾಗಿ ಬೇಂದ್ರೆ ನಿಶ್ಚಯಿಸಿದರು. ಅದೇ ರೀತಿ ಕನಕದಾಸರು 'ಬಯಲು ಆಲಯದೊಳಗೊ, ಆಲಯವು ಬಯಲೊಳಗೊ, ಬಯಲು ಆಲಯಗಳೆರಡು ನಯನದೊಳಗೊ ॥ ನಯನ ಬುದ್ಧಿಯ ಒಳಗೊ, ಬುದ್ಧಿ ನಯನದೊಳಗೊ, ಬುದ್ಧಿ ನಯನಗಳೆರಡು ನಿನ್ನೊಳಗೊ ಹರಿಯೇ' ಎಂಬಲ್ಲಿ ಬಯಲು, ಆಲಯ, ನಯನ ಮತ್ತು ಹರಿ ಎಂಬ ನಾಲ್ಕು ನೆಲೆಗಳನ್ನೇ ಅನುಭವಿಸಿದ್ದನ್ನು ಬೇಂದ್ರೆ ಅನುಭವಿಸಿದರು. "ಪರಮಾತ್ಮನನ್ನು ನಯನದಲ್ಲಿ ಕಾಣು" ಎಂಬುದಾಗಿ ಭಾರತೀಯ ಸಾಧುಸಂತರು ವಿವರಿಸಿದ್ದನ್ನು ಆಧರಿಸಿ ಬೇಂದ್ರೆಯವರ ಚತುರ್ಮುಖ ಸೌಂದರ್ಯ ಸಿದ್ಧಾಂತದಿಂದ 'ಚಂದ್ರ', 'ಗಂಡುಸು ಹೆಂಗುಸಿಗೆ', 'ಚತುರ್ಮುಖ ಸೌಂದರ್ಯ' ಮತ್ತು 'ಹಂಪೀ-ವಿಜಯನಗರ ದರ್ಶನ' ಎಂಬ ಕವನಗಳು ರೂಪುಗೊಂಡವು. ಅವು ೧೯೩೨ರಲ್ಲಿ ಪ್ರಕಟಗೊಂಡ 'ಗರಿ' ಕವನ ಸಂಗ್ರಹದಲ್ಲಿ ಸೇರ್ಪಡೆಯಾದವು. ಈ ಎಲ್ಲ ಕವನಗಳಲ್ಲಿ ಮೊದಲನೆಯ ನುಡಿ ಐಂದ್ರಿಯಿಕ ಸೌಂದರ್ಯ, ಎರಡನೆಯ ನುಡಿ ಕಾಲ್ಪನಿಕ ಸೌಂದರ್ಯ, ಮೂರನೆಯ ನುಡಿ ಬೌದ್ಧಿಕ ಸೌಂದರ್ಯ ಹಾಗೂ ಕೊನೆಯ ನುಡಿ ಆದರ್ಶ ಸೌಂದರ್ಯವನ್ನು ವಿವರಿಸಲು ಬೇಂದ್ರೆ ಮೀಸಲಿಟ್ಟರು.

" 'ನಲ್' ಎಂಬ ಬೀಜಾಕ್ಷರದಲ್ಲಿದೆ ಸಾರಸಂಪತ್ತಿ. ದ್ರಾವಿಡರಸವಿಚಾರವು ಎಷ್ಟು ಗಾಢವೂ ? ಗೂಢವೂ ಆಗಿತ್ತೆಬ್ಬುಂದು ಆ ಒಂದು ಶಬ್ದದಿಂದ ತಿಳಿಯುವಂತಿದೆ. 'ಆನಂದಾತ್ ಖಲ್ವಿಮಾನಿ ಭೂತಾನಿ ಜಾತಾನಿ' ಎಂಬುದನ್ನು ಅವರು ಬಲ್ಲವರಾಗಿದ್ದರು. ರಸ-ರಮಣೀಯತೆ, ಪ್ರೇಮ ಆನಂದಗಳ ಚತುರ್ಮುಖನು ಸಾಹಿತ್ಯ ವೇದವಾದಿಯೆಂದು ಅವರು ತಿಳಿಯುತ್ತಿದ್ದರು. ರಸ, ರಮಣೀಯತೆ, ಪ್ರೇಮ ಮತ್ತು ಆನಂದ ಎಂಬ ಈ ನಾಲ್ಕು ರೂಪಗಳ ಸಮನ್ವಯಿತ ಏಕರೂಪವಾದ 'ನಲ್' ಎಂಬ ಆದಿಶಕ್ತಿಯ ದರ್ಶನದಿಂದಲೇ ಮಾನವನು ಕವಿಯಾಗುವನು - ಋಷಿಯಾಗುವನು. ಆದರ್ಶಾನುಭವದಿಂದಾಗುವ ಆನಂದವನ್ನು ವಾಚಕರಲ್ಲಿ ಉಂಟು ಮಾಡುವಂತೆ ವಾಗರ್ಥ ಸಂಜ್ಞೆಗಳಿಂದ ವರ್ಣಿತವಾದುದೇ ಕಾವ್ಯವು ! ಮಂತ್ರವು"[೧೫]

೧೪. ಅದೇ, ಪು - ೮೧.

೧೫ ದ.ರಾ. ಬೇಂದ್ರೆ, ಅನುಬಂಧ-೨, ಗರಿ, ಸಮಾಜಪುಸ್ತಕಾಲಯ, ೧೯೧೮, ಧಾರವಾಡ (ಆವೃತ್ತಿ ೬), ೧೯೭೩, ಪು-೧೪೮

"ಯೇನ ಸರ್ವ ಇದಂ ತತಂ' ಎಂದು ಹೊಗಳಿಸಿಕೊಂಡಿರುವ ಆ ಗೂಢಶಕ್ತಿಯ ಶ್ರೀಮತ್ ಮತ್ತು ಊರ್ಜಿತವಾದ ರೂಪವನ್ನೇ - ವಿಭೂತಿಯನ್ನೇ ವರ್ಣಿಸುವುದು ಕವಿಯ ವಿಷಯವಾಗಿದೆ. ಇದಕ್ಕೆ 'ಯೋಗವು' ಅವಶ್ಯವು. ಯೋಗವಿಲ್ಲದೆ ಇದು ದುಸ್ಸಾಧ್ಯವೂ ಅಲ್ಲ; ಆದರೆ ಅಸಾಧ್ಯ. ಇದಕ್ಕೆ ಕಾವ್ಯಯೋಗವೆಂದು ನಾಮಕರಣ ಮಾಡಬಹುದು. ಶ್ರೀಮದ್ ವಾಲ್ಮೀಕಿಋಷಿಗಳಲ್ಲಿ ಸ್ಥಾಯಿಯಾಗಿದ್ದ ದಿವ್ಯಶೋಕಭಾವವು ಕ್ರೌಂಚಮಿಥುನ ವಿಯೋಗ ಪ್ರಸಂಗದಿಂದ ಉದ್ದೀಪಿತವಾಗಿ ನವೋನವ ರಾಮಾಯಣಕ್ಕೆ ಜನ್ಮವನ್ನು ಕೊಟ್ಟುದುದು ಇದೇ ನಲ್ ಕೂಟದ ಪ್ರಭಾವದಿಂದ. 'ಕಾವ್ಯಯೋಗ'ದಿಂದ. ಈ ಯೋಗವು ಪ್ರತಿಭೆಯ ಜನಕ. ಯೋಗಸ್ಥರಾಗಿ ಹೇಳಿದ ಹಾಡೇ ಅಮರಕಾವ್ಯ ; ಉಳಿದುದು ರಂಜನೆಯ ವಿಧಿ. ಕಾಲಕಾಲಕ್ಕುಂಟಾಗುವ ಧರ್ಮಗ್ಲಾನಿಯನ್ನು ಹೋಗಲಾಡಿಸಲು ಸರಸ್ವತಿಯು ಇದೇ ಯೋಗವನ್ನಾಶ್ರಯಿಸಿ ನವಕವಿಗಳ ಮುಖಾಂತರವಾಗಿ ಅಭಿನವ ಸಾಹಿತ್ಯರೂಪದಿಂದ ಅವತರಿಸುವಳು ! ಮತ್ತು ಜಗತ್ತಿನ ರಸ, ರಮಣೀಯತೆ, ಪ್ರೇಮ, ಆನಂದ ಕಾವ್ಯಧರ್ಮವನ್ನು ಅಚ್ಯುತವಾಗುವಂತೆ ಪ್ರತಿಷ್ಠೆಗೊಳಿಸುವಳು"(೧೬) ಎಂದು ಬೇಂದ್ರೆಯವರು 'ನಲ್' ಮತ್ತು 'ಕಾವ್ಯಯೋಗ'ವನ್ನು ಕುರಿತು ಹೇಳಿದ್ದಾರೆ. ಬೇಂದ್ರೆಕಾವ್ಯದ ಮುಖ್ಯ ಪ್ರತೀಕ 'ನಲ್'. ಅದೇ ಅವರ ಕಾವ್ಯದ ರಸ, ಪ್ರೇಮ, ಹಿಗ್ಗು, ಸಾಮರಸ್ಯ. ವಾಲ್ಮೀಕಿ ಪರಂಪರೆಯನ್ನು ಬೇಂದ್ರೆ ಕಾವ್ಯ ತಳಹದಿಯಾಗಿ ಒಪ್ಪಿಕೊಂಡು, ಕಾವ್ಯೋದ್ಯೋಗ (ಯೋಗ, ಆಯೋಗ, ಪ್ರಯೋಗ, ವಿಯೋಗ, ಸಂಯೋಗ, ಅಭಿಯೋಗ ಮತ್ತು ಉತ್‌ಯೋಗ) ಎಂಬ ಏಳು ನೆಲೆಗಳಲ್ಲಿ ಕಾವ್ಯವನ್ನು ಸೃಷ್ಟಿಸುವ ಹೊಸ ಹೆಜ್ಜೆ ಇಟ್ಟರು. ಗೆಳೆಯರ ಗುಂಪನ್ನು ಕಟ್ಟಿ ೧೯೨೬ರವರೆಗೆ ಹಂತಹಂತವಾಗಿ ಕಾವ್ಯಲೀಲಾ ಸಾಧನೆಗೆ ಸಾಮಷ್ಟಿಕ ರೂಪಕೊಡುತ್ತ ಹೋದರು. ಬೇಂದ್ರೆಯವರ ಕಾವ್ಯದ ಈ ಹೊಸ ಹೆಜ್ಜೆ ೧೯೧೬ರಿಂದ ೧೯೨೪ರವರೆಗೆ ರೂಪುಗೊಂಡಿತ್ತು.

## ಲಾವಣಿ ಸಾಂಗತ್ಯ ಹುಡುಕಾಡಿದೆ

ಬಾಲ್ಯದಲ್ಲಿ ತಮಗೆ ಮಾರ್ಗದರ್ಶಿಯಾಗಿದ್ದ, ಧಾರವಾಡ ಕನ್ನಡದ ಹಿರಿಯ ಕವಿಗಳನ್ನು ಬೇಂದ್ರೆಯವರು 'ಶಾಂತಕವಿ ಸಕ್ಕರಿ, ಕಾವ್ಯಾನಂದರ ಝರಿ' ಎಂದು ನೆನೆದಿದ್ದಾರೆ. ಶಾಂತಕವಿಯವರ ಕಾವ್ಯ ತನಗೆ ಸಕ್ಕರೆಯೋಪಾದಿಯಲ್ಲಿ ಸಿಹಿಯಾಗಿಯೂ ಕಾವ್ಯಾನಂದ ಪುಣೇಕರ ಅವರ ಕಾವ್ಯ ಝರಿಯ ತಿಳಿಯಾದ ಶುದ್ಧ ನೀರಿನಂತೆ ಜೀವ ಪೋಷಕವೂ ಆಗಿದ್ದವು ಎಂಬ ಭಾವ ವ್ಯಕ್ತಪಡಿಸಿದ್ದಾರೆ.

'ಸಾತೇನಹಳ್ಳಿಯ ಸಕ್ಕರಿ ಬಾಳಾಚಾರ್ಯರು 'ಶಾಂತಕವಿ' (೧೮೫೬-೧೯೨೧)ಯೆಂಬ ಹೆಸರಿನಲ್ಲಿ ಅನೇಕ ನಾಟಕಗಳನ್ನು ಬರೆದರು. ಸುಮಾರು ೬೫ ಕೃತಿಗಳನ್ನು ಇವರು ರಚಿಸಿದಂತೆ

---

೧೬ ಅದೇ, ಪುಟ - ೧೪೮, ೧೪೯

ತಿಳಿಯುತ್ತದೆ. ಹರಿಕೀರ್ತನೆಗಳ ಮೂಲಕವೂ ಇವರು ಕನ್ನಡದ ಪ್ರಚಾರ ಮಾಡಿದರು. 'ಶಾಂತೇಶ', 'ಶಾಂತವಿಠಲ' ಎಂಬ ಅಂಕಿತದಲ್ಲಿ ಪದ್ಯಗಳನ್ನು ಬರೆದಿದ್ದಾರೆ. ಜಾನಪದ ಸೊಗಡಿನ ಜನಪ್ರಿಯ ಕವಿಯಾಗಿದ್ದರು.[೧೭] ಅವರನ್ನು ಕುರಿತು ಬೇಂದ್ರೆಯವರು ಸಾಹಿತ್ಯದ ವಿರಾಟ್ ಸ್ವರೂಪದಲ್ಲಿ ಹೀಗೆ ನುಡಿದಿದ್ದಾರೆ : 'ಒಂದು ಕೈಯಿಂದ ಕೀರ್ತನೆ ಇನ್ನೊಂದು ಕೈಯಿಂದ ನಾಟಕ ಬರೆದು, ಸತ್ತ್ವಹೀನರಾದ ಕನ್ನಡಿಗರನ್ನು ಸತ್ತ್ವ ಉಳ್ಳವರನ್ನಾಗಿ ಮಾಡಲು ೧೮೭೩ರಲ್ಲಿಯೆ ಒಂದು ನಾಟಕ ಕಂಪೆನಿಯನ್ನಳವಡಿಸಿಕೊಂಡಿದ್ದರು."[೧೮]

'ಎಲ್ಲಿರುವುದಭಿಮಾನ ಕನ್ನಡಿಗರೆ ಪೇಳಿ
ಸುಳ್ಳೆ ಬಡಬಡಿಸುವಿರಿ ಸಭೆಗಳಲ್ಲಿ'

"ಇರುವುದೆ ಸರ್ವಾಧಿಪತಿಗಳ ಸ್ಥಾನಕ್ಕೆ
ಪರಿಚಯವು ಕನ್ನಡದ ನುಡಿಯು, ಪೇಳಿ
ಸರಕಾರ ಮತ್ತಿರಲಿ, ಕಾಂಗ್ರೇಸಿಗಾದರೂ
ಗುರುತು ಕರ್ನಾಟ ಭಾಷೆಯದಿಲ್ಲವು"

ಇದು ಶಾಂತಕವಿಗಳು ೧೯೧೮ರಲ್ಲಿ ಬೊಬ್ಬೆ ಕುಟ್ಟಿದ ಒಂದು ತುಂಡು ಪದ್ಯ.[೧೯]

ಬೇಂದ್ರೆಯವರ ಜೀವನ ಮತ್ತು ಕಾವ್ಯದ ಒಂದು ಪ್ರಮುಖ ಅನುರಾಗವೆಂದರೆ ಅವರು ತಮ್ಮನ್ನು ಕನ್ನಡದ ಸೇವೆಗೆ ಸಮರ್ಪಿಸಿಕೊಂಡಿದ್ದು. ಅದರಲ್ಲೂ ಜನಸಾಮಾನ್ಯರ ಜೀವನ ರೀತಿಗೆ ಒಲಿದದ್ದು ಹಾಗೂ ಜನಸಾಮಾನ್ಯರ ಆಡುನುಡಿಗೆ ಮೋಹಗೊಂಡದ್ದು. ಶಿಷ್ಟ ಸಾಹಿತ್ಯ ರಚನೆಗೆ ಬೇಂದ್ರೆಯವರು ಪಡೆದ ಮೂಲಸೆಲೆ ಜಾನಪದ. ಅದನ್ನು ಅವರು 'ಲಾವಣಿ ಸಾಂಗತ್ಯ ಹುಡುಕಾಡಿದೆ' ಎಂದಿದ್ದಾರೆ. ಜಾನಪದ ಸಾಹಿತ್ಯದ ಲಾವಣಿ ಮುಂತಾದವುಗಳು ಅವಿದ್ಯಾವಂತರು ಕಟ್ಟಿದ್ದು. ಅಲ್ಲಿ ಕನ್ನಡದ ನುಡಿ ಸತ್ವವಿದೆ. ಶಿಷ್ಟ ಅಥವಾ ನವೋದಯ ಸಾಹಿತ್ಯವನ್ನು ರಚಿಸುವಲ್ಲಿ ಜಾನಪದ ಸಾಹಿತ್ಯದ ಸಾಂಗತ್ಯ ಎಂದರೆ ಹೊಂದಾಣಿಕೆಯನ್ನು ಹುಡುಕಾಡಿದೆ, ಅದನ್ನು ಕಸಿ ಮಾಡಿದೆ ಎಂಬ ಅರ್ಥದಲ್ಲಿ ಬಳಸಿದ್ದಾರೆ. ಜನಪದ ಭಾಷೆಯ ಬಾಗುಬಳುಕನ್ನು ಚೆನ್ನಾಗಿ ತಿಳಿದಿದ್ದ ಬೇಂದ್ರೆಯವರು ಅದನ್ನು ಶಿಷ್ಟ ಸಾಹಿತ್ಯಕ್ಕೆ ಸಮರ್ಥವಾಗಿ ಸಾಂಗತ್ಯಗೊಳಿಸಿದ್ದಾರೆ.

---

೧೭ ಸೂರ್ಯನಾಥ ಕಾಮತ್ (ಮು.ಸಂ) ಕರ್ನಾಟಕ ರಾಜ್ಯ ಗೆಜೆಟಿಯರ್, ಧಾರವಾಡ ಜಿಲ್ಲೆ, ಬೆಂಗಳೂರು ೧೯೯೫, ಪು. ೨೩೦

೧೮ ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. ೬೩೯

೧೯ ಅದೇ, ಪು.-೬೪೩

ಜನಪದರು ನುಡಿಯನ್ನು ತುಂಬಾ ಅರ್ಥಪೂರ್ಣವಾಗಿ, ಅತಿ ಸಹಜವಾಗಿ ಬಳಸಿದ್ದು, ಅದು ತಿಣುಕಿ ಬರೆದಿದ್ದಲ್ಲ. ಅದರ ತುಣುಕಿಗಾಗಿ ಈ ಉದಾಹರಣೆ ನೋಡಬಹುದು: 'ನಾಯೆದ್ದು ಬೊಗಳೋಕೆ ನಾಯಾಕಿರಬೇಕು ?'

೧. ನಾ - ನಾನು ಎದ್ದು ಬೊಗಳುವುದಾದರೆ, ನಮ್ಮ ಮನೆಯಲ್ಲಿ ನಾಯಿಯ ಅಗತ್ಯವೇನು?

೨. ನಾಯಿ ಎದ್ದು ಬೊಗಳುವುದಾದರೆ ನನ್ನ ಅಗತ್ಯ ಏನಿದೆ ? ಅಂದರೆ ಆಳು ಎದ್ದು ಯಜಮಾನಿಕೆ ಮಾಡುವುದಾದರೆ ನಾನು ಯಾಕಿರಬೇಕು ?

ಈ ಮೇಲಿನ ಉದಾಹರಣೆಯಲ್ಲಿ ಜನಪದ ಅವಿದ್ಯಾವಂತರು ಎಷ್ಟು ಸಶಕ್ತವಾಗಿ ಭಾಷೆಯನ್ನು ಬಳಸುತ್ತಾರೆ ಎಂಬುದನ್ನು ಅರ್ಥಮಾಡಿಕೊಂಡವನು ಮಾತ್ರ ಆ ಭಾಷೆಯ ಖನಿಯನ್ನು ತನಿಯಾಗಿ ಬಳಸಲು ಸಾಧ್ಯ. ಅದನ್ನು ಅರಿತಿದ್ದ ಬೇಂದ್ರೆಯವರು ಅದನ್ನು ನವೋದಯ ಕಾವ್ಯದಲ್ಲಿ ಸಾಧಿಸಿದರು.

'ಕೋಲು ಹಾಡುಗಳನ್ನು ಹಾಡಿಸಿ ದಣಿಸಿದೆ' ಎಂದು ಅವರು ನುಡಿದಿರುವಲ್ಲಿ ಕೋಲಾಟದ ಹಾಡುಗಳನ್ನು ಹಾಡುಗಾರರಿಂದ ಹಾಡಿಸಿ ದಣಿಸಿದೆ ; ಅವರಿಂದ ಅಷ್ಟೊಂದು ಹಾಡಿಸಿದೆ, ಆದರೆ ನಾನು ದಣಿಯಲಿಲ್ಲ. ನನ್ನ ಉತ್ಸಾಹ ಹಿಂಗಲಿಲ್ಲ, ಅದು ಉಕ್ಕುತ್ತಿತ್ತು ಎಂಬ ಅಪರೂಪದ ಕಾವ್ಯಧ್ವನಿ ಇದೆ. ಹೀಗೆ ಕಾವ್ಯದ ಕಡೆ ಮನಸ್ಸು ಕೊಟ್ಟು ಶಾಲಾ ಶಿಕ್ಷಕನಾಗಿ ಜೀವನ ಸಾಗಿಸುತ್ತಿರುವಾಗ ಅವರು ತಾಯಿಯನ್ನು ಕುರಿತು 'ಅಂಬಿಕೆಯ ನಂಬಿಕೆಯ ನಾ ಕಾಡಿದೆ' ಎಂದು ನುಡಿದಿದ್ದಾರೆ. ಎಲ್ಲ ತಾಯಿಯರಂತೆ ತನ್ನ ತಾಯಿಯ ನಂಬಿಕೆ ಬಿ.ಎ. ಪದವೀಧರನಾದ ತನ್ನ ಮಗ ದೊಡ್ಡ ಅಧಿಕಾರಿ ಆಗಲಿ ಎಂಬುದಾಗಿರಬಹುದು ಆದರೆ ಅಂತಹ ನಂಬಿಕೆಯನ್ನು ನಾನು ಕಾಡಿದೆ ಎಂದು ಸತ್ಯವನ್ನು ದಾಖಲಿಸಿದ್ದಾರೆ.

'ಶಾಂತಕವಿ ಸಕ್ಕರಿ, ಕಾವ್ಯಾನಂದರ ಝುರಿ
ಲಾವಣಿ ಸಾಂಗತ್ಯ ಹುಡುಕಾಡಿದೆ
ಕೋಲು ಹಾಡುಗಳನ್ನು ಹಾಡಿಸಿ ದಣಿಸಿದೆ
ಅಂಬಿಕೆಯ ನಂಬಿಕೆಯ ನಾ ಕಾಡಿದೆ'

## ಮಕ್ಕಳ ಕವಿ

ಬೇಂದ್ರೆಯವರು ಶಾಂತಕವಿ ಮುಂತಾದ ಗುರುಗಳಿಂದ ಸ್ಫೂರ್ತಿ ಪಡೆದು ಕವಿಗಳಾದಂತೆ ಕನ್ನಡದ ಮಕ್ಕಳನ್ನು ಉಲ್ಲಾಸಗೊಳಿಸುವ ಚೈತನ್ಯಪೂರ್ಣ ಕವನಗಳನ್ನು ರಚಿಸಿದ್ದಾರೆ. ಅವರ ಮಾತೃಹೃದಯದ ಮುಗ್ಧಭಾವದ ವಾತ್ಸಲ್ಯವು ಶಿಕ್ಷಕನ ಅನುಭವದಿಂದ ಮಕ್ಕಳ ನಾಲಗೆಯ ಮೇಲೆ ನಲಿದು ಉತ್ಸಾಹ ನೀಡುವಂತಹದಾಗಿದೆ. ಆ ಕವನಗಳು ಮಕ್ಕಳ ಆಹ್ಲಾದದ ನೆಲೆಯಾಗಿವೆ.

ಕನ್ನಡದ ಮಕ್ಕಳು ಬೆಳೆಯುತ್ತ ಬೇಂದ್ರೆಯವರ ಕಾವ್ಯವನ್ನು ನುರಿಸುತ್ತ, ತಮ್ಮ ವಯಸ್ಸು ಹಾಗೂ ಅನುಭವ ಹೆಚ್ಚಾದಂತೆಲ್ಲ ಆ ಕಾವ್ಯದ ರಸಾನುಭವವನ್ನು ದಕ್ಕಿಸಿಕೊಳ್ಳುತ್ತವೆ. ಅದು ಬೇಂದ್ರೆಕಾವ್ಯದ ವೈಶಿಷ್ಟ್ಯ.

'ಅವ್ವನ ಸೀರಿ
ಮಡಿಚಲಾರೆ !
ಅಪ್ಪನ ರೊಕ್ಕ
ಎಣಿಸಲಾರೆ !
ಎಂಥ ಪ್ರಕಾಶಾ
ತುಂಬಿತಾಕಾಶಾ !' ('ಅವ್ವನ ಸೀರಿ' : ಸಂಚಯ)

ಈ ಕವನವನ್ನು ಓದುವ ಕೇಳುವ ಮಕ್ಕಳಿಗೆ ಅವರು ಕಂಡ ಆಕಾಶ ಮತ್ತು ನಕ್ಷತ್ರಗಳು ಅಮ್ಮನ ಮಡಿಚಲಾಗದ ಸೀರೆಯಾಗಿ, ಅಪ್ಪನ ಎಣಿಸಲಾರದ ಹಣವಾಗಿ, ಅವು ತಮ್ಮದಂತೆನಿಸಿ ಆತ್ಮೀಯವಾಗುತ್ತವೆ. ಅವರ ನಾಲಗೆಗೆ ಒಗ್ಗುವ ನುಡಿಯಾಗಿ ಅವರವರ ಮನದಲ್ಲಿ ಪ್ರಕಾಶ ತುಂಬುತ್ತವೆ.

'ಮಣ್ಣರಳಿ ಹೂವಾಗಿ । ನೂಲಬಟ್ಟೆಯಾಗಿ
ಮೈ ಮೈಗೆ ದಾರದಾಧಾರಾ, ಗುಡಿಗುಡಿಗೆ
ಹೂಬತ್ತಿ, ಹೊತ್ತಿ, ಮಣ್ಣರಳಿ ॥

ನೀರರಳಿ ತಾವರಿ । ಮಿನಮಿನ ಮೀನಕ್ಕ
ಬೆಳಕುಂಡು ಬಾಳಿರೆನತಾವ, ಹಗಲಿರುಳು
ಬೆಳಕನುಣಸ್ಯಾವ ನೀರರಳಿ ॥'

* * *

'ಬೀಸಿದರ ಕಾಳರಳಿ । ಕಾಸಿದರ ಅನ್ನರಳಿ ॥
ನುರಿಸಿ ನುರಿಸಿದರ ಕವಳರಳಿ, ಎದಿಯರಳಿ
ಹಾಲು ತೊರೆದಾವ, ಮಗುವರಳಿ' ('ಕಣ್ಣರಳು' : ನಾಕುತಂತಿ)

ಮಣ್ಣರಳಿ ಹೂವಾಗಿ ಬಂದ ಹತ್ತಿ, ಮೈ ಮುಚ್ಚಲು ದಾರದಾಧಾರವಾದ ಉಡುಪಾಗಿ, ಹೂಬತ್ತಿಯಾಗಿ ಉರಿದು ಬೆಳಕು ನೀಡುವುದು. ನೀರು ಅರಳಿ ತಾವರೆಯಾದುದು ಮಿನಮಿನವೆನ್ನುವ ಬೆಳಕನ್ನುಂಡು ಬಾಳಿ ಎಂದು ಹೇಳುತ್ತಿದೆ. ಬೀಸಿದರೆ ಕಾಳು ಅರಳುವುದು. ಕಾಸಿಬೇಯಿಸಿದರೆ ಅಕ್ಕಿ ಅನ್ನವಾಗಿ ಅರಳುವುದು. ಅದೇ ಅನ್ನವನ್ನು ನುರಿಸಿ ನುಂಗಲು ಕವಳವಾಗಿ ಜೀವಶಕ್ತಿಯಾಗುವುದು. ಆ ಅನ್ನದಿಂದ ಎದೆಯರಳಿ ತಾಯಿಯೊಡಲಲ್ಲಿ ಮಗುವರಳುವ ಕೌತುಕ ಎಲ್ಲರ ಮನಸ್ಸನ್ನು ಅರಳಿಸುತ್ತದೆ.

ಯಾವುದೇ ಋತುಮಾನದಲ್ಲಾಗಲಿ ನಗುತ ಒಲಿಯುವ, ಒಲಿಸುವ, ಹಾಡಿ ನಲಿಯುವ, ನಲಿಸುವ ಬದುಕು ಕನ್ನಡ ಮಕ್ಕಳದಾಗಲಿ ಎಂದು ಆಶಿಸಿ ಬೇಂದ್ರೆ ಮಕ್ಕಳ ಕವನ ರಚಿಸಿದರು. ಮಕ್ಕಳು 'ಚಳಿ ಇರಲಿ ಮಳೆಬರಲಿ' ಎಂದು ಕುಣಿದು ಹಾಡುವಾಗ, ಹಾಡಿ ನಲಿಯುವಾಗ ಅವರು ಆನಂದ ಪಡೆದು ತಮ್ಮ ತಂದೆತಾಯಿಗಳಿಗೆ ಜೀವದಾನಂದ ನೀಡುವ ವಿಶಿಷ್ಟ ಕವನ ಇದಾಗಿದೆ.

'ಚಳಿ ಇರಲಿ ಮಳೆ ಬರಲಿ
ಮಂಜು ಸುರಿಯುತಲಿರಲಿ
ಬಿಸಿಲು ಕುದಿಸುತಲಿರಲಿ
ಮುಮ್ಮುಖದ ಋತುಮಾನ ಹೇಗು ಇರಲಿ
ನಗುತ ಒಲಿವೆವು ನಾವು
ನಗುತ ಒಲಿಸುವೆವು

ಏನೆ ಕಷ್ಟವು ಬರಲಿ ; ಎಂಥ ನಷ್ಟವೆ ಇರಲಿ
ಇಷ್ಟವೂ ಅನಿಷ್ಟವೂ ಕೂಡಿ ಬರಲಿ
ದುಮ್ಮಾನ ಕಳೆವಂತೆ ಸುಮ್ಮಾನ ಹೊಳೆವಂತೆ
ಹಾಡಿ ನಲಿವೆವು ನಾವು
ಹಾಡಿ ನಲಿಸುವೆವು'

**ತೇಲಾಡುವಾಗ ಮನಸು**

'ತೇಲಾಡುವಾಗ ಮನಸು
ಮೇಲಾಡತಾವ ಕನಸು
ತಾಕಾಡುವಾಗ ಇತ್ತ
ತೇಕಾಡತಾವ ಚಿತ್ತ'

ಈ ಹಾಡಿನ ಲಯದಲ್ಲಿನ ಮೊದಲೆರಡು ಸಾಲು ಅರ್ಥವಾಯ್ತು ಎನ್ನುವಾಗ್ಗೆ, ಮಿಕ್ಕೆರಡು ಸಾಲು ನೀನು ಬೆಳೆದಂತೆ ನಾನು ಅರ್ಥ ಆಗ್ತೀನಿ ಎಂದು ಹೇಳಿ, ಹಾಡಿದ ಸಾಲನ್ನು ಗುನುಗುನಿಸುವಂತೆ ಮಾಡುತ್ತದೆ. ಮಕ್ಕಳು ಬೆಳೆದಂತೆ ಅವರ ಅನುಭವ ವಿಸ್ತಾರವಾದಂತೆ ಬೇಂದ್ರೆ ಕಾವ್ಯ ತನ್ನ ಗುಟ್ಟನ್ನು ರಟ್ಟುಮಾಡುತ್ತ ಆನಂದಗಂಧಿಯಾಗುತ್ತದೆ. ಕವಿಯ ಎಲ್ಲ ಅನುಭವ, ಕನಸು ಕಾವ್ಯವಾಗುವುದಿಲ್ಲ. ಕವಿ ಪ್ರತಿಭೆ ಹಿಡಿಯುವುದು -

ಹಾಸಾದ ಮಿಂಚಿನಂದ
ಬೀಸಿದ್ದ ಸೆರಗಿನಿಂದ

ಸೆಳೆದಂತೆ ಎರಡು ನೂಲು
ಉಳಿದಾವ ನಾಕುಸಾಲು ('ತೇಲಾಡುವಾಗ' : ಗಂಗಾವತರಣ)

ಅವ್ವನ ಸೀರೆಯ ಸೆರಗು ಹಿಡಿದು ತಬ್ಬಿ ಬೆಚ್ಚಗೆ ಮಲಗಿದ ಮಗು, ಎದ್ದಾಗ ಅದರ ಕೈಲಿ ಉಳಿಯುವುದು ಎರಡು ನೂಲು. ಅದರಂತೆ ಕವಿಯ ಅನುಭವ ಪಾಕಗೊಂಡು ಉಳಿಯುವುದು ನಾಕುಸಾಲು. ಈ ಸತ್ಯದಂತೆ ಮಕ್ಕಳು ಬೇಂದ್ರೆಕಾವ್ಯದ ಗುಂಗುಹಿಡಿದು ಹಾಡುತ್ತ ಸಾಗಿದರೆ, ಉಳಿವ ನಾಕು ಸಾಲು - ತೇಲಾಡುವ ಮನಸ್ಸಿನಲ್ಲಿ, ಮೇಲಾಡುವ ಕನಸಿನಲ್ಲಿ ಮುದವನ್ನು ಕೊಡುತ್ತದೆ. ಮುಂದೆ ಬರುವ ಕಷ್ಟ ಸುಖಗಳನ್ನು ಆತ್ಮೀಯ ದವನವಾಗಿಸುತ್ತದೆ.

**ಕೋಲು ಹಾಡುಗಳನ್ನು ಹಾಡಿಸಿ ದಣಿಸಿದೆ**

'ಬಾಳು ಒಂದು ಕುಣಿತ. ತಿಳಿದು ಹಾಕಿದ ಒಂದು ಹೆಜ್ಜೆಯೂ ನೃತ್ಯವಿಧಾನ' ಎಂದು 'ಗರಿ' ಸಂಕಲನದ 'ಕುಣಿಯೋಣು ಬಾರ' ಕವನದ ಭಾವಸಂದರ್ಭದಲ್ಲಿ ಕವಿ ಸೂಚಿಸಿದ್ದಾರೆ. ಇದು ಒಂದು ನಲ್ವಾಡು. ಇದು ಪ್ರೀತಿಯ ಹರ್ಷವನ್ನು ಜಗಕ್ಕೆ ಚಿಮ್ಮಿ ತಾನೂ ನಲಿವ ಕುಣಿತದ ಲಯ, ಭಾವದ ಬಾಗು, ಸೌಂದರ್ಯದ ಆಹ್ಲಾದ ಮುಪ್ಪುರಿಗೊಂಡ ಹಾಡು. ಈ ಹಾಡು ಮಕ್ಕಳನ್ನು ಕುಣಿಸಿದಂತೆ ಹಿರಿಯರನ್ನು ಹೆಜ್ಜೆ ಹಾಕಿ ಕುಣಿಯುವಂತೆ ಮಾಡುತ್ತದೆ. ಜಗದ ಬದುಕಿನ ಅರ್ಥವನ್ನು ತಿಳಿಸುತ್ತಾ ಕುಣಿಸುತ್ತದೆ.

ಕುಣಿಯೋಣು ಬಾರಃ
  ಕುಣಿಯೋಣು ಬಾ ॥ ಪ ॥

ತಿಣಿತಿಣಿಕಿ
  ಇಣಿಕಿಣಿಕಿ
    ಒಳಹೊರಗ ಹಣಿಹಣಿಕಿ
      ಸಾಕಾತು ಸುಳ್ಳಿಣಿಕಿ । ಕುಣಿ

ಈ ಬದುಕು ಬರಿ ಭ್ರಮಿ
  ತಿಕಿದಿಮಿ ಗಿಮಿಗಿಮಿ
    ಹಾಂಗೊಮ್ಮಿ ಹಿಂಗೊಮ್ಮಿ । ಕುಣಿ

* * *

ನಾನಲ್ಲ
  ನೀನಲ್ಲ
    ನನ್ನಲ್ಲಿ ನೀನಿಲ್ಲ
      ಸಾವಿನ ನೋವಿಲ್ಲ । ಕುಣಿ

ಇದ್ದದ್ದು ಮರೆಯೋಣ
ಇಲ್ಲದ್ದು ತೆರೆಯೋಣ
ಹಾಲ್ಜೇನು ಸುರಿಯೋಣ । ಕುಣಿ

* * *

ತಾಳ್ಯಾಕ
ತಂತ್ಯಾಕ
ರಾಗದ ಚಿಂತ್ಯಾಕ
ಹೆಜ್ಜ್ಯಾಕ ಗೆಜ್ಜ್ಯಾಕ । ಕುಣಿ
ಕುಲುಕಿಸಿ ಕೈ ಕೈ
ಮಲಕಿಸಿ ಮೈ ಮೈ
ಥಕಥಕ ಥೈ ಥೈ । ಕುಣಿ

* * *

ಚಕಚಕ
ಚಂಚಲ
ಮಿಂಚಿನ ಗೊಂಚಲ
ಚಕಮಕಿ ಚಲಮಲ । ಕುಣಿ

* * *

ಗರಿಗರಿ
ಗಿರಿಗಿರಿ
ಹಿಗ್ಗಿಗ್ಗಿ ಹಿರಿಹಿರಿ
ಸೈ ಸೈ ಸರಿಸರಿ । ಕುಣಿ

* * *

ಹಗಲಿರಳ ತಾಳಕ್ಕ
ಮುಗಿಯದ ಕಾಳಕ್ಕ
ಜನುಮಗಳ ಮ್ಯಾಳಕ್ಕ । ಕುಣಿ

* * *

ಆ ಕ್ಷೀರ-
ಸಾಗರ-
ದಾನಂದದಾಗರ
ತೆರಿ ತೆರಿ ತೆರದರ । ಕುಣಿ

ಹದಿನಾಲ್ಕು ಲೋಕಕ್ಕ
ಚಿಮ್ಮಲಿ ಈ ಸುಖ
ಹಿಗ್ಗಲಿ ಸಿರಿಮುಖ । ಕುಣಿ

ಈ ಕುಣಿತದ ಆನಂದ ಹದಿನಾಲ್ಕು ಲೋಕಕ್ಕೆ ಚಿಮ್ಮಿ ಎಲ್ಲರ ಸಿರಿಮುಖ ಹಿಗ್ಗಲಿ ಎಂದು ಕವಿ ಬಯಸಿ ವಿಶ್ವದ ಜನರನ್ನು ಕುಣಿಸಿದ್ದಾರೆ. ಈ ಹಾಡಿನ ಬಗ್ಗೆ ತೀ.ನಂ.ಶ್ರೀ. ಅವರು 'ಇಲ್ಲಿ ಆನಂದವೇ ಸಂಸ್ಕಾರ, ಸಂಸ್ಕಾರವೇ ಆನಂದ. ಒಂದರೊಳಗೊಂದು ಲೀನವಾಗಿದೆ. ಇದು ಕಲೆಯ ಪರಮಾವಧಿ. ಕುಣಿಯೋಣು ಬಾರ ವಿಶ್ವಸಾಹಿತ್ಯಕ್ಕೆ ಸೇರುವ ಕವನ' ಎಂದು ಹೇಳಿದ್ದಾರೆ.

ಬೇಂದ್ರೆಯವರು ಉಪನಿಷದ್ಮಂತ್ರದ ಛಾಯೆಯನ್ನೊಳಗೊಂಡ ಪ್ರಾರ್ಥನೆಗಳನ್ನು ರಚಿಸಿದ್ದಾರೆ. ಅವು ಜಾತಿಮತಪಂಥ ಹಾಗೂ ದೇಶದ ಗಡಿಗಳನ್ನು ಮೀರಿ ನಿಂತ ಮಾನವಕುಲದ ಪ್ರಾರ್ಥನೆಗಳಾಗಿವೆ. ಈ ಪ್ರಾರ್ಥನೆಗಳು ನಮ್ಮ ಕನ್ನಡನಾಡಿನ ಕಂದರ ನುಡಿಮಂತ್ರವಾಗಬೇಕಾಗಿದೆ :

'ಲೇಸೆ ಕೇಳಿಸಲಿ ಕಿವಿಗೆ, ನಾಲಗೆಗೆ ಲೇಸೆ ನುಡಿದು ಬರಲಿ.
ಲೇಸೆ ಕಾಣಿಸಲಿ ಕಣ್ಗೆ, ಜಗದೊಳಗೆ ಲೇಸೆ ಹಬ್ಬುತಿರಲಿ.
ಲೇಸೆ ಕೈಗಳಿಂದಾಗುತಿರಲಿ, ತಾ ಬರಲಿ ಲೇಸು ನಡೆದು.
ಲೇಸನುಂಡು, ಲೇಸುಸಿರಿ, ಇಲ್ಲಿರಲಿ ಲೇಸೆ ಮೈಯ್ಯ ಪಡೆದು'

* * *

'ಕೂಡಿ ಓದಿ ಕೂಡಾಡಿ, ಕೂಡಿ ಅರಿಯೋಣ ಕೂಡಿ ಕೂಡಿ
ಕೂಡಿ ತಿಂದು, ಕೂಡುಂಡು ಕುಡಿದು ದುಡಿಯೋಣ ಕೂಡಿ ಕೂಡಿ
ಕೂಡಿ ನಡೆದು, ಒಡಗೂಡಿ ಪಡೆದು ನುಡಿ ಹೇಳಿ ಕೇಳಿ ಕೂಡಿ
ಕೂಡಿ ಬೆಳೆದು, ಬೆಳಗೋಣ ದೇವರೊಲು ಕೂಡಿ ಕೂಡಿ ಕೂಡಿ'
('ಪ್ರಾರ್ಥನೆ' : ಗಂಗಾವತರಣ)

'ಪಾತರಗಿತ್ತಿ'ಯೆಂದರೆ ಚಿಟ್ಟೆ. ಚಿಟ್ಟೆ ಮಕ್ಕಳ ಮನಸ್ಸನ್ನು ಹಿಡಿದು ಓಡಾಡಿಸುವ, ಕೈಗೆ ಸಿಕ್ಕಂತೆ ಓಡುವ, ಸಿಕ್ಕು ನಲಿಸುವ ಚೆಲುವಿನ ಗಣಿ. ಅದರ ಬಣ್ಣನೆಯ ಕವನ ಮಕ್ಕಳ ಬುದ್ಧಿಭಾವಗಳನ್ನು ಬೆಳೆಸುವ ಹಾಡಾಗಿದೆ.

'ಪಾತರಗಿತ್ತೀ ಪಕ್ಕಾ
ನೋಡಿದೇನs ಅಕ್ಕಾ !

ಹಸಿರು ಹಚ್ಚಿ ಚುಚ್ಚಿ

ಮೇಲsಕರಿಸಿಣ ಹಚ್ಚಿ,

ಹೊನ್ನ ಚಿಕ್ಕಿ ಚಿಕ್ಕಿ
ಇಟ್ಟು ಬೆಳ್ಳೀ ಅಕ್ಕಿ,

ಸುತ್ತೂ ಕುಂಕುಮದೆಳಿ
ಎಳೆದು ಕಾಡಿಗೆ ಸುಳಿ,

ಗಾಳೀ ಕೆನೀಲೇನs
ಮಾಡಿದ್ದಾರ ತಾನ !

* * *

ಕಾಣದೆಲ್ಲೊ ಮೂಡಿ
ಬಂದು ಗಾಳಿಗೂಡಿ,

ಇನ್ನು ಎಲ್ಲಿಗೋಟ ?
ನಂದನದ ತೋಟ !' ('ಪಾತರಗಿತ್ತಿ ಪಕ್ಕ' : ಗರಿ)

ಕಾಣದೆಲ್ಲೊ ಮೂಡಿಬಂದು, ಗಾಳಿಗೂಡಿ ಹೋದ ಚಿಟ್ಟೆ ದೇವಲೋಕದ ನಂದನದ ತೋಟಕ್ಕೆ ಓಡಿಹೋಗುತ್ತಿದೆ ಎಂದು ಬಣ್ಣಿಸುತ್ತಾ ಕವಿವರ್ಯರು ಮಕ್ಕಳನ್ನು ನಂದನದ ತೋಟಕ್ಕೆ ಕೊಂಡೊಯ್ಯುತ್ತಾರೆ.

**ಮಾತಾ-ಸೂತ್ರವು ನನ್ನ ಪೋಣಿಸಿತು**

ಸಂಪ್ರದಾಯಸ್ತ ಬ್ರಾಹ್ಮಣ ಮನೆತನದ ತಾಯಿ ಅಂಬವ್ವ ದೇವರು, ಧರ್ಮ, ನೀತಿಯ ಸಂಸ್ಕಾರದಲ್ಲಿ ಬೆಳೆದವಳು. ಆಕೆಗೆ ತನ್ನ ಮಗ ದತ್ತಾತ್ರೇಯ ದೇವರ ಮೇಲೆ ಕವನ ರಚಿಸದೆ, ಜನಸಾಮಾನ್ಯರ ಸಾಧಾರಣ ಘಟನೆಯ ಮೇಲೆ ಕವಿತೆ ಬರೆಯುತ್ತಿರುವುದರಿಂದ ಬೇಸರವಾಗಿತ್ತು. 'ಗುಬ್ಬಿ ಕಾಗೆಯ ಪದ್ಯ ಯಾ ಕವನ ?' - ಗುಬ್ಬಿ ಕಾಗೆಯನ್ನು ಕುರಿತು ಬರೆದದ್ದು ಯಾವ ಸೀಮೆಯ ಕವನ ಎಂದು ಪ್ರಶ್ನಿಸಿದ್ದಳು. ಗುಬ್ಬಿ ಕಾಗೆ ಯಃಕಶ್ಚಿತ್ ಜೀವಿಗಳು. ಆದರೆ ಬೇಂದ್ರೆಯವರು ಕಾವ್ಯದ ವಸ್ತುವನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಿದ್ದುದು ಅವುಗಳನ್ನೇ. ಬೇಂದ್ರೆಯವರು ಉನ್ನತವಾದುದನ್ನು ಕಾವ್ಯವಸ್ತುವನ್ನಾಗಿ ತೆಗೆದುಕೊಳ್ಳಬೇಕು ಎಂಬ ಪರಂಪರಾಗತ ಪದ್ಧತಿಯನ್ನು ಬದಿಗಿಟ್ಟು ಅವನತವಾದುದನ್ನು ಆಯ್ಕೆ ಮಾಡಿಕೊಂಡಿದ್ದು ಅವರ ಸಾಮಾಜಿಕ ಕಳಕಳಿಯ ದ್ಯೋತಕವಾಗಿದೆ. ಕುವೆಂಪು ಅವರು ಗೊಬ್ಬರದ ಮೇಲೆ ಕವನ ಬರೆದರು. ರೈತನು ಬೆಳೆಗೆ ಬಳಸುವ ಗೊಬ್ಬರವನ್ನು ಅಲಕ್ಷಿಸಲಿಲ್ಲ. ಬೇಂದ್ರೆ ಮತ್ತು ಕುವೆಂಪು ಅವನತ ವಸ್ತುಗಳನ್ನು ಆಯ್ಕೆ ಮಾಡಿಕೊಂಡದ್ದುದರಲ್ಲಿಯೇ ಅವರ ಸರ್ವಸಮಾನತಾ ಗುಣ ಕಂಡುಬರುತ್ತದೆ. ಆಗಿನ ಕಾಲದಲ್ಲಿ ಆ ಉನ್ನತ ಅವನತದ ತರತಮ ಸಲ್ಲ ಎಂಬ

ಸರ್ವಸಮಾನ ದೃಷ್ಟಿ ಇಬ್ಬರಲ್ಲೂ ಒಂದೇ ಕಾಲಮಾನದಲ್ಲಿ ಅಂಕುರಿಸಿರುವುದನ್ನು ಕಾಣಬಹುದು.

ಆ ಸರ್ವಸಮಾನ ದೃಷ್ಟಿ, ಸರ್ವೋದಯ ತತ್ವ ಎಲ್ಲರಿಗೂ ಒಪ್ಪಿಗೆಯಾಗುವಂತಹುದು. ಆದ ಕಾರಣ ಮಗ ಬರೆದ ಕವನವನ್ನು ಆತ ಲಯಬದ್ಧವಾಗಿ, ಸಾಭಿನಯವಾಗಿ ಹಾಡಿದ್ದನ್ನು ಕೇಳಿದ ತಾಯಿಯ ಮನಸ್ಸು ಉತ್ಸಾಹ ಪಡೆದಿತ್ತು. 'ನನ್ನ ಕವಿತೆಯ ಕೇಳಿ । ಉತ್ಸಾಹ ಪಡೆದಿತ್ತು - ತಾಯಿಮನ' ಎಂಬುದು ಬೇಂದ್ರೆಯವರ ಹೆಮ್ಮೆಯಾಗಿತ್ತು.

ಬೇಂದ್ರೆಯವರ ಮೊದಲ ಪ್ರಕಟಿತ ಕೃತಿ ಕೃಷ್ಣಾಕುಮಾರಿ (೧೯೨೨). ಅದು ಷಟ್ಪದಿ ಕಾವ್ಯ. ಆಖ್ಯಾನಕಾವ್ಯವಾಗಿದೆ. ಕೃಷ್ಣಾಕುಮಾರಿ ಉದಯಪುರದ ರಾಜ ರಾಣಾ ಭೀಮಸಿಂಹನ ಮಗಳು. ಅವಳ ಆತ್ಮಹತ್ಯೆಯ ದಾರುಣಕಥೆ ಅದು. ಅವಳು ರಜಪೂತ ರಮಣಿಯರ ಲಾವಣ್ಯಲತೆಗೆ ಬಿಟ್ಟ ಹೂವಿನಂತಿದ್ದಳು. ಅವಳು ಪ್ರೀತಿಸಿ ವರಿಸಬೇಕೆಂದಿದ್ದ ಜೋಧಪುರದರಸನು ಸಾಯುವನು. ಅನಂತರ ಅವಳನ್ನು ಜಯಪುರದ ಜಗತ್ಸಿಂಹನಿಗೆ ಕೊಡಲು ಭೀಮಸಿಂಹ ಒಪ್ಪುವನು. ಅಷ್ಟರಲ್ಲಿ ಜೋಧಪುರದ ಅರಸನಾಗಿ ಬಂದ ಮಾನಸಿಂಹನು ಕುಟಿಲನೀತಿಯಿಂದ ಭೀಮಸಿಂಹನನ್ನು ಸೋಲಿಸುವನು. ಭೀಮಸಿಂಹ ನಿಸ್ಸಹಾಯಕನಾಗುವನು. ಜಗತ್ಸಿಂಹ ಮತ್ತು ಮಾನಸಿಂಹರಲ್ಲಿ ಯುದ್ಧವಾಗಿ ಇಬ್ಬರೂ ನಂದಿದಂತಾಗುವರು. ಅದೇ ಸಮಯಕ್ಕೆ ರಜಪೂತ ಸ್ಥಾನಕ್ಕೆ ವಿಧಿಯಂತೆ ಅಮೀರಖಾನ ಬರಲು, ನಿರುಪಾಯಳಾದ ಕೃಷ್ಣಾಕುಮಾರಿ ವಿಷಕುಡಿದು ಮಡಿಯುವಳು. ಸಾವನ್ನು ಬರಮಾಡಿಕೊಂಡ ಮುಗ್ಧೆ ಕೃಷ್ಣಾಕುಮಾರಿಯ ಮನಮಿಡಿತವು 'ಕೃಷ್ಣಾಕುಮಾರಿ' ಕಾವ್ಯವಾಗಿದೆ.

ಬೇಂದ್ರೆಯವರು ಆ ಕಾವ್ಯಕ್ಕೆ ಮಂಗಳ ಹಾಡುತ್ತ ಹೀಗೆ ಪ್ರೇಮದರ್ಶನವನ್ನು ನೀಡಿದ್ದಾರೆ:

'ಪ್ರೇಮಲತೆ ! ಮೂರ್ತಿಮಾನ್ ಪ್ರೇಮಲತೆಯೇ ನಿನ್ನ
ಕಾಮಲತೆಯೆಂದು ಕಾಮಿಸಿದರೌ ! ನಿನ್ನನ್ನು
ಹೋಮಿಸಿದರೌ ಕುಸುಮ ಸುಕುಮಾರರ ಕುವರಿಯೇ ಕಾಮಾಗ್ನಿ ಹೋತ್ರದಲ್ಲಿ
ಸೋಮಾನನೆ ! ಪದ್ಮ-ಪಾದ-ರಜ-ಪೂತರೀ
ಭ್ರಾಮಿಸಿದ ರಜಪೂತರೀಗ ಬೀಳಲಿಯೆಂದು
ನೇಮಿಸಿದನೌ ವಿಧಿಯು, ದೇವ ಭುಕ್ತಳಿದಾಗು ಹೋಗು ಸೌಭಾಗ್ಯವೇ ಭಾವೇ!'

ಅದು ಕೋಮಲ, ಮುಗ್ಧ ರಜಪೂತ ಕುವರಿ ಕೃಷ್ಣಾಕುಮಾರಿಯ ಕರುಣ ಕಥೆ. ಅದನ್ನು ಕೇಳಿ ತಾಯಿಯ ಮನ 'ಮರಗಿತ್ತು' ಅಂದರೆ ಮರುಗಿತ್ತು, ವ್ಯಥೆ ಪಟ್ಟಿತ್ತು ; ನೋವಿನಿಂದ ಕುದಿಯಿತು. ಆ ಹಾಡು, ಈ ಕವನ ಬರೆದು ತಾನು ಹೇಳುವುದು, ತಾಯಿ ಕೇಳುವುದು 'ದಿನದಿನ ಅಸರಂತ' ಅಂದರೆ ಒಂದೇ ಸಮನೆ continuous ಆಗಿ ನಡೆದಿತ್ತು. ಅದು ಒಂದು ರೀತಿಯಲ್ಲಿ ಹುಡುಗಾಟ ಎನಿಸಿತ್ತು- ಎಂದು ಇಳಿ ವಯಸ್ಸಿನಲ್ಲಿ ಮೆಲುಕು ಹಾಕಿದ್ದಾರೆ. ತಾನು ಬರೆದು ಕವಿಯಾಗಿ ಮಾರ್ಪಡುತ್ತಿದ್ದುದರ ಕ್ರಿಯಾಶೀಲತೆಗೆ 'ಹುಡುಗಾಟವೆನಿಸಿತ್ತು

ಹೇಳುವುದೇ ?' ಎಂದು ಪ್ರಶ್ನೆ ಹಾಕಿಕೊಂಡಿದ್ದಾರೆ. ಆ ಪ್ರಶ್ನೆಯಲ್ಲಿ ಆ ರೀತಿ ಹುಡುಗಾಟವೆಂದು ಹೇಳಲು ಆಗುವುದೇ ? ಎಂಬ ಪ್ರಶ್ನೆ ಉಂಟಾಗುತ್ತದೆ. ಆ ಪ್ರಶ್ನೆಯಲ್ಲಿ ಹಾಗಲ್ಲ ಎಂಬ ಉತ್ತರ ಅಡಗಿದೆ. ಜೊತೆಗೆ ಹೇಳುವುದೇ, ಕವನ ರಚಿಸುವುದೇ ಹುಡುಗಾಟವಾಗಿತ್ತು ಎಂಬ ಅರ್ಥವನ್ನು ಹೊಂದಿದೆ. ಇದು ಬೇಂದ್ರೆಯವರು ಶ್ಲೇಷಾರ್ಥವನ್ನು ಪದಗಳಿಂದ ಹೊಮ್ಮಿಸುವ ಜಾಣ ಪ್ರಯೋಗ.

'ಕೃಷ್ಣಾಕುಮಾರಿಯ ಕತೆ ಕೇಳಿ ಮರಗಿತ್ತು
ಕವನ ಕಟ್ಟಿದ ಮೇಲೆ ಕೇಳುವುದೇ?
ಆ ಹಾಡು, ಈ ಕವನ, ದಿನದಿನ ಅಸರಂತ
ಹಾಡುಗಾಟವೆನಿಸಿತ್ತು ಹೇಳುವುದೇ?'

ಅವರ ಮನೆಯಲ್ಲಿ ದಿನನಿತ್ಯ ನಡೆಯುತ್ತಿದ್ದ ವಿದ್ಯಮಾನವೆಂದರೆ ಪಾರಿಜಾತದ ಹಾಡು, ದಾಸರ ಪದಗಳು, ಪುರಾಣ ವಾಚನವಾಗಿ ಅದು ಆ ಕುಟುಂಬದ ಧಾರ್ಮಿಕ ಮತ್ತು ಸಾಂಸ್ಕೃತಿಕ ಮುಖವನ್ನು ಸೂಚಿಸುತ್ತದೆ. ಆ ತಾಯಿಯ ಜಪತಪ ಮನಸ್ಸನ್ನು ನಿಗ್ರಹಿಸಿ ಇಂದ್ರಿಯಗಳ ವಿಜಯವನ್ನು ಸಾಧಿಸಿದ್ದರ ಜೀವನನಿಷ್ಠೆಯನ್ನು ಪರಿಚಯಿಸುತ್ತದೆ. ಆಕೆಯ ಅಂತರ್ಮುಖತೆಯು ಸಂಪೂರ್ಣ ಅಧ್ಯಾತ್ಮಕೇಂದ್ರಿತವಾದ ಮನಸ್ಸನ್ನು ತಿಳಿಸುತ್ತದೆ. ಅವೆಲ್ಲವೂ ತಾಯಿಯು ಮಗನಿಗೆ ಚಿಂತನ ಮಂಥನಗೊಳ್ಳಬೇಕಾದ ಮಾರ್ಗೋಪಾಯದ ಸಾಧಕಳಾಗಿದ್ದುದರ ಪ್ರತೀಕವಾಗಿದೆ. ಆ ಕಾರಣವಾಗಿ ಬೇಂದ್ರೆ ನುಡಿದಿದ್ದಾರೆ : 'ನನ್ನ ಜೀವನದಲ್ಲಿ ಪೌರುಷ ನಿಮಿತ್ತ ಮಾತ್ರ. ದೈವಾವಲಂಬನವೇ ನನಗೆ ಎಚ್ಚರದ ದನಿಯಾಗಿಬಿಟ್ಟಿದೆ.'[೨೦] ಬೇಂದ್ರೆಯವರು ಆ ಉನ್ನತ ಚಿಂತನಾಸ್ತರದ ಕಾರಣದಿಂದ ಸರ್ವಸಮಾನತೆ, ಸಮಬಾಳು ಹಾಗೂ ಜನಪದರ ಸಹಜ ಬದುಕಿನ ಬಗ್ಗೆ ಒಲಿದರು. ಅವರ ಕಾವ್ಯ ಸಂಪ್ರದಾಯದ ಒಡಲಿನಿಂದಲೇ ವಿಕಾಸಗೊಂಡು ಸ್ವೋಪಜ್ಞತೆಯತ್ತ ಸಾಗಿ ವಿಶಾಲ ಜಗತ್ತನ್ನು ಆವರಿಸಿಕೊಂಡಿತು.

ತಾಯಿಯವರ ಧಾರ್ಮಿಕ ನಂಬಿಕೆಯಿಂದ ಬೇಂದ್ರೆಯವರು ಆಗಾಗ ನಡೆಯುವ ಜಾತ್ರೆಗೆ ಹೋಗುತ್ತ, ಒಂದು ಸಲ ಯಾತ್ರೆ ಕೈಗೊಂಡಿದ್ದರು. ಅದರಿಂದ ಆ ಧರ್ಮದ ಸೂತ್ರದ ಮಾಲೆ ಅವರನ್ನು ತನ್ನಲ್ಲಿ ಒಂದಾಗಿಸಿಕೊಂಡಿತು. ಆ ರೀತಿ ಧರ್ಮದ ಭಾಗವಾಗಿ ಹೋಗುತ್ತಿರುವ ಬಾಲ್ಯದಲ್ಲಿಯೇ ಅವರು ಕವಿಯಾಗುವಿಕೆಯೂ ನಡೆದಿತ್ತು. ಅವರು ಕವಿ ರವೀಂದ್ರನಾಥ ಠಾಗೂರ್, ಯೋಗಿ ಶ್ರೀ ಅರವಿಂದ, ಐರಿಷ್ ಕವಿ ಜಾರ್ಜ್ ರಸೆಲ್(ಎ.ಈ), ಖಲೀಲ್ ಜಿಬ್ರಾನ್‌ರನ್ನು ತನ್ನ ನಾಲ್ವರು ಗುರುಗಳೆಂದು ಕರೆದುಕೊಂಡಿದ್ದಾರೆ. ಮೊದಲ

---

೨೦ ದ.ರಾ. ಬೇಂದ್ರೆ, ಸಾಹಿತ್ಯದ ವಿರೂಟ್ ಸ್ವರೂಪ, ಪೂರ್ವೋಕ್ತ, ಪು. ೪೪

ಇಬ್ಬರು ಗುರುಗಳನ್ನು ಕುರಿತು 'ಉಭಯವು ಅಭಯವಾದುದನ್ನು ನನ್ನಿಬ್ಬರು ಗುರುಗಳಲ್ಲಿ ಕಂಡೆ ಎರಡು ಕಣ್ಣು ಒಂದು ನೋಟ. ರವಿ ಉದಯದಿಂದ ಅರವಿಂದ ಅರಳಿತು'[೨೧] ಎಂದಿದ್ದಾರೆ. ಇನ್ನಿಬ್ಬರು ಗುರುಗಳ ಬಗ್ಗೆ " 'ಎ.ಈ' ಕವಿ ನನ್ನ ಜೀವನದ ಲೋಲಕದಲ್ಲಿ ಕಿರಣದಂತೆ ಸೇರಿದ್ದಾನೆ ; ಜಿಬ್ರಾನ ನನಗೆ ಎಣ್ಣೆ ಮಜ್ಜನ ಮಾಡಿಸಿ ಎರೆದು ತೊಟ್ಟಿಲ ನಿದ್ರೆಯಲ್ಲಿಯೇ ಕನಸಿನ ಆಕಾಶಕ್ಕೆ ಎತ್ತೆತ್ತಿ ಒಯ್ದಿದ್ದಾನೆ"[೨೨] ಎಂದು ಸ್ಪಷ್ಟಪಡಿಸಿದ್ದಾರೆ.

**ಗುರುದೇವ**

ಬೇಂದ್ರೆಯವರು ಶಿಕ್ಷಕರಾಗಿದ್ದಾಗ ರವೀಂದ್ರರ ಕಾವ್ಯಕ್ಕೆ ಮರುಳಾಗಿ, ಅದರಲ್ಲಿಯೇ ತಲ್ಲೀನರಾಗಿದ್ದುದನ್ನು 'ಸಾಹಿತ್ಯದ ವಿರಾಟ್‌ಸ್ವರೂಪ'ದಲ್ಲಿ ವಿವರವಾಗಿ ದಾಖಲಿಸಿದ್ದಾರೆ. 'ವ್ಯಕ್ತಿ-ಸಮಷ್ಟಿ ಪರಸ್ಪರ ಪೋಷಕ, ಪೂರಕ; ಪೂರ್ಣದಿಂದ ಪೂರ್ಣದತ್ತ ಪರಿವರ್ಧಿಸುವ ಸಂಬಂಧ ಎಂದು ಆಗದಿದ್ದರೆ, ಜೀವನವೇ ವಿಕೃತಿಯಾಗುತ್ತದೆ. ಈ ಎಚ್ಚರವನ್ನು ನನಗೆ ಮೊದಲು ಸ್ಪಷ್ಟವಾಗಿ ತಂದುಕೊಟ್ಟ ಸಾಹಿತಿ ರವೀಂದ್ರನಾಥ ಠಾಗೋರ್‌ರವರು. ಠಾಗೋರರ ಶಿಶುಕಾವ್ಯ, ಪ್ರಣಯಗೀತೆಗಳು, ಸಣ್ಣಕಥೆಗಳು, ಅವರ ನಾಟಕದೊಳಗಿನ ಮುದುಕರು, ಅವರ ಲೇಖನದೊಳಗಿನ ಸಂವಾದ ಸರಣಿ ಇವೆಲ್ಲವೂ ನನಗೆ ವಿವಿಧ ಬೋಧ ತಂದಿವೆ. ಶ್ರೀ ಅರವಿಂದ ಜ್ಞಾನವು ಗುರುದೇವನ ಭಕ್ತಿ ಭಣಿತಿಗಳಿಂದ ನನ್ನಲ್ಲಿ ತಲೆದೋರಿತು' 'ಅವರ ಆಂಗ್ಲಾನುವಾದಗಳನ್ನು ವಿದ್ಯಾರ್ಥಿಗಳಿಗಾಗಿ ಮಾಡುವುದು, ಅವರ ಉಕ್ತಿಗಳನ್ನು ಗುಣುಗುಣು ಹೇಳಿಕೊಳ್ಳುವುದು ಕೆಲದಿನದ ಕ್ರೀಡೆಯಾಗಿತ್ತು ನನಗೆ. ಜಯದೇವನ ವಚೋಲಹರಿಯು ತೂಗುಯ್ಯಾಲೆಯಲ್ಲಿ ನನ್ನನ್ನು ಎತ್ತೋ ಒಯ್ದಿದ್ದಿತು. ಅವರ ಕಥಾವಾಚನದಿಂದ ನನ್ನಲ್ಲಿ ರಸೋಮಯ ಪರಿಣತಿಯುಂಟಾಯಿತು. ಕಾಬೂಲಿವಾಲಾ, ಪೋಸ್ಟಮಾಸ್ಟರ, ಬಾಬೂಜ ಆಫ್ ನಾಯಂಜೋರ ಏನು ಕಥೆಗಳವು ? ಗಿಡದ ನೆರಳಿನಲ್ಲಿ ; ಗುಡ್ಡದ ವಾರಿಗಳ ಮೇಲೆ; ಎತ್ತಿನ ಬಂಡಿಯಲ್ಲಿ ; ಹಳ್ಳದ ದಂಡೆಯಲ್ಲಿ - ಎಲ್ಲಿರಲಿ ಅಲ್ಲಿ ಯಾರಿಗಾದರೂ ಗಟ್ಟಿಸಿ ಓದಿ ಹೇಳುವದು, ನನಗೆ ಅಮಿತಾನಂದ. 'ಕ್ರಿಸೆಂಟ ಮೂನ' ತಾಯಿಗೆ ಓದಿ ಹೇಳಿದೆ ; ಕತೆಗಳನ್ನು ಎಳೆಯ ಗೆಳೆಯರಿಗೆ ಹೇಳಿದೆ'. ಪ್ರಬಂಧ ನಾನೇ ಓದಿಕೊಂಡೇ ; ಅವರ ಗೀತೆಗಳನ್ನು ಕುರಿತು ಪ್ರವಚನ ಮಾಡಿದೆ ಜನ ಸಮೂಹಕ್ಕೆ - ಇವೆಲ್ಲವೂ ರವೀಂದ್ರರ ಕಾವ್ಯ ಪ್ರಕೃತಿ ಪೂಜೆಗಿಂತ ಅವರ ಸಾಧಕ ಪುರುಷನ ಧ್ಯಾನ-ಸಮಾಧಿಗಾಗಿ'[೨೩]

---

೨೧ ಅದೇ, ಪು. ೧೦೭

೨೨ ಅದೇ, ಪು. ೯೮

೨೩ ಅದೇ, ಪು, ೧೧೬, ೧೧೯

'ರವೀಂದ್ರ ಶಿಶುಗೀತ, ಮತ್ತೆ ಕಥಾನಕ
ಮಂತ್ರಿಸೆ ಕವಿನಾಮ ಕಾಣಿಸಿತು'

ಈ ನುಡಿಯಲ್ಲಿ 'ಮಂತ್ರ' ನಾಮಪದವು 'ಮಂತ್ರಿಸೆ' ಕ್ರಿಯಾಪದವಾಗಿದೆ. ರವೀಂದ್ರರ ಶಿಶುಗೀತ, ಕಥಾನಕಗಳನ್ನು ಮಂತ್ರಪಠನದಂತೆ ಮನನ ಮಾಡಿಕೊಂಡುದರಿಂದ ತಾನು ಕವಿಯಾಗಬಲ್ಲೆ ಎಂಬ ಸ್ಥೂಲಚಿತ್ರ ತನಗೆ ಬಾಲ್ಯದಲ್ಲಿಯೆ ಮೂಡಿತು ಎಂದಿದ್ದಾರೆ. ಅವರಿಗೆ ಅಸ್ಪಷ್ಟವಾಗಿ ತಾನು ಕಾವ್ಯಲೋಕಕ್ಕೆ ಕಾಲಿಡಬಲ್ಲೆ ಎಂಬ ಭಾವ ಮೊಳಕೆಯೊಡೆಯಿತು ಎಂಬುದು 'ಕಾಣಿಸಿತು' ಎಂಬ ನುಡಿಯಲ್ಲಿದೆ. ಹಾಗೆ ಕಾಣಿಸಿತೊ ಕೇಳಿಸಿತೊ ಅಂತೂ 'ಲಲನಾ ಚಕ್ರಕ್ಕೇರಿ' ಅಂದರೆ ನಾಲಗೆಯ ಚಕ್ರಕ್ಕೇರಿ (ಬೇಂದ್ರೆಯವರು ನಾಲಗೆಯನ್ನು ಚಕ್ರ ಎಂದು ಕಲ್ಪಿಸಿಕೊಂಡಿದ್ದಾರೆ) ತನ್ನ ಒಳಗಿವಿಗೆ ಮಂತ್ರೋಪದೇಶವನ್ನು ಮಾಡಿಸಿತ್ತು. ಮೊದಲಿದ್ದ ಅಸ್ಪಷ್ಟ ತೂಗುಯ್ಯಾಲೆಯ ಸ್ಥಿತಿಯನ್ನು ನಿಶ್ಚಿತರೂಪಕ್ಕೆ ತರುತ್ತಾ - 'ಮಂತ್ರವನ್ನೂದಿತು ಒಳಕಿವಿಗೆ' ಎಂಬುದು ಸ್ಪಷ್ಟವಾಗಿದೆ. ಅದು ತನ್ನದೇ ಆದ ಆತ್ಮಭರವಸೆಯ ಮಂತ್ರೋಪದೇಶ. ಆಗ ಕವಿ ನುಡಿದಿದ್ದಾರೆ :

'ಅಂಬಿಕಾತನಯನ ಕಂಚುಕ ತೆರೆಯುವದೆ
ಕರ್ಮವಾಗಿತ್ತಾಗ ಒಳಕವಿಗೆ'

ಒಳಗಡೆ ಕವಿಯ ಅಂಕುರವಾಗಿ ಕಾವ್ಯ ತನ್ನಲ್ಲಿ ಮೂಡಿರುವುದು 'ಕರ್ಮವಾಗಿತ್ತಾಗ'. ಒಂದು ಅವರಣದೊಳಗೆ ಎಲೆಮರೆ ಕಾಯಿಯಂತಿದ್ದ 'ಅಂಬಿಕಾತನಯ'ನನ್ನು ಅನಾವರಣ ಮಾಡುವುದೆ ಒಳಕಿವಿಯ ನಿರಂತರ ಕೆಲಸವಾಗಿತ್ತು. ತನ್ನ ಕಾವ್ಯನಾಮುವನ್ನು 'ಅಂಬಿಕಾತನಯದತ್ತ' ಎಂದು ಕರೆದುಕೊಂಡು ಹೆಮ್ಮೆಪಟ್ಟಿತು. "ಅಂಬಿಕಾತನಯದತ್ತ' ಈ ಹೆಸರಿನಿಂದ ಮೊದಲ ಕವಿತೆ ಮುದ್ರಿತವಾದದ್ದು ೧೯೧೮ ಶ್ರಾವಣದಲ್ಲಿ ; 'ಪ್ರಭಾತ' ಮಾಸಿಕದ ಮೊದಲ ಸಂಚಿಕೆಯಲ್ಲಿ. ಯಾರ ಚತುರ್ಮುಖತೆಗೂ ನೆಲೆ ಭಗವದ್ವಚನ ; ವಿಷಯಗಳಾಚೆ ಇಂದ್ರಿಯಗಳಿವೆ ; ಇಂದ್ರಿಯಾಗಳಾಚೆ ಮನ ; ಮನದಾಚೆ ಬುದ್ಧಿ ; ಬುದ್ಧಿಯಾಚೆಗೆ 'ಸಃ': ರಸಃ ; ರಸೋ ವೈ ಸಃ ! ರಸೋಸ್ಮಿತೆಯ ಸಾಧನೆ 'ಅಂಬಿಕಾತನಯದತ್ತ'ನ ಕಾವ್ಯ"[೧೪]

ಬೇಂದ್ರೆಯವರು ತಾಯಿ ಮತ್ತು ಗೆಳೆಯರನ್ನು ಸದಾ ನೆನೆಯುತ್ತಿದ್ದರು. ಮಾತೃವಾತ್ಸಲ್ಯದ ಹದ(ಪಾಕ)ಕ್ಕೆ ಗೆಳೆಯರ ಆತ್ಮೀಯರ ಕಾವು ಕೂಡಿ 'ಬದುಕಿಗೆ ರುಚಿ ಇತ್ತು ಅನ್ಯೋನ್ಯವು'. ಸ್ನೇಹಿತರ ಬಿಸುಪು ಬೆಚ್ಚನೆಯ ಆಹ್ಲಾದಕರ ಸ್ನೇಹ, ಸ್ವಾದಮಯವಾಗಿ ಕಾಂತಿಯುತವಾಗಿತ್ತು. ತನ್ನದು ಸಮಾನ್ಯ ಮನೆತನ, ಚಿಕ್ಕ ಸಂಬಳವಾದುದರಿಂದ ಸಂಸಾರದ ಸಕಲ ಜವಾಬ್ದಾರಿ

---

೨೪ ಅದೇ, ಪು. ೫೮, ೫೯

ಕೆಲಸಗಳು ಈಡೇರುತ್ತಿರಲಿಲ್ಲ. ಅನುಕೂಲಸ್ಥ ಚಿಕ್ಕಪ್ಪನ ಆಶ್ರಯದ ನೆರವು ಇದ್ದುದರಿಂದ ತನ್ನ ಸಂಸಾರ ಸಾಗುತ್ತಿತ್ತು ಎಂದು ಬದುಕಿನ ಪರಿಪಾಟಲಿನ ಹೆಜ್ಜೆ ಗುರುತುಗಳನ್ನು ಅವರು ದಾಖಲಿಸಿದ್ದಾರೆ.

**ಕನ್ನಡ ಕತ್ತೂರಿ ಬೀರಿಸಿದ್ದೆ**

ಬೇಂದ್ರೆಯವರು ಕನ್ನಡ ಪದಗಳ ಮರ್ಮಗಳನ್ನು ಅರಿತು ಅವುಗಳನ್ನು ತಿದ್ದಿ ಮಿದ್ದಿ, ನಾದಿ ಕಾವ್ಯವಾಗಿಸಿರುವುದೇ ಒಂದು ಕುತೂಹಲ. ಅವರು ಅದನ್ನು 'ಹಾಡುವುದೆ ಚಟವಾಗಿ, ಹಾಳಿಹಡಗಕ್ಕಾಗಿ । ಗಾಳಿಗೆ ಪಟವಾಗಿ ಏರಿಸಿದ್ದೆ' ಎಂದಿದ್ದಾರೆ. ಕನ್ನಡ ಕವನವನ್ನು ರಚಿಸುತ್ತಾ ಹಾಡುವುದನ್ನೇ ಚಟವಾಗಿಸಿಕೊಂಡು ಈ ಕಾವ್ಯವನ್ನು ಹಾಳೆಯಿಂದ ಮಾಡಿದ ಹಡಗನ್ನಾಗಿಸಿ, ಗಾಳಿಯಲ್ಲಿ ಹಾರುವ ಪಟವಾಗಿಸಿ, ಅದಕ್ಕೆ ನಡೆದು ತೇಲುವ, ಹಾರಿ ಏರುವ ಗಗನಗಾಮಿಯಾಗುವ ಚೈತನ್ಯ ನೀಡಿದರು. ಶಿವಪುಷ್ಪವನ್ನು ಅಂದರೆ ಮಂಗಳಮಯ ಚಿಂತನೆಯನ್ನು ದತ್ತನಾಗಿ ತೂರಿದರು. (ದತ್ತು + ತೂರು = ದತ್ತೂರಿ). ತನಗಾಗಿ ಇರುವ ಕಾವ್ಯ ತುತ್ತೂರಿಯಿಂದ ಅದನ್ನು ಮೊಳಗಿಸಿದರು. ಕನ್ನಡ ಕಸ್ತೂರಿಯ ಪರಿಮಳವನ್ನು ಸುತ್ತಲೂ ಪಸರಿಸಿದರು :

'ಶಿವಪುಷ್ಪ ದತ್ತೂರಿ ನನಗಾಗಿ ತುತ್ತೂರಿ
ಕನ್ನಡ ಕತ್ತೂರಿ ಬೀರಿಸಿದ್ದೆ'

'ಗೀತಗೋವಿಂದ' ಜಯದೇವ ಕವಿಯಿಂದ ರಚಿತವಾದ ಕಾವ್ಯ. ಅದರಲ್ಲಿ ಶ್ರೀಕೃಷ್ಣನ ಚರಿತ್ರೆಯ ವರ್ಣನೆಯಿದೆ. ಅದನ್ನು ಅವರು ಹಾಡಿ ಹುಚ್ಚಾದರು. ಅದರಲ್ಲಿ ಲೀನವಾದರು. ಶಂಕರಾಚಾರ್ಯರ ಸ್ತೋತ್ರಕ್ಕೆ ವಶವಾದರು. ಜಗನ್ನಾಥ ಪಂಡಿತನು ರಚಿಸಿದ ಗಂಗಾನದಿಯ ಸ್ತೋತ್ರ 'ಗಂಗಾಲಹರಿ'ಯನ್ನು ಮೆಚ್ಚಿಕೊಂಡು ಅದರಿಂದ ಪ್ರಭಾವಿತರಾದರು. ಅದು ಮುಂದೆ ಕನ್ನಡದ 'ಗಂಗಾವತರಣ'ವಾಗಿ ಅವರಿಂದ ಹೊಮ್ಮಿ ಕನ್ನಡ ರಸಿಕರ ಆರ್ದ್ರ ಕವನವಾಯಿತು.

ಅವರು 'ಮೂಕ ಪಂಚಾಶತಿ', ಕ್ಷೇಮೇಂದ್ರನ ಕಥಾಸರಿತ್ಸಾಗರ, ಬಳ್ಳಾರಿ ಛಾಪೆಖಾನೆಯಲ್ಲಿ ಮುದ್ರಿತವಾದ 'ಶುಕಸಪ್ತತಿ'ಗಳನ್ನು ಓದಿ ಅವುಗಳಿಂದ ಪ್ರಭಾವಿತರಾದರು. 'ಬತ್ತೀಸಪುತ್ತಳಿ', ಬೀರಬಲ್ಲನ ಕಥಾ ಸಮೂಹ, ಬರ್ಥೋಲ್ಡನ ಕಥಾ ಸರಣಿ ಅವರ ಮೇಲೆ ಪರಿಣಾಮವನ್ನುಂಟು ಮಾಡಿದವು. ಒಬ್ಬ ವ್ಯಕ್ತಿ ನಿಜಕ್ಕೂ ಉತ್ತಮವಾಗಿ ಬೆಳೆಯಬೇಕಾದರೆ ಯಾವುದನ್ನೂ ಅಲಕ್ಷಿಸದೆ ಜಳ್ಳು ಬಿಟ್ಟು ಕಾಳನ್ನು ಆರಿಸಿಕೊಳ್ಳಬೇಕು. ಬಾಲ್ಯದಲ್ಲಿ ಅವರು ರಾಜರ ಕತೆಗಳು, ಕಳ್ಳಸುಳ್ಳರ ಕತೆ, ಒಳ್ಳೆಯವರ ನೀತಿ ನಾಣ್ಣುಡಿ, (ನಾಡ + ನುಡಿ > ನಾಳ್ನುಡಿ > ನಾಣ್ಣುಡಿ > ಗಾದೆ), ಡೊಳ್ಳಿನ ಕತೆ ; ಜಗ ಜೊಳ್ಳಿನ ಕತೆ, ಜೊತೆಗೆ ಚವುಡಿಕೆಯವರ ಕತೆ ಹಾಡುಗಳನ್ನು ಗತ್ತಿನಲ್ಲಿ ಹಾಡುತ್ತಾ ಅರಿಷಿನ ಚಿಮ್ಮುವುದರಿಂದಲೂ ಪ್ರಭಾವಿತರಾದರು. ಹೀಗೆ ಅವರು ಜಾನಪದದ

ಸತ್ವಕ್ಕೆ ಮನಸ್ಸು ತೆರೆದುಕೊಂಡಿದ್ದರಿಂದ ಅವರಿಗೆ ವಿವಿಧ ಛಂದ, ಲಯ, ನಾದ ಪ್ರಾಪ್ತವಾಗಿದೆ. ಅದು ಅವರು ತೆರೆದ ಕಣ್ಣಿಂದ ಜನ ಜೀವನವನ್ನು ನೋಡಿ ತಿಳಿದ, ಅವರ ಬದುಕಿನೊಂದಿಗೆ ಒಂದಾದ ಅನುಭವವಾಗಿದೆ.

**ಮೈದುಂಬಿದಂತಾಗೆ ನಾನಂಬೆನೇ?**

ಗೊಂದಲಿಗರು ಗಡಿ ಭಾಗದ ಮರಾಠಿ ಮೂಲದ ಜನ. ಬೇಂದ್ರೆಯವರು ಅವರು ಬಾರಿಸುವ ಸಂಬಾಳದ ಸಿಡಿಮಿಡಿ ಶಬ್ದಕ್ಕೆ, ಜಗದಂಬೆಯನ್ನು ಮೈದುಂಬಿ ಹಾಡುವುದಕ್ಕೆ ಮೆಚ್ಚಿ ಅವರನ್ನು ಬರಮಾಡಿಕೊಂಡು ಆತ್ಮೀಯವಾಗಿರುತ್ತಿದ್ದರು.

‘ಗೊಂದಲಿಗರ ಗಡಿ ಸಂಬಾಳ ಸಿಡಿಮಿಡಿ
ಜಗದಂಬೆ ಎಂದೊಡನೆ ಹೋಗೆಂಬೆನೇ?
ಅವರಂತೆ ನಾನೆಂಬೆ, ನನ್ನಂತೆ ಅವರೆಂಬೆ
ಮೈದುಂಬಿದಂತಾಗೆ ನಾನಂಬೆನೇ?’

ಕಾವ್ಯದ ಈ ಭಾಗದಲ್ಲಿ ಪ್ರಾಸ ಸಹಜವಾಗಿ ಗೊಂದಲಿಗರ ಹೆಜ್ಜೆ ಕುಣಿತದಂತೆ ಕುಣಿಯುತ್ತ ಬಂದಿದೆ. ಬೇಂದ್ರೆಯವರು ‘ಹೋಗೆಂಬೆನೇ’ ‘ಅವರಂತೆ ನಾನೆಂಬೆ’ ‘ನನ್ನಂತೆ ಅವರೆಂಬೆ’ ಎಂದು ನುಡಿದಿರುವಲ್ಲಿ ಕೆಳವರ್ಗದ ಅನಾಗರಿಕ ಬಡಜನರನ್ನು ಕೀಳು ಎಂದು ಭಾವಿಸದೆ, ಅವರ ಹಾಡನ್ನು ಕೇಳುತ್ತ ಅವರ ಗೊಂದಲಿಗತ್ವ ಮೈದುಂಬಿದಾಗ ‘ನಾನಂಬೆನೆ’ ಎಂದಿದ್ದಾರೆ. ಬ್ರಾಹ್ಮಣತ್ವದ ಮೇಲೆ ಗೊಂದಲಿಗತ್ವ ಮೈದುಂಬಿದ್ದಾಗಿ ಬ್ರಾಹ್ಮಣತ್ವದ ‘ನಾನು’ ಬೇರೆ ಎನ್ನಲು ಸಾಧ್ಯವೆ? ನಾನು ಅವರಲ್ಲಿ ಒಂದಾಗಿ ಹೋಗಿರುವೆ. ನಾನು + ಅಂಬೆನೆ = ನಾನು ಹೇಳುವೆನೆ? ನಾನು ಅವರಿಗಿಂತ ಭಿನ್ನ ಎಂದು ಹೇಳುವೆನೆ? ‘ನಾನಂಬೆನೇ’ ನಾನು ನನ್ನಲ್ಲಿ ಉಂಟಾದ ಆ ಭಾವವನ್ನು ನಂಬುವುದಿಲ್ಲವೆ? ಎಂದು ಭಾಷೆಯನ್ನು ಹಲವು ಸ್ತರದಲ್ಲಿ ಅರ್ಥವಾಗುವಂತೆ ಬಳಸಿದ್ದಾರೆ. ಬೇಂದ್ರೆ ಕಾವ್ಯದ ಒಂದೇ ಶಬ್ದ ಬಿಡಿಸಿಕೊಂಡ ಹಾಗೆ, ಪದ ವಿಭಾಗ ಮಾಡಿಕೊಂಡ ಹಾಗೆ ಹಲವು ಅರ್ಥವನ್ನು ಸ್ಫುರಿಸುತ್ತದೆ.

ಹೀಗೆ ಜನಪದ ಕಲೆಯನ್ನು ಆತ್ಮೀಯವಾಗಿ ಅಂತಃಕರಣಪೂರ್ವಕವಾಗಿ ಅಭ್ಯಾಸ ಮಾಡಿರುವುದರಿಂದಲೇ ಅದರ ನಾಡಿಮಿಡಿತವನ್ನು ಅರಿತಿದ್ದುದರಿಂದ ಅವರ ಭಾವಗೀತೆಗಳಲ್ಲಿ ಜನಪದ ಸಂಸ್ಕೃತಿಯ ಕೆನೆಯನ್ನು ಕಾಣುತ್ತೇವೆ. ‘ನಾಡಿ’ ಸ್ಪಂದನದ ಉಗಮಸ್ಥಾನ. ಸ್ಪಂದನವನ್ನು ಮುಟ್ಟಿನೋಡಿದಾಗ ಅದು ಅನುಭವಗೋಚರ. ‘ತೊಟ್ಟು ಹಿಡಿದು ಮಾತಾಡಯ್ಯ’ ಎಂದು ಜನಪದರು ಹೇಳುತ್ತಾರೆ. ತೊಟ್ಟು > ತೊಡು > ತೊಡಗು ಪ್ರಾರಂಭವನ್ನು ಸೂಚಿಸುತ್ತದೆ. ತೊಟ್ಟು ಎಲೆಯ ಬುಡ, ಅದು ಬೇಕು. ಸಮಸ್ಯೆಯ ಮೂಲವನ್ನು ಹಿಡಿದು ಮಾತಾಡು ಎಂಬುದು ಜನಪದ ನುಡಿಯ ಅರ್ಥ.

ಈ ಮೇಲೆ ಸೂಚಿಸಿದ ಎಲ್ಲದರ ಪ್ರೇರಣೆಯನ್ನು ಬೇಂದ್ರೆಯವರು 'ಏನೇನೋ' ಎಂದು ಕರೆದಿದ್ದಾರೆ. ರಾಜರ, ಕಳ್ಳಸುಳ್ಳರ ಬುಡಕಟ್ಟು ಜನರ ಎಲ್ಲವೂ ಏನೇನೊ ತನ್ನಲ್ಲಿ ಪ್ರಭಾವ ಉಂಟುಮಾಡಿದ ರೀತಿ ಬಣ್ಣಿಸಲು ಸಾಧ್ಯವಿಲ್ಲ. ಅದರಿಂದ ಯಾವ ಪರಿಪಾಕ, ಪರಿಣಾಮ ಉಂಟಾಯಿತೊ ಅದು ಅಗಾಧವಾದುದು. ಅದನ್ನು ಇಷ್ಟೇ ಎಂದು ಹೇಳಲಾಗುವುದಿಲ್ಲ.

**ಸುಪ್ತವರ್ಣ ಕ್ರಮ**

'ಸುಪ್ತವರ್ಣ': ಸುಪ್ತ = ಒಳಗಡೆ ಅಡಗಿದ, ವರ್ಣ = ಅಕ್ಷರ. ಅಕ್ಷರಕ್ಕೆ ಅಕ್ಷರ ಒಳಗಡೆಯೇ ರೂಪುಗೊಳ್ಳುತ್ತಾ ಹೋಗುತ್ತದೆ. ತಾಯಿಯ ಗರ್ಭದಲ್ಲಿ ಮಗು ಕೈಕಾಲು ಪಡೆಯುತ್ತಾ ಪೂರ್ಣಜೀವಿಯಾಗಿ ರೂಪುಗೊಳ್ಳುವಂತೆ. ಒಳಗಡೆಯ ಅಕ್ಷರ ಜೋಡಿಸಿಕೊಂಡು ಆಕಾರ ಪಡೆಯುವ ರೀತಿ ಕಾಮನಬಿಲ್ಲಿನ ಸಡಗರ ಸಂಭ್ರಮ 'ಸಪ್ತವರ್ಣಭ್ರಮ'. ಆಗ ಆದ ಉದ್ಬೋದ (ಉತ್ > ಮೇಲೇರಿದ, ಬೋಧ > ಜ್ಞಾನ, ದರ್ಶನ) ಊರ್ಧ್ವಗಾಮಿಯಾದ ಜ್ಞಾನವು, ಕಾವ್ಯದ ಆವೇಶ ಮೂಡಿದಾಗ ಅದು ನವರಂಗದಲ್ಲಿ ಅಂದರೆ ಕವಿಯ ಹೃದಯದಲ್ಲಿ ನರ್ತಿಸತೊಡಗಿದೆ.

'ಏನೇನೊ ಎಂತೆಂತೂ ಸರಿಬೆರಕೆಯಾದವು
ಪರಿಪಾಕ ಪರಿಣಾಮ ಅಗಾಧವು
ಸುಪ್ತವರ್ಣ ಕ್ರಮ ಸಪ್ತವರ್ಣ ಭ್ರಮ
ನವರಂಗ ಹೊಕ್ಕಿತು ಉದ್ಬೋಧವು'

**ಶ್ರೀ ಬೇಂದ್ರೆ ಅವರು ಕನ್ನಡ ತಾಯಿಯ ಮುಖಗಳಲ್ಲಿ ಒಂದು ಮುಖ**

ಬೇಂದ್ರೆಯವರು ಧಾರವಾಡದಲ್ಲಿ 'ಕನ್ನಡದ ತಾಯಿ - ತಾವರೆಯ ಪರಿಮಳವುಂಡು ಬೀರುತಿಹ ಗಾಳಿ'ಯಾಗಿ ಕನ್ನಡಿಗರ ಪ್ರಾಣವಾಯುವಾದರು. ಅವರಿಗೆ ಕನ್ನಡವೇ ಸರ್ವಸ್ವವಾಗಿತ್ತು. ಅವರು ಚಿಕ್ಕಂದಿನಿಂದಲೇ ಆದರ್ಶದ ಬೆನ್ನುಪತ್ತಿ ಶಿಕ್ಷಕರಾಗಿ, ಕನ್ನಡದ ಸೇವಕರಾಗಿ ತಮ್ಮನ್ನು ತಾವೇ ರೂಪಿಸಿಕೊಂಡರು ಎಂದು ಈಗಾಗಲೇ ತಿಳಿದಿದ್ದೇವೆ.

ಬೇಂದ್ರೆಯವರ ತಮ್ಮ ಕೃಷ್ಣನ ಶಾಲಾ ಶಿಕ್ಷಕರಾಗಿ ಬೇಂದ್ರೆಯವರನ್ನು ಚೆನ್ನಾಗಿ ಬಲ್ಲ ಸ.ಪ. ಗಾಂವಕರ ಅವರು "ಬೇಂದ್ರೆಯವರು ಹೈಸ್ಕೂಲಿಗೆ ಸೇರಿದರೆಂದು ಹಿಂದೆ ಹೇಳಿದೆ. 'ಕನ್ನಡವ ಬಿಟ್ಟೆನಗೆ ಅನ್ಯ ಜೀವನವಿಲ್ಲ' ಎಂಬ ಅವರ ಬಾಳು ಅಂದಿನಿಂದಲೇ ಆರಂಭವಾಯಿತು. ಸಾಹಿತಿಗಳನ್ನು ಕಂಡು ಹಿಡಿಯುವ ಅವರ ಕಣ್ಣು ; ಅದರ ಜೊತೆಗೆ ಅವರು ಸಾಹಿತ್ಯಕ್ಕೆ ಹಾಕಿಕೊಟ್ಟ ಹೊಸದೊಂದು ಹಾದಿ ; ಒಂದಲ್ಲ, ಎರಡಲ್ಲ ಹಲವಾರು ಎದ್ದೇಳುವ ಸಾಹಿತಿಗಳನ್ನು ಸಾಹಿತ್ಯ ಮಾಲೆಯಲ್ಲಿ ಗುಂಪುಗೈದಿತು. ಪ್ರೊ. ಮುಗಳಿ ಮುಂತಾದ ಇಂದಿನ ಸಾಹಿತಿಗಳು ಅವರ ಮನೆಗೆ ಬಂದು ಹೋಗುವುದನ್ನು ಕಂಡಿದ್ದೇನೆ. ಹೀಗಾಗಿ

ಗೆಳೆಯರ ಗುಂಪೊಂದು ಅವರ ಸುತ್ತಲೂ ರೂಪುಗೊಂಡಿತು ; ಎಲ್ಲೆಲ್ಲೂ ತಲೆಯೆತ್ತಿತು ; ಇಂದಿನ ಕನ್ನಡಕ್ಕೊಂದು ಕಾಣಿಕೆಯಿತ್ತಿತು, ಮುಂದಿನ ಕನ್ನಡಕ್ಕೆ ಕೈದೀವಿಗೆಯಾಯಿತು. ಇದೊಂದು ಕನ್ನಡಕ್ಕಾಗಿ ಬೇಂದ್ರೆಯವರು ಗೆಳೆಯರ ಗುಂಪಿನ ಗುರುದೇವತ್ವದಲ್ಲಿ ಕೊಟ್ಟ ದೊಡ್ಡ ಕೊಡುಗೆಯೆಂದರೆ ಬೆಳೆಸಿದ ಬೆಳ್ ಮಾತಾಗದು."[೨೫]

ಹೀಗೆ ಕನ್ನಡವನ್ನು ಜೀವ ಪ್ರಾಣವಾಗಿಸಿಕೊಂಡ ಬೇಂದ್ರೆಯವರು ಸಿಂಪಿಲಿಂಗಣ್ಣನವರಿಗೆ ಕಂಡ ರೀತಿ ಹೀಗಿದೆ : 'ಶ್ರೀ ಬೇಂದ್ರೆ ಅವರು ಕನ್ನಡ ತಾಯಿಯ ಮುಖಗಳಲ್ಲಿ ಒಂದು ಮುಖ. ಅಂತೆಯೇ ಕನ್ನಡ ತಾಯಿಯು ಆ ಮುಖದಿಂದ ತನ್ನ ಹಲವು ಹಾಡುಗಳನ್ನು ಹಾಡಿಸಿದ್ದಾಳೆ ; ಕೆಲವು ಕೃತಿಗಳನ್ನು ಮಾಡಿಸಿದ್ದಾಳೆ. ಅಂತೂ ಅವರ ಹೃದಯವು, ಅವರ ಮುಖವು ಕನ್ನಡ ತಾಯಿ ಬಳಸುವ ಕೊಳಲು, ವೀಣೆ, ಕಿನ್ನರಿಯೆಂದು ಹೇಳಬಹುದು. ಕನ್ನಡಮ್ಮನ 'ಆ ಸಾವಿರ ಬಾಯಿಗಳಲ್ಲಿ ನನ್ನದೊಂದು ; ಅದೇ ನನ್ನ ಧನ್ಯತೆ' ಎಂದು ಬೇಂದ್ರೆ ಅವರು ಒಂದೆರಡು ಕಡೆಗೆ ಹೇಳಿಕೊಂಡದ್ದುಂಟು.'[೨೬]

ಕನ್ನಡನಾಡು ಭಾರತದ ಒಂದು ಅವಿಭಾಜ್ಯ ಅಂಗ, ಕರ್ನಾಟಕ ಭಾರತಮಾತೆಯ ಮಗಳು ಎಂಬುದು ಕನ್ನಡ ಕವಿಗಳ ಹೆಮ್ಮೆಯ ವಿಷಯವಾಗಿದೆ. ಬೇಂದ್ರೆಯವರು ೧೯೧೯ರಲ್ಲಿ 'ಭಾರತ ಮಾತೆಯು ಪೂರ್ವ-ಪಶ್ಚಿಮ ಘಟ್ಟಗಳ ತೊಟ್ಟಿಲಲ್ಲಿ ಮಲಗಿದ ಕನ್ನಡ ಕಂದವ್ವನನ್ನು ತೂಗುವಾಗ ಹೇಳಿದ ಪದ್ಯ'ವನ್ನು ರಚಿಸಿದ್ದಾರೆ. ಅದನ್ನು 'ಕನ್ನಡದ ಕಂದವ್ವನ ಲಾಲಿ' ಎಂದು ಕರೆದಿದ್ದಾರೆ.

> 'ಓರ್ವ ತಾಯಿಯು ತನ್ನ ಕೂಸಿರುವ ತೊಟ್ಟಿಲವ ಕೈಯಿಂದ ತೂಗುತಿಹಳೋ
> ಪೂರ್ವ-ಪಶ್ಚಿಮ ಘಟ್ಟದಲ್ಲಿ ಪಟ್ಟಿರುವಂಥ ನಾಡನ್ನೆ ನೂಗುತಿಹಳೋ'

ಎಂದು ಭಾರತಮಾತೆ ಕನ್ನಡದ ಕಂದವ್ವನನ್ನು ತೂಗುತ್ತಿರುವಾಗ, ಆನಂದದಿಂದ ಆಕೆ 'ನನ್ನ ಎದೆಮುಗುಳೆ ಜೋ ಜೋ' ಎಂದಿದ್ದಾಳೆ. ಬೇಂದ್ರೆಯವರಿಗೆ ಮಗಳು 'ಎದೆ ಮುಗುಳು'. ಅದು ಇಲ್ಲಿ ಭಾರತಮಾತೆಯ ಆನಂದವಾಗಿ ಹರಿದಿದೆ. ತನ್ನ ಕಂದವ್ವ ಮತ್ತು ಅವಳ ಮಕ್ಕಳು ಬೆಳೆಯಲಿ ಎಂದು 'ನಿನ್ನ ತಳಿ ಬಳಿಯಲೌ' ಎಂದು ಹಾರೈಸಿ, 'ಆಟ ಪಾಟಗಳಲ್ಲಿ ನೋಟಕೂಟಗಳಲ್ಲಿ ನೆಲೆಗೊಂಡ ಗೊಂಬಿ ಜೋ ಜೋ' ಎಂದು ಹಾಡಿದ್ದಾಳೆ. ಇದೇ ರೀತಿಯ ಕಲ್ಪನೆಯಲ್ಲಿ ಅನಂತರದ ಕವಿಗಳು ಹಲವಾರು ಕವನಗಳನ್ನು ರಚಿಸಿದ್ದಾರೆ. ಕುವೆಂಪು ಅವರ 'ಜೈ ಭಾರತಜನನಿಯ ತನುಜಾತೆ, ಜಯಹೇ ಕರ್ನಾಟಕಮಾತೆ' ಎಂಬುದು ಕರ್ನಾಟಕದ ನಾಡಗೀತೆಯಾಗಿದೆ.

---

೨೫ ಸ.ಪ. ಗಾಂವಕರ, ಕವಿವರ ಬೇಂದ್ರೆ, ಪೂರ್ವೋಕ್ತ, ಪು. ೧೫, ೧೬

೨೬. ಸಿಂಪಿಲಿಂಗಣ್ಣ, ಅದೇ, ಪುಟ. ೫೧, ೫೨

### ಭಾರತಮಾತೆ

ಬೇಂದ್ರೆಯವರು ಭಾರತಮಾತೆಯ 'ಕೋಟಿ ಕಾರ್ತಿಕೋತ್ಸವದಲ್ಲಿ ಮಿನುಗುತಿರುವ ಜ್ಯೋತಿ ನಾನು' ಎಂದು ಹೇಳಿಕೊಂಡರು. ರಾಷ್ಟ್ರಭಕ್ತಿಯಿಂದ ಸ್ವಾತಂತ್ರ್ಯಕ್ಕಾಗಿ 'ನರಬಲಿ' ಕವನ ರಚಿಸಿ ಹಿಂಡಲಗಾ ಜೇಲಿನ ವಾಸ ಅನುಭವಿಸಿದರು. ಭಾರತಮಾತೆ ಹಡೆದ ನಿಸ್ತೇಜ ಭಾರತೀಯರನ್ನು ಧ್ವನ್ಯಾರ್ಥದಲ್ಲಿ 'ಸೂಲಗಳು' ಎಂದು ಕರೆದು ಎಚ್ಚರದ ಕಹಳೆಯೂದಿದರು.

'ಮೂವತ್ತು ಮೂರು ಕೋಟೀ, ಮೂವತ್ತು ಮೂರು ಕೋಟೀ !
ಬಯಕೆಗಳು, ಬಸಿರುಗಳು ಹಡೆದಿದ್ದು ಹಿಂಗಿದ್ದು
ಮೂವತ್ತು ಮೂರು ಕೋಟಿ !
ಸೂಲಗಳು
ಮೂವತ್ತು ಮೂರು ಕೋಟಿ' ('ಮೂವತ್ತು ಮೂರು ಕೋಟಿ' : ಗರಿ)

ನಾವು ಭಾರತೀಯರೆಲ್ಲರೂ ಒಂದು. ನಮ್ಮಲ್ಲಿಯ ಹಿಂದೂ, ಪಾರಸಿ, ಮುಸ್ಲಿಂ, ಕ್ರಿಶ್ಚಿಯನ್, ಸಿಖ್ ಎಲ್ಲರೂ ಒಂದಾಗಿ ದೇಶವನ್ನು ನಡೆಸುತ್ತ ರಾಷ್ಟ್ರವನ್ನು ರಕ್ಷಿಸುತ್ತ ಇದ್ದೇವೆ. ಭಾರತದ ದಂಡು ದೇಶರಕ್ಷಣೆಯಲ್ಲಿ ಮುನ್ನುಗ್ಗಿ ವೈರಿಯನ್ನು ನುಗ್ಗಾಗಿಸುತ್ತಿದೆ. ವಿಜಯದಲ್ಲಿ ಸಂತೋಷವು ಬಿತ್ತರಿಸಿದೆ. ವೀರಕ್ಕೆ ಅದ್ಭುತ ಸಿದ್ಧಿ ಇದೆ. ಯುದ್ಧದ ಯಶಸ್ಸು ನಮ್ಮ ಭಾವೈಕ್ಯತೆಯನ್ನು ಸಾರುತ್ತಿದೆ. ಏಸು ಶಾಂತಿದೂತ. ಅವನೇ ಈ ಯುದ್ಧ ಸಾರುವ ವೈರಿಗಳಿಗೆ ಸದ್ಬುದ್ಧಿಯನ್ನು ನೀಡಬೇಕು ಎಂಬ ಭಾವದಲ್ಲಿ ಸ್ವಾತಂತ್ರ್ಯಾನಂತರವೂ ಜನರನ್ನು ಎಚ್ಚರಿಸಿ, ಐಕ್ಯತೆಯ ಗಾನವನ್ನು 'ಸನ್ಮತಿ ಏಸು ಭಗವಾನ್' ಎಂದು ಬೇಂದ್ರೆ ಕಾವ್ಯ ರಚಿಸಿದರು.

'ಜಯಹಿಂದ್, ಜಯಹಿಂದ್, ಜಯಹಿಂದ್
ಪ್ಯಾಟನ್ ಟ್ಯಾಂಕಿನ ಹಿಂಡು । ಹಾರಿಸಿತೊ ಗುಂಡು
ಇದಿರಾಯ್ತು ಭಾರತದ ದಂಡು
ಹಿಂದೂಃ ಪಾರಸಿಕಾಃ ಮುಸ್ಲಿಂ, ಕ್ರಿಸ್ತೀ ಸೀಖಾ
ಸಹವೀರ್ಯಾ ಸಹಧೈರ್ಯಾ ಸೌಖ್ಯ
ತಂದಿದೆ ಭಾವೈಕ್ಯ' (ಮರ್ಯಾದೆ)

### ವಿಶ್ವಮಾತೆ

ವಿಶ್ವಬಾಂಧವ್ಯ, ವಿಶ್ವಪ್ರೇಮ, ವಿಶ್ವಶಾಂತಿ, ವಿಶ್ವಕಲ್ಯಾಣಕ್ಕಾಗಿ ಬೇಂದ್ರೆಯವರು ಸಲ್ಲಿಸಿದ ಪ್ರಾರ್ಥನೆಯಲ್ಲಿ ಕನ್ನಡನಾಡು ಮತ್ತು ಭಾರತದ ಮೇಲಿನ ಭಕ್ತಿ ಅಡಗಿದೆ. ಅದು ಕನ್ನಡಿಗರ ಹಾಗೂ ಭಾರತೀಯರ ಕಲ್ಯಾಣಕ್ಕಾಗಿ ಸಲ್ಲಿಸಿದ ಪ್ರಾರ್ಥನೆಯೂ ಆಗಿಬಿಡುತ್ತದೆ. ಈ ಪ್ರಾರ್ಥನೆಯ ಪ್ರಾಮಾಣಿಕತೆ ಹಾಗೂ ಸಾಮರ್ಥ್ಯವು ಜನ್ಮಕೊಟ್ಟ ತಾಯಿಯ ಭಕ್ತಿಯ ಫಲ

ಎಂಬುದೇ ಬೇಂದ್ರೆಯವರ ಶ್ರದ್ಧೆ. ಆದುದರಿಂದ ಬೇಂದ್ರೆಯವರು 'ಪಾರ್ವತಿ ನೀನೇ ಸಲಹು' ಎಂಬ ಕವನದಲ್ಲಿ ಹೀಗೆ ಹೇಳಿದ್ದಾರೆ:

'ಈಶ್ವರ ನಿರ್ಮಿಸಿದೀ ಸೃಷ್ಟಿಯನು
ಪಾರ್ವತಿ ! ನೀನೇ ಸಲಹು
ನಿನ್ನದೆ ಈ ನೆಲ, ನಿನ್ನದೆ ಈ ಜಲ
ನಿನ್ನದೆ ಕನ್ನಡ ಗೆಲಹು

* * *

ಬಡಗಣ, ತೆಂಕಣ, ಪಡುವಣ, ಮೂಡಣ
ನಡುವಣ ಕನ್ನಡ ಪಂಚಶಿಖ
ಪರಮೇಶ್ವರನೊಲು ಪ್ರಪಂಚ ಪ್ರಕಟಿಸಿ
ಮೈದೋರಿತು ಇಗೊ ಪಂಚಮುಖ

* * *

ಈಶ್ವರನೊಲುಮೆಗೆ ಶ್ರದ್ಧೆಯೆ ಮೂಲ
ಅವನೊಡಗೂಡಲು ಶಕ್ತಿ ಬಲ
ಆತ್ಮದಿ ಶ್ರದ್ಧೆಯು ಪ್ರಸಾದ ಪಡೆಯಲು
ಬೇಕಾಗಿರುವುದು ವೀರ ಛಲ' ('ಪಾರ್ವತಿ ನೀನೆ ಸಲಹು' ; ಅರಳು ಮರಳು)

ವಿಶ್ವಮಾತೆಯಾದ ಪಾರ್ವತಿಯೇ ಕನ್ನಡದ ಕಲ್ಯಾಣ ಮಾಡಬಲ್ಲಳು. ಕನ್ನಡಿಗರು ಕನ್ನಡ ಪ್ರೇಮ ಎಂಬ ಸ್ವಧರ್ಮವನ್ನು ಎಂದೂ ಕಳೆದುಕೊಳ್ಳಬಾರದು ಎಂಬುದಾಗಿ ಸೂಚಿಸಿದ್ದಾರೆ. ವಿಶ್ವಮಾತೆಯಾದ ಪಾರ್ವತಿಯು ಗಂಗೆಗೆ ಪ್ರಾಧಾನ್ಯ ಕೊಟ್ಟಿದ್ದಾಳೆ. ಗಂಗೆ ಶಿವನ ತಲೆ ಏರಿ ಮಂಡಿಸಿದ್ದಾಳೆ. ಅವಳಲ್ಲಿ ಬೇಂದ್ರೆ ಪ್ರಾರ್ಥನೆ ಸಲ್ಲಿಸುವುದು ಹೀಗೆ :

'ಕೊಳೆಯ ತೊಳೆವವರು ಇಲ್ಲ ಬಾ
ಬೇರೆ ಶಕ್ತಿಗಳು ಹೊಲ್ಲ ಬಾ
ಹೀಗೆ ಮಾಡದಿರು, ಅಲ್ಲ ಬಾ
ನಾಡಿ ನಾಡಿಯನು ತುತ್ತ ಬಾ
ನಮ್ಮ ನಾಡನ್ನೆ ಸುತ್ತ ಬಾ
ಸತ್ತ ಜನರನ್ನು ಎತ್ತ ಬಾ'. (ಗಂಗಾವತರಣ)

ಗಂಗೆ ಕನ್ನಡಿಗರಲ್ಲಿ ಚೈತನ್ಯವನ್ನು, ಕ್ರಿಯಾಶಕ್ತಿಯನ್ನು ಜಾಗೃತಗೊಳಿಸದಿದ್ದರೆ ಅವರೆಲ್ಲ ಸತ್ತ ಜನರಾಗುತ್ತಾರೆ, ಹಾಗಾಗಬಾರದು ಎಂಬ ದೃಷ್ಟಿಯಿಂದ 'ಅಂಬಿಕಾತನಯದತ್ತ'ರು ಗಂಗೆಯನ್ನು ಒಲಿಸಿಕೊಳ್ಳಲು ಪ್ರಾರ್ಥಿಸಿದ್ದಾರೆ. ಶಿವನು ಈಶ್ವರನಾಗಿ ನಿರ್ಮಿಸಿದ ಸೃಷ್ಟಿಯನ್ನು ಕಾಪಾಡುವ ಭಾರ ಪಾರ್ವತಿಯದು ಹಾಗೂ ಚೈತನ್ಯ ತುಂಬಿ ಕ್ರಿಯಾಶೀಲರನ್ನಾಗಿ ಮಾಡುವುದು - ಗಂಗೆಯ ಕೃಪೆ ಎಂದಿದ್ದಾರೆ ಬೇಂದ್ರೆ.

ಪೃಥ್ವಿ, ಆಪ್, ತೇಜ, ವಾಯು ಮತ್ತು ಆಕಾಶ ಎಂಬ ಪಂಚಮಹಾಭೂತಗಳ ಸ್ತುತಿಯನ್ನು ಋಷಿಗಳು ಮಾಡಲು ಅವುಗಳ ವಿಶ್ವವ್ಯಾಪಕತೆಯೆ ಕಾರಣ. ಅಂಬಿಕಾತನಯದತ್ತರೂ ಈ ಪಂಚತತ್ವಗಳನ್ನು ಕುರಿತು ಅನೇಕ ಕವನಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಬೆಳಕು ಅತ್ಯಂತ ಮಹತ್ವದ ತತ್ವ. ಇದು ಬರೀ ಬೆಳಗಲ್ಲ. ಶಾಂತಿ ಹಾಗೂ ಪ್ರೀತಿ ರಸಸ್ವರೂಪಗಳನ್ನು ತಾಳಿ ನರ-ನಾರಿಯಲ್ಲಿ ಜೀವಂತಿಕೆಯನ್ನು ಚಿಮ್ಮಿಸುವ ಶಕ್ತಿ ಎಂಬ ಬೇಂದ್ರೆ ದೃಷ್ಟಿಕೋನ ಅವರ ಬೆಳಗು ಕವನದ ಬೆನ್ನೆಲುಬಾಗಿದೆ.

## ಎಲ್ಲಿರುವೆ ಅಲ್ಲೇ ಇರು, ಅಲ್ಲಿ ನಾನೇ ಬರುವೆ

ಮಾನವ ಪ್ರೇಮ, ಕನ್ನಡ ಬಾಂಧವ್ಯ, ಭಾರತ ಬಾಂಧವ್ಯ ಹಾಗೂ ವಿಶ್ವಬಾಂಧವ್ಯದ ಆದರ್ಶವನ್ನಿಟ್ಟುಕೊಂಡಾಗ ಮಾತ್ರ 'ಜಗದೇಳಿಗೆಯಾಗುವದಿದೆ ಕರ್ನಾಟಕದಿಂದೆ' ಎಂಬ ಕನಸನ್ನು 'ಅಂಬಿಕಾತನಯದತ್ತ'ರು ಕಂಡಿದ್ದಾರೆ. ಕರ್ನಾಟಕದ ಐಕ್ಯಸಾಧನೆಯ ಮೂಲಕ, ಜಗದ ಏಳಿಗೆ ಸಾಧ್ಯ ಎಂಬುದು ಬೇಂದ್ರೆಯವರ ದೃಷ್ಟಿ. ಕನ್ನಡಿಗರಿಗೆ ವಿಶ್ವವ್ಯಾಪಕ ಅರಿವು ಹಾಗೂ ಇರವು ಇರದಿದ್ದರೆ ಅದು ಅವರ ಅಲ್ಪತನ. ಅಲ್ಪತನಕ್ಕೆ ಶಾಶ್ವತ ಸುಖವಿಲ್ಲ - ನಾಲ್ಪೇ ಸುಖಮಸ್ತಿ. ಈ ಮಂತ್ರದ ಜಾಗೃತಿ ಮತ್ತು ಉತ್ಥಾನ ಕನ್ನಡಿಗರಲ್ಲಾಗಲಿ ಎಂಬುದಾಗಿ ಬೇಂದ್ರೆ ಪ್ರಾರ್ಥಿಸಿದರು. ಇದನ್ನೇ ವಿವೇಕಾನಂದರು ವಿಶ್ವಸಂದೇಶವಾಗಿ ಸಾರಿದ್ದರು. ಚಿಕಾಗೋ ಉಪನ್ಯಾಸದಲ್ಲಿ ವಿವೇಕಾನಂದರು 'ಸಹೋದರ ಸಹೋದರಿಯರೆ' ಎಂದು ಸಂಬೋಧಿಸಿದ್ದು ನಿರ್ಮಿಸಿದ ರೋಮಾಂಚನ ಎಲ್ಲರಿಗೂ ಮಾರ್ಗದರ್ಶಕ. ಈ ರೋಮಾಂಚನದ ಸಾತತ್ಯ ಎಲ್ಲರ ಅಪೇಕ್ಷೆಯಾಗಬೇಕು. ವಿಶ್ವ ಎಂಬುದು ಅಖಂಡದ ತತ್ವ. ಕರ್ನಾಟಕ ಎಂಬುದು ಅದರ ಒಂದು ಭಾಗ. ಒಂದು ಭಾಗದ ಜಾಗೃತಿ ಅಖಂಡತೆಯ ಬಲದಲ್ಲಿ ಮಹತ್ವ ಪಡೆಯುತ್ತದೆ. ವಿಶ್ವಬಾಂಧವ್ಯದ ತತ್ವ ಸಕ್ಕರೆಯಂತೆ ರುಚಿ. ಸಕ್ಕರೆ ಇದ್ದಲ್ಲಿ ಇರುವೆ ಬರಬೇಕು. ಅವು ಬರದಿದ್ದರೆ ಸಕ್ಕರೆಯೆ ಇರುವೆ ಇದ್ದಲ್ಲಿ ಹೋಗಬೇಕಾಗುತ್ತದೆ. ಈ ವಿಚಾರ ಬೇಂದ್ರೆಯವರ 'ನಾಲ್ಪೇ ಸುಖಮಸ್ತಿ' ಕವನದ ಜೀವಾಳ. ಅದು ಹೀಗೆ :

> ಓ ಇರುವೆ ! ಎಲ್ಲಿರುವೆ ?
> ನಾನು ಸಕ್ಕರೆ ; ಕರೆವೆ.....
> ಏನೆಂದೆ ? .....

ಕರೆದ ಮೇಲೆಯೆ ಬರುವೆ, ಭಲೆ ಇರುವೆ !
ಎಲ್ಲಿರುವೆ ಅಲ್ಲೆ ಇರು
ಅಲ್ಲಿ ನಾನೇ ಬರುವೆ (ಸಂಚಯ)

ಆದುದರಿಂದ ಬೇಂದ್ರೆಯವರು ತಮ್ಮ ಜೀವಿತಾವಧಿಯಲ್ಲಿ ಜನರಿದ್ದಲ್ಲಿಗೆ ತಾವೇ ಹೋಗಿ ಕರ್ನಾಟಕದ ಐಕ್ಯದ ಮೂಲಕ ವಿಶ್ವದ ಐಕ್ಯದ ವೈಚಾರಿಕ ಬುದ್ಧಿಯನ್ನು ಅನೇಕ ಕವನಗಳ ವಾಚನದಿಂದ ಜಾಗೃತಗೊಳಿಸಿದರು.

**ಪ್ರೇಮಬೀಜ ಮೂಲ ನನೆಗೆ**

ಪ್ರೇಮಬೀಜವನ್ನು ಬಿತ್ತದೆ ಐಕ್ಯವೃಕ್ಷ ಬೆಳೆಯದು. ಆ ವೃಕ್ಷದಿಂದ ಪರಿಪಕ್ವ ಫಲ ತೊಟ್ಟುಬಿಟ್ಟು ಬಿದ್ದಾಗ ಅದರ ಹೊಟ್ಟೆಯೊಳಗಿನ ಪ್ರೇಮಬೀಜವೇ ಮುಂದಿನ ಐಕ್ಯಕ್ಕೆ ನಾಂದಿ. ಈ ವಿಚಾರ ಬೇಂದ್ರೆಯವರಲ್ಲಿ ಕಲಾರೂಪ ತಾಳಿದ್ದು ಹೀಗೆ :

ಇಳೆಯ ಮಕ್ಕಳೆಲ್ಲ ಬನ್ನಿ
ತಾಯ ತವರು ಮನೆಗೆ
ಭೇದ ಬಲಿಸಿ ಬಳಲ ಬೇಡಿ
ಎಂದು - ನನಗೆ ನಿನಗೆ.

ಇದು ಬಿಳಿವೂ ಇದು ಕರಿವೂ
ಹಗಲು ಇರುಳು ಬಣ್ಣಾ
ಕೆಂಪನಿವ ಹಳದಿಯವಾ
ಅಂದ ಚೆಂದವಣ್ಣಾ.

ಎದೆಯಾಳದ ರಕ್ತದಲ್ಲಿ
ಭಾವದ ಅನುರಕ್ತದಲ್ಲಿ
ಕಾವಿನ ಚಿತ್‌ಶಕ್ತಿಯಲ್ಲಿ
ಕಂಡ ಶಾಂತಿಗೀತ.

ಕರೆದು ಜನ್ಮ ಮರಣಗಳಿಗೆ
ತಾರಕರಾ ಚರಣಗಳಿಗೆ
ಜೀವಾಂತಃಕರಣಗಳಿಗೆ
ನೀಡಿತು ಸುಪ್ರೀತ.

ಪ್ರೇಮಬೀಜ ಮೂಲ ನನೆಗೆ
ಪ್ರೇಮಬೀಜ ಫಲದ ಗೊನೆಗೆ ('ಪ್ರೇಮಬೀಜ' : ಅರಳು ಮರಳು)

ಬಿಳಿ ಕಪ್ಪು, ಹಗಲು ರಾತ್ರಿಗೆ ಮಾತ್ರ ಸಂಬಂಧವಾಗಿರಲಿ. ಹಳದಿ, ಕೆಂಪು ಜನಾಂಗವಾಚಕವಾಗಿರಲಿ. ಇದು ವರ್ಣದ್ವೇಷದ ರೂಪ ತಾಳಬಾರದು. ವರ್ಣದ್ವೇಷವು ವಿಶ್ವಶಾಂತಿಯನ್ನು ಹಾಳುಮಾಡುತ್ತದೆ. ಇಳೆಯ ಮಕ್ಕಳೆಲ್ಲ ಒಂದು ಎಂಬ ಭಾವ - ಅನುರಾಗವಾಗಿ ಚಿತ್‌ಶಕ್ತಿಯಾಗಿ ಬೆಳೆಯುವುದು ಅವಶ್ಯ ಎಂಬ ಮೌಲಿಕ ವಿಚಾರವನ್ನು ಬೇಂದ್ರೆಯವರು ಪ್ರತಿಪಾದಿಸಿದರು.

### ಧ್ರುವದಿಕ್ಕು ಎಂದೆಂದು ಉತ್ತರಕೆ!

ಬೇಂದ್ರೆಯವರಿಗೆ ಮನೆಯ ಒಳಗಡೆ ತಾಯಿಯಿಂದ ಸಂಪ್ರದಾಯ, ಮನೆಯ ಆಚಾರ, ಸುಸಂಸ್ಕೃತ ರೀತಿಯ ಉನ್ನತ ನೆಲೆ ದೊರೆಯಿತು. ಹೊರಗಡೆ 'ಜನಪದ' ಹಾಡುಗಾಯಕರಾದ ಗೊಂದಲಿಗರು, ಡೊಳ್ಳಿನವರು, ಗೆಜ್ಜೆಮೇಳದವರು, ಕರಡಿ ಕುಣಿತದವರು, ಚೌಡಿಕೆಯವರಿಂದ ಅವನತವೆನಿಸಿದರೂ ತನ್ನ ಅಂತರಾಳದಲ್ಲಿ ಜೀವಂತಿಕೆ ತುಂಬಿಕೊಂಡ ಸವಿ ಸಿಕ್ಕಿತು. ಕಾಮನಕಟ್ಟೆಯ ರಾಷ್ಟ್ರೀಯ ಚಿಂತಕರಿಂದ ರಾಷ್ಟ್ರದ ಸ್ವಾತಂತ್ರ್ಯಹೋರಾಟ, ದೇಶಾಭಿಮಾನದ ಕಿಚ್ಚು ಹೊತ್ತಿತು ಎಂದು ಈಗಾಗಲೇ ತಿಳಿದಿದ್ದೇವೆ. ಆಗ ಅವರಿಗೆ 'ನನ್ನ ತಾಯಿ, ನಾಡ ನುಡಿ, ರಾಷ್ಟ್ರದ ವೈಭವ, ಮಾನವ ದೈವ, ಜೀವನದ ಅಗಮ್ಯ ಲೀಲೆ - ಇವು ನನ್ನ ನುಡಿಯನ್ನೆ ನನ್ನ ಒಳಿತಿಗೆ ಹದ ಮಾಡುತ್ತಿವೆ'[೨೭] ಎನಿಸಿತು. ಅವರು ಎಲ್ಲಕ್ಕೂ ತೆರೆದುಕೊಂಡ ಮನಸ್ಸಿನವರಾಗಿ, ಧಾರವಾಡದಲ್ಲಿಯೇ ಇದ್ದು ಆ ನೆಲದ ಜನರ ಹಾಡು ಕುಣಿತ, ಜೀವನ ಪ್ರೀತಿ, ಜೀವನದ ವೈವಿಧ್ಯವನ್ನು ಆಸ್ವಾದಿಸಿ ಆಳವಾದ ಅಧ್ಯಯನದಲ್ಲಿ ತಲ್ಲೀನರಾದರು. ಅದರ ಫಲವೆಂಬಂತೆ ಇಡೀ ಮಾನವರ ಕತೆಯನ್ನು ತಮ್ಮ ಮನಸ್ಸಿನಲ್ಲಿ ಮೂಡಿಸಿಕೊಂಡರು.

'ಭೂಮಂಡಲವನೆ ಸುತ್ತಾಡಿ ಮಾನವರ
ಕತೆಯನ್ನೆ ಚಿತ್ತದಲೆತ್ತಿದವು'

ಪಗಡೆಯಾಟದಲ್ಲಿ ಮತ್ತು ಜೀವನದಲ್ಲಿ ಮೇಲುಸ್ತರದಲ್ಲಾದರೂ ಇರಲಿ, ಕೆಳಸ್ತರಕ್ಕಾದರೂ ಬೀಳಲಿ ಅದರದರ ಪಾಲು ಅದಕ್ಕೆ ಸಿಕ್ಕೇ ಸಿಗುತ್ತದೆ. ಮಹಾಕಾವ್ಯದ ಓದಿನಿಂದ ತಿಳಿದು ಬರುವ ಉನ್ನತ ಮೌಲ್ಯದಷ್ಟೇ ಜನಪದ ಗೀತೆಯ ಮೌಲ್ಯವು ಪರಿಣಾಮಕಾರಿ. ಮೇಲ್‌ಸ್ತರದ ಜನರ ಜೀವನದಷ್ಟೇ ಕೆಳಸ್ತರದವರ ಜೀವನವು ಮೌಲಿಕವಾದುದು. ಎಲ್ಲದರಲ್ಲೂ ಅದರದೇ ಲಾಭವಿದೆ. ಎತ್ತರಕ್ಕೆ ಏರಿ ಹೋದ ಮೇಲೆ ಯಾವ ದಿಕ್ಕಿಗೆ ಹೋದರೂ ಯಾತ್ರೆಯಾಗುತ್ತದೆ. ಎತ್ತರಕ್ಕೆ ಏರದೆ ಇದ್ದರೆ ಯಾತ್ರೆಯಾಗುವುದಿಲ್ಲ. ಆ ಎತ್ತರದಲ್ಲಿ ಅಧಮ, ಮಧ್ಯಮ, ಉತ್ತಮ ಎಂಬ ತಾರತಮ್ಯವೇ ಇರುವುದಿಲ್ಲ. ಧ್ರುವನಕ್ಷತ್ರ ಉತ್ತರಕ್ಕಿರುತ್ತದೆ. ಉತ್ತರ ಎಂದರೆ ಉತ್ತರದಿಕ್ಕು ಎಂಬ ಅರ್ಥವಿರುವಂತೆ ದಾಟು ಎಂಬ ಅರ್ಥವಿದೆ. ಕೆಳ ಪ್ರಜ್ಞೆಯಿಂದ ಮೇಲಿನ ಪ್ರಜ್ಞೆಗೆ

---

೨೭ ದ.ರಾ. ಬೇಂದ್ರೆ, ಸಾಹಿಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. ೧೨೭

ಸಾಗುವುದೇ ಧ್ರುವನ - ಜ್ಞಾನದ ಸಂಕೇತ. ವ್ಯಕ್ತಿ ಮೇಲೇರುತ್ತ ಉತ್ತರಕ್ಕೆ ನಡೆದಾಗ ಧ್ರುವ ಅಂದರೆ ಶಾಶ್ವತನಾಗುತ್ತಾನೆ. ಆದುದರಿಂದ ಧ್ರುವ ದಿಕ್ಕಿನ ಜ್ಞಾನಸ್ಥಾನಕ್ಕೆ ಏರಿದಾಗ ಎಲ್ಲರೂ ಸಮ. ಜ್ಞಾನದ ಸೋಪಾನ ಏರಿದ ಮೇಲೆ ಎಲ್ಲ ಸ್ತರದವರಿಗೂ ಲಾಭವಿದೆ.

'ಲೆತ್ತದ ಆಟದಲ್ಲಿ ಎತ್ತ ಬಿದ್ದರು ದಾಯ
ಎತ್ತ ಹೋದರು ಯಾತ್ರೆ ಎತ್ತರಕೆ
ಅಧಮ, ಮಧ್ಯಮ ಮತ್ತೆ ಉತ್ತಮ ಪುರುಷರು
ಧ್ರುವದಿಕ್ಕು ಎಂದೆಂದೂ ಉತ್ತರಕೆ!'

**ಪತಿ-ತತ್ವ ಇರುವಾಗ ಪತಿತ-ತ್ವ ಎಲ್ಲುಂಟು?**

ಪತಿಯೇ ದೇವರು ಎಂಬ ತತ್ವ ಇರುವಾಗ ಯಾರೇ ಆಗಲಿ ಪತಿತರಾಗುವುದು ಸಾಧ್ಯವಿಲ್ಲ. ಅಂದರೆ ನಮ್ಮಲ್ಲಿ ಸೈದ್ಧಾಂತಿಕ ನಿಲುವು ಇದ್ದಾಗ, ತರತಮ ಭಾವವಿಲ್ಲದಾಗ ಕೆಳಕ್ಕೆ ಬೀಳುವುದು, ಪತಿತರಾಗುವುದು ಸಾಧ್ಯವಿಲ್ಲ. 'ಎದ್ದದ್ದು ಬಿದ್ದದ್ದು ಎರಡು ಸಮ'. ಜೀವನದಲ್ಲಿ ಊರ್ಧ್ವಗಾಮಿಯಾದದ್ದು, ಅಧೋಗಾಮಿಯಾದದ್ದು ಅಂದರೆ ಜಯಿಸಿದ್ದು, ಸೋತಿದ್ದು ಎರಡೂ ಸಹ ಸಮವಾಗಿರುತ್ತವೆ. ಸೋಲಿನಲ್ಲಿಯೂ, ಗೆಲುವಿನಲ್ಲಿಯೂ ಅನುಭವ ಎಂಬುದು ಸಮ. ಭೂಮಿಯ ಮೈತುಂಬ ವೈಷಮ್ಯ ದರ್ಶನವಿದೆ. ಅದನ್ನು ದ್ವೇಷದಿಂದ ಕಾಣದೆ ಪ್ರೀತಿಯಿಂದ, ಸಮಾಧಾನದಿಂದ ಕಾಣುವ ಬುದ್ಧಿಯೋಗವನ್ನು ಅಭ್ಯಾಸ ಮಾಡಬೇಕು. ಆಗ ಅದರಲ್ಲಿಯ ಸಾಮ್ಯಕ್ರಮ ಅಂದರೆ ಸಮಾನತೆಯಿಂದ ಹಾಗೂ ಸಾಮರಸ್ಯದಿಂದ ಸ್ಥಿತಪ್ರಜ್ಞನ ನೆಲೆಗೆ ಏರಬೇಕು. ಅದು ಪರಿಪಕ್ವತೆಯಿಂದ ಸಾಧ್ಯ. ವೈಷಮ್ಯವನ್ನು ಕಂಡರೂ - ಬುದ್ಧಿಯೋಗವನ್ನು ರೂಢಿಸಿಕೊಂಡರೆ ಸಮಭಾವದಿಂದ, ಸಮಾಧಾನದಿಂದ ಇರುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳಲು ಸಾಧ್ಯ.

'ಪತಿ-ತತ್ವ ಇರುವಾಗ ಪತಿತ-ತ್ವ ಎಲ್ಲುಂಟು ?
ಎದ್ದದ್ದು ಬಿದ್ದದ್ದು ಎರಡು ಸಮ
ಭೂಮಿಯ ಮೈ ತುಂಬ ವೈಷಮ್ಯದರ್ಶನ
ಬುದ್ಧಿ ಯೋಗದಲುಂಟು ಸಾಮ್ಯಕ್ರಮ'

ಪತಿಗೆ ಜಗತ್ಪತಿ ಎಂಬ ಅರ್ಥವಿದ್ದು ; ಆ ದೈವದ ಬಗ್ಗೆ ಅಚಲ ನಂಬಿಕೆಯಿದ್ದರೆ ಯಾರೂ ಪತಿತನಾಗಲು ಸಾಧ್ಯವಿಲ್ಲ ಎಂಬ ಚಿಂತನೆಯನ್ನು ಬೇಂದ್ರೆ ನೀಡಿದ್ದಾರೆ.

'ಸತಿಗುಂಟು ಸಥಿಯೊಂದು, ಪಥಿಕಗೆ ಪಾಥೇಯ
ಪಾಂಚ ಭೌತಿಕ ಅನ್ನ ಪರಸಾದವು
ಬಿಂದು ಚಲಿಸಲು ನಾದ ಕರೆಗಟ್ಟಿ ಕಳೆಗಳು
ಮೂರ್ತಿಸೆ ಬೇರೇಕೆ ಸಂವಾದವು'.

ಸತಿಗೆ ತನ್ನ ಜೀವನದ ಜೊತೆಗಾರನಾದ ಪತಿಯ ಮೇಲೆ ಆತ್ಮೀಯವಾದ ಸಲಿಗೆ, ಅಧಿಕಾರವಿದೆ. ಪಥಿಕ ಅಂದರೆ ದಾರಿಹೋಕನಿಗೆ ಪಾಥೇಯ ಬುತ್ತಿಯ ಜೋಡಿ ಇದೆ. ಈ ಪಂಚಭೂತಗಳಿಂದಾದ ಶರೀರಕ್ಕೆ ಅನ್ನವೆ ದೇವರ ಕೃಪೆಯಿಂದ ಪ್ರಸಾದವಾಗಿ ಜೊತೆಗೂಡಿದೆ. ಪರಮಾತ್ಮನು ನಾದ ಬಿಂದು ಕಲಾತೀತನಾಗಿದ್ದಾನೆ. ನಾದ, ಬಿಂದು, ಕಲೆ ಈ ಮೂರು ಕೂಡಿಕೊಂಡು ಮೂರ್ತಿರೂಪ ತಾಳಿದಾಗ ಬೇರೆ ಸಂವಾದ ಏಕೆ ಬೇಕು ? ಅಂದರೆ ಸಂವಾದದ ಅವಶ್ಯಕತೆಯಿಲ್ಲ. ಅದು ಪರಿಪಾಕಕ್ಕೆ ಬಂದ ಸ್ಥಿತಿ ಅನುಭಾವಕ್ಕೆ ಏರಿದ ನೆಲೆ ಎಂದು ಬೇಂದ್ರೆ ಅನುಭಾವಿಕ ಸ್ತರವನ್ನು ಕಾವ್ಯವಾಗಿಸಿದ್ದಾರೆ.

### ಶ್ರದ್ಧಾಮಯ ಸೂತ್ರ

ಭೂಮಿಯ ಮೇಲೆ ಪಾದ ಊರಿರುವಾಗ ನಮ್ಮ ದೇಹ ಅಂತರಿಕ್ಷದಲ್ಲಿರುತ್ತದೆ ಎಂಬುದು ಸಂದೇಹವಿಲ್ಲದ್ದು. ಅದು ನಮ್ಮ ಮಾನಸಿಕ ಬೆಳವಣಿಗೆಯ ಸೂಚನೆ. ದೇವರು ಮತ್ತು ಪೃಥ್ವಿಯಲ್ಲಿ ಶ್ರದ್ಧಾಮಯ ಸೂತ್ರವಿದೆ. ಶ್ರದ್ಧೆ ಇಲ್ಲದೆ ಏನನ್ನೂ ಸಾಧಿಸಲಾಗುವುದಿಲ್ಲ. ಆದ ಕಾರಣ ಶ್ರದ್ಧಾಮಯ ಸೂತ್ರ ಎಂಬುದೇ ಜೀವಸೂತ್ರ. ಅದರ ಜೊತೆಗೆ ರಾಮನಾಮ ಸ್ಮರಣೆ ನಮಗೆ ಹೆಚ್ಚು ಹೆಚ್ಚು ಶಕ್ತಿಯನ್ನು ಕೊಡುತ್ತದೆ. ರಾಮನಾಮ ಸ್ಮರಣೆಗೆ ತಕ್ಕಂತೆ ಅದರ ಗಾತ್ರ ಹಿಗ್ಗಿ, ಅದು ಸ್ನೇಹಿತರು ಕೊಡುವ ಹುಮ್ಮಸ್ಸನ್ನು, ಆನಂದದೊಲ್ಮೆಯನ್ನು ಕೊಡುತ್ತದೆ. ನಾವೆಲ್ಲ ಸೂತ್ರಧಾರನ ಗೊಂಬೆಗಳು ಎಂಬುದೇ ದೈವದ ಕಲ್ಪನೆಯ ಮೂಲ. ನಾನು ಇದನ್ನು ಸಾಧಿಸಿದೆ ಎಂಬುದು ಸೀಮಿತ ಮಾತೇ ಹೊರತು ಅದಕ್ಕೆ ಮೂಲ ಕಾರಣ ಅನಂತಶಕ್ತನಾದ ದೇವರು. ಶ್ರೀವೈಷ್ಣವರಿಗೆ ಶ್ರೀರಂಗವು ಹೇಗೆ ಪವಿತ್ರಕ್ಷೇತ್ರವೊ ಹಾಗೆ ಧಾರವಾಡದ ನೆಲ ನನಗೆ ಪವಿತ್ರ ಎಂದು ಬೇಂದ್ರೆ ಹೇಳಿದ್ದಾರೆ.

ಬೇಂದ್ರೆಯವರ ಅಂತರಂಗದ ಅಭೀಪ್ಸೆಗಳೆಲ್ಲ ಇಲ್ಲಿ ರಸಮಯವಾಗಿ ಅಭಿವ್ಯಕ್ತಿಗೊಂಡಿವೆ. ತಾಯಿಗೆ ತಕ್ಕ ಮಗನಾದರೆ ಸಾಲದು, ಕನ್ನಡ ತಾಯಿಗೂ ತಕ್ಕ ಮಗನಾಗಬೇಕು, ಭಾರತಾಂಬೆಗೂ ತಕ್ಕ ಮಗನಾಗಬೇಕು ಎಂಬ ಹಂಬಲ ಅವರಲ್ಲಿ ಕ್ರಮಕ್ರಮವಾಗಿ ಬೆಳೆದಿದೆ. ಕಾವ್ಯರಚನಾ ನಿಮಗ್ನನಾದ ಕವಿಗೆ ಯಾವ ವಿಘ್ನಗಳು ಬಂದರೂ ದಿಕ್ಕು ತಪ್ಪುವುದಿಲ್ಲ. ಪರಮಾತ್ಮನೊಬ್ಬನೇ ಪುರುಷನೆಂದಾದ ಮೇಲೆ ಅವನಲ್ಲಿ ಒಂದಾಗುವುದೇ ಪರಮ ಪ್ರಯೋಜನ. ಈ ಪಂಚಭೌತಿಕವಾದ ದೇಹವು ಆ ಸಾಧನೆಗೊಂದು ಉಪಕರಣ. ಹೀಗಾದಾಗ ಕವಿಯ ಕಲ್ಪನೆಗಳು ಭಾವನೆಗಳು ದ್ಯಾವಾಪೃಥ್ವಿಯನ್ನೆಲ್ಲಾ ತುಂಬಿಕೊಳ್ಳುತ್ತವೆ. ಕ್ಷಣಭಂಗುರವಾದ ಪಂಚಭೂತಾತ್ಮಕವಾದ ಈ ಕಾಯವು ಅಳಿದು ಹೋದರೂ ಆತ್ಮನ ಆಧಾರದಿಂದ ಹೊಮ್ಮಿದ ಕವಿತೆಯು ಮಾತ್ರ ಅನಂತಕಾಲದ ವರೆಗೂ ಅನುರಣಿಸುತ್ತಿರುತ್ತದೆ.

### ಉತ್ಸಾಹ ತಿನುವುದು ಬೇಸರದ ಕಸಕಡ್ಡಿ

ಬೆಳಕು-ಕತ್ತಲೆ, ಸುಖ-ದುಃಖ, ನೋವು-ನಲಿವು ಈ ವೈರುಧ್ಯವು ಜೀವನದಲ್ಲಿ ಸಹಜ.

ಲಕ್ಷ ನಕ್ಷತ್ರಗಳಿದ್ದರೂ ಕತ್ತಲೆ ನಾಶವಾಗುವುದಿಲ್ಲ. ಅವು ಅವಳಿಜವಳಿ ಮಕ್ಕಳಿದ್ದ ಹಾಗೆ. ತಿಳಿ ನೀರು, ಬಗ್ಗಡದ ನೀರು ಎರಡೂ ಇರುತ್ತದೆ. ತಿಳಿ ನೀರಿನ ಸ್ವಚ್ಛತೆಯ ಮಹತ್ವ, ಜೀವಜಲದ ಅರಿವಾಗುವುದು ಬಗ್ಗಡದ ನೀರಿನಿಂದಲೆ. ಬೆಳಕಿನ ಮಹತ್ವ ಗೊತ್ತಾಗುವುದು ಕತ್ತಲೆಯಿಂದ. ಸೂರ್ಯೋದಯವಾದಾಗಲೇ ಕತ್ತಲೆ ಅಳಿವುದು. ಕಣ್ಣು ಮುಚ್ಚಿದ ಮೇಲೆ ಕತ್ತಲು ಕಾಣದು ಎಂಬುವುದು ಹೇಗೆ? ಕಣ್ಣುಮುಚ್ಚಿದ ಮೇಲೂ ಕಾಣದ ಕನಸನ್ನು ಕಾಣುವೆವು. ಕಣ್ಣು ಮುಚ್ಚಿದ್ದರೂ ಕಣ್ಣು ತೆರೆದಿರುತ್ತೇವೆ. ಅಂದರೆ ಒಳಗಣ್ಣು ತೆರೆದಿರುತ್ತದೆ ಎಂಬುದು ಇಲ್ಲಿನ ಅರ್ಥ. ಕಾಣಲಾರದ ಕನಸನ್ನು ನಮ್ಮ ಮನಸು ಕಾಣುತ್ತದೆ. ಹೊರಗಣ್ಣು ಮುಚ್ಚಿದ್ದರೂ ಒಳಗಿನ ಕಣ್ಣು ವ್ಯಾಪಕ ಚಿಂತನೆಯನ್ನು ಮಾಡುತ್ತ ಮಾಗುತ್ತಿರುತ್ತದೆ, ಚೈತನ್ಯಪೂರ್ಣವಾಗಿರುತ್ತದೆ. ಚೈತನ್ಯವೆಂಬುದು ಆತ್ಮನ ಸ್ವರೂಪ. ಅದಕ್ಕೆ ರಾತ್ರಿ ಹಗಲುಗಳಿಲ್ಲ ; ಎಚ್ಚರ ನಿದ್ರೆ ಕನಸುಗಳಿಲ್ಲ. ಅದೇ ಜಗತ್ತೆಲ್ಲವನ್ನು ಬೆಳಗುವ ತತ್ವ. ಆ ಆತ್ಮ ನಮ್ಮ ಸ್ವರೂಪ. ಹೀಗೆ ಹೊರ ಒಳಗೆ ಬೆಳಕಿದ್ದರೂ ನಾವು ಅಜ್ಞಾನವಶರಾಗಿ ಆತ್ಮವನ್ನರಿಯದೆ ಕತ್ತಲೆಯಲ್ಲಿಯೇ ತೊಳಲಾಡುತ್ತಿರುತ್ತೇವೆ.

ಬೇಂದ್ರೆಯವರ ತಾಯಿ, ಮುದ್ದು ಬಾಲಕ ಬೇಂದ್ರೆಯನ್ನು ಬೆಳೆಸುತ್ತಿರುವಾಗ, ಆತ ಕೇಳುತ್ತಿದ್ದ ಪ್ರಶ್ನೆಗಳಿಗೆ ಸಹನೆಯಿಂದ ಉತ್ತರ ನೀಡಿ ಅವನನ್ನು ರೂಪಿಸುತ್ತಿದ್ದಳು. ಬೇಂದ್ರೆಯವರನ್ನು ಚಿಕ್ಕಂದಿನಲ್ಲಿ ಕಾಡಿದ್ದು ಬೆಳಕು ಮತ್ತು ಕತ್ತಲೆಯ ಒಗಟು. ಅದು ಅವರನ್ನು ಚಿಂತನೆಗೀಡು ಮಾಡಿ ಕಾವ್ಯದಲ್ಲಿ ಪ್ರಕಾಶವಾಗಲು ಕಾರಣವಾಗಿದೆ ಎಂದು ಹೇಳಬಹುದು. ಅವರು ಆ ಘಟನೆಯನ್ನು ನೆನೆದು "ನನ್ನ ತಾಯಿ ಈ ಅಡಿಗೆ ಮಾಡಿಬಿಟ್ಟು ದೇವರನ್ನು ನೆನಸಿ ನಿನಗೆ ಉಣಲಿಕ್ಕೆ ಹಾಕ್ತೇನಪ್ಪ" ಅನ್ನುತ್ತಿದ್ದರು. ತಾಯಿಯನ್ನು ಕುರಿತು ಚಿಕ್ಕಂದಿನಲ್ಲಿ ನಾನು ಬರೆದ ಕವಿತೆಯೊಂದಿದೆ. ನಾನು ಎರಡು ವರ್ಷದ ಕೂಸಿದ್ದಾಗ ಕೈಗೆ ಸಿಗುತ್ತಿರಲಿಲ್ಲವಂತೆ. ೬ ತಿಂಗಳಿನಲ್ಲಿ ನಿನಗೆ ಕಾಲೂ ಬಂತು, ಬಾಯಿೂ ಬಂತು ಎನ್ನುತ್ತಿದ್ದರು ತಾಯಿ. ಯಾರ ಮನೆಯೊಳಗೋ ಹೋಗಿ ಮಾತಾಡ್ತಾ ಕೂತಿರ್ತಾನೆ ಹುಡುಕಿಕೊಂಡು ತಂದು ಊಟಕ್ಕೆ ಹಾಕಬೇಕು. ಅಲ್ಲಿ ಬಂದ ಮೇಲೆ ಕೋಣೆ ಎಲ್ಲ ಕತ್ತಲು ಮಾಡಬೇಕು. ಆಮೇಲೆ ದೀಪ ಹಚ್ಚಬೇಕು. ದೀಪ ಹಚ್ಚಿದ ಮೇಲೂ ಉಣ್ಣು ಅಂದರೆ ಉಣತಿದ್ದಿಲ್ಲ. ಯಾಕುಣ್ಣೊದಿಲ್ಲಾ? ಎಂದು ಪ್ರಶ್ನಿಸಿದಾಗ, ಹೊರಗೆ ಬೆಳಕಿತ್ತು, ಇಲ್ಲಿ ಕತ್ತಲೆ ಹೇಗಾಯ್ತು ? 'ಬೆಳಕೆ ಬೆಳಕಿದ್ದು ಕತ್ತಲೆಯು ಆಯಿತು ಹೇಗೆ ?' ಈ ಅನಾದಿ ಪ್ರಶ್ನೆ 'ತಮಸೋ ಮಾ ಜ್ಯೋತಿರ್ಗಮಯ'[೨೮] ಎಂದು ಮುಂದೆ ದೊಡ್ಡವನಾದ ಮೇಲೆ ತಿಳಿಯಿತು ಎಂದು ಹೇಳಿದ್ದಾರೆ. ಹೀಗೆ ಬಾಲ್ಯದಲ್ಲಿಯೇ ಬೇಂದ್ರೆಯವರ ಭಾವುಕತೆ Sentimental ಆಗದೆ Emotional ಆಯಿತು. ಹಾಗಾಗಿ ಅವರ ಭಾವಗೀತೆ ಸತ್ಯಕ್ಕೆ ಪ್ರತೀಕ. ಭಾವವೆಂದರೆ ಇರುವುದು ಹಾಗೂ ಸತ್ಯ. ಈ ಬಗೆಯ ಚಿಂತನೆಯನ್ನು ವಿ.ಕೃ. ಗೋಕಾಕರು "This is the question writ large in the

---

೨೮ ದ.ರಾ. ಬೇಂದ್ರೆ, ಉಯ್ಯಾಲೆ, ಸಮಾಜ ಪುಸ್ತಕಾಲಯ, ಧಾರವಾಡ, ೧೯೮೦, ಪು. ૨

Vedas and on the brows of suffering humanity" ಎಂದು ಕರೆದು ಬೇಂದ್ರೆಯವರಿಗೆ ಬಾಲ್ಯದಲ್ಲಿ ಕಾಡಿದ ಈ ಸಮಸ್ಯೆಯನ್ನು "The utterance gains a stabbing irony in retrospective narration"[೨೯] ಎಂದಿದ್ದಾರೆ. ಕತ್ತಲೆಯ ಅಂತರಂಗದಲ್ಲಿಯೆ ಬೆಳಕಿರುವುದನ್ನು ಬೆಳೆಬೆಳೆಯುತ್ತಾ ಬೇಂದ್ರೆ ತಿಳಿದರು. ಅದು ಅವರಲ್ಲಿ 'ಕಣ್ಣ ಕಾಣಿಕೆ'ಯಾಗಿ ಅರಳಿತು.

'ಅಂತರಂಗದಾ ಮೃದಂಗ ಅಂತು ತೋಂ ತನಾನಾ ।
ಚಿತ್ತ ತಾಳ ಬಾರಿಸುತ್ತಲಿತ್ತು ಝುಂ ಝಣಾಣಾ ।
ನೆನಪು ತಂತಿ ಮೀಟುತಿತ್ತು ತಂತನನನ ತಾನಾ ॥

* * *

ಕತ್ತಲಲ್ಲೆ ಬೆಳಕು ಮಿಂಚಿ ಪಡೆದಿತೇಳು ಬಣ್ಣ
ಮೂಕ ಮೌನ ತೂಕ ಮೀರಿ ದನಿಯು ಹುಟ್ಟಿ ಸಣ್ಣ
ಕಣ್ಣಮಣ್ಣ ಕೂಡಲಲ್ಲಿ ಹಾಡು ಕಟ್ಟಿತಣ್ಣ ॥'

(ಕಣ್ಣ ಕಾಣಿಕೆ : ಗಂಗಾವತರಣ)

ಅದು ಕತ್ತಲು ಬೆಳಕಾದ, ಮೌನ ಮಾತಾದ, ಸೊಬಗು ಹಾಡಾದ ವ್ಯಕ್ತಿಚೈತನ್ಯದ ವಿಕಾಸ.

ಹಸಿವು, ನೀರಡಿಕೆ ತಪ್ಪಿದ್ದರೆ ಅನ್ನಛತ್ರದ ಅವಶ್ಯಕತೆ ಇರಲಿಲ್ಲ. ಆದರೆ ದೇವರು ಅವೆರಡನ್ನು ಇಟ್ಟಿದ್ದಾನೆ. ಅದರಿಂದ ಮನುಷ್ಯ ತನ್ನ ದೌರ್ಬಲ್ಯಗಳನ್ನೆಲ್ಲ ಕಳಚಿಕೊಂಡು ಅನುಭವ ವಿಶೇಷದಿಂದ ಮಾಗಲು ಸಾಧ್ಯವಾಗುತ್ತಿದೆ.

'ಉತ್ಸಾಹ ತಿನುವುದು ಬೇಸರದ ಕಸಕಡ್ಡಿ
ಮಣ್ಣಿಗೆ ಬೆಳೆಗಿಳೆ ಏಸರವೋ?'

ಬೇಸರದಲ್ಲಿಯೂ ಉತ್ಸಾಹ ಮೂಡಿಬರುತ್ತದೆ. ಚೈತನ್ಯ ಹೊರಹೊಮ್ಮುತ್ತದೆ. ಬೇಸರದ ಅಪ್ರಯೋಜಕವೆನಿಸಿದ ಕಸಕಡ್ಡಿಯ ಮಣ್ಣಿನಲ್ಲೆ ಬೆಳೆ ಮೂಡುತ್ತದೆ. ಹಗಲು ಇರುಳು ಜೊತೆಯಲ್ಲಿರುವ ಹಾಗೆ ಮೋಜು ಮತ್ತು ಜೂಜಾಟ ಬೆನ್ನು ಬೆನ್ನಿಗೆ ಅಂಟಿ ಇರುತ್ತವೆ. ಕುಸ್ತಿ ಆಡಬೇಕಾದರೆ ಎರಡು ಗುಂಪಿನ ಸಮಜೋಡಿ ಇರಬೇಕಾಗುತ್ತದೆ. ಅದು ದಾಯಾದಿಗಳಾದ ದುರ್ಯೋಧನ ಭೀಮರಂತೆ. ಅವರಲ್ಲಿ ಯಾರನ್ನು ಮಲಗಿಸಬೇಕು, ಯಾರನ್ನು ಏಳಿಸಬೇಕು ಎನ್ನುವುದು ಮಾಯಾವಿಯಾದ ಸೂತ್ರಧಾರನ ಆ ಕಾಣದ ಕೈಗೆ ಗೊತ್ತಿರುತ್ತದೆ.

---

೨೯ ವಿ.ಕೃ. ಗೋಕಾಕ್, Bendre Poet and Seer, ಸೋಮಯ್ಯ ಪಬ್ಲಿಕೇಷನ್ಸ್ ಪ್ರೈ. ಲಿ., ಬಾಂಬೆ, ೧೯೭೦, ಪು. ೩೨

'ಮೋಜಿನ ಜೂಜಾಟ, ಈ ಕಣ್ಣ ಮುಚ್ಚಣಿಕೆ
ಹಗಲಿರುಳು ಎಂಬಂತೆ ಬೆನ್‌ಬೆನ್ನಿಗೆ
ದಾಯಾದಿ ಮಾಯಾವಿ ಎದುರಾಳಿ ಗಡಿ ಜೋಡಿ
ತಿಳಿದಂತೆ ಆಡುವುದು ಕೈಸನ್ನೆಗೆ'

ಕಾಲ ಎಂದರೆ ಈ ದಿವಸ ಹಿಂದಿನ ದಿವಸವನ್ನು ನುಂಗುವುದು ; ಮಾಸಮಾಸದೊಳು ಇಂಗಿ ಹೋಗುವುದು, ಬತ್ತಿ ಹೋಗುವುದು. ಹೀಗೆ ವರ್ಷದ ಬುಗುರಿ ತಿರುಗುತ್ತಿದೆ. ಕಳೆದ ಕಾಲವನ್ನು ಮರಳಿಪಡೆಯಲಾಗುವುದಿಲ್ಲ. ಹುಟ್ಟಿದ ದಿನ ತಾನು ಬೆಳೆದ ದಿನದಲ್ಲಿ ಕೂಡಿ ಪಿಂಡವು ತಾಯಿಯ ಹೊಟ್ಟೆಯಲ್ಲಿಯೇ ಪುಂಡತನ, ತಂಟೆ ಹೋರಾಟವನ್ನು ಮಾಡುತ್ತಿದೆ ಎಂಬ ಅರಿವು ತನಗಾಯಿತು- ಎಂದು ಬೇಂದ್ರೆ ಕಾಲದ ಬಗ್ಗೆ ನುಡಿದಿದ್ದಾರೆ.

ತಾಯಿನುಡಿ ಕನ್ನಡವು ಹಿಂದಾಗಿ, ಹೊಸದಾಗಿ ಕಲಿತ ಇಂಗ್ಲಿಷು ಮುಂದಾಗಿ ; ಮರಾಠಿ, ಸಂಸ್ಕೃತವೂ ನನ್ನ ಜೊತೆಗಿತ್ತು. ಜಗನ್ನಾಥನ ಗಂಗೆ ಅಂದರೆ ಈಶ್ವರನ ತಲೆಯಿಂದ ಧುಮ್ಮಿಕ್ಕಿದ ಎಂಬ ದೈವಕೃಪೆ ಹಾಗೂ ಜಗನ್ನಾಥನ ಗಂಗಾಲಹರಿ ನನ್ನೊಳಗೆ ಹರಿಯುತ್ತಿರುವಾಗ ಇಂಗ್ಲಿಷನ್ನು ಕನ್ನಡಕ್ಕೆ ರೂಪಾಂತರಿಸಿ ಅದರ ಹಿರಿಮೆಯನ್ನು ನನ್ನ ಭಾಷೆಗೆ ತಂದೆನು ಎಂದಿದ್ದಾರೆ. ಇಂಗ್ಲಿಷ್, ಸಂಸ್ಕೃತ, ಮರಾಠಿ ಭಾಷೆಯನ್ನು ತಾನು ಕಲಿತರೂ ಅವು ತನ್ನ ವಿದ್ಯಾಭ್ಯಾಸದಲ್ಲಿ ಜೊತೆಜೊತೆಯಾಗಿ ಬಂದರೂ ಅವುಗಳನ್ನು ತನ್ನ ಕನ್ನಡ ಅರಗಿಸಿಕೊಂಡಿತು. ತನ್ನತನವನ್ನು ಉಳಿಸಿಕೊಂಡಿತು. ನೂರಾರು ನದಿಯ ನೀರನ್ನು ಒಳಗೊಳ್ಳುವ ಸಮುದ್ರದಂತೆ ನನ್ನ ಕನ್ನಡ ಸಂಸ್ಕೃತಿ ಇತರ ಸಂಸ್ಕೃತಿಯನ್ನು ತನ್ನಲ್ಲಿ ಅರಗಿಸಿಕೊಂಡಿತು ಎಂದು ಬೇಂದ್ರೆ ಹೆಮ್ಮೆಪಟ್ಟಿದ್ದಾರೆ.

'ಹೇಗೆ ಉರುಳಿದವೇನೊ ಒಂದಲ್ಲ ಎರಡಲ್ಲ
ಹರುಷದ ವರುಷಗಳೆರಡಿಪ್ಪತ್ತು'

ಎರಡಿಪ್ಪತ್ತು ಎಂದರೆ ಎರಡು ಮತ್ತು ಇಪ್ಪತ್ತು ಕೂಡಿದ ಇಪ್ಪತ್ತೆರಡು ವರುಷಗಳು. ಇಪ್ಪತ್ತೆರಡರ ಹರಯದ ಹರ್ಷದಲ್ಲಿದ್ದಾಗ ಭಾರತ ಭಾಗ್ಯವಿಧಾತನು ಸ್ವಾತಂತ್ರ್ಯ ಚಳುವಳಿಗೆ ಧುಮುಕಲು ಸೂಚಿಸಿದ ಎಂದು ಆ ಕಾಲವನ್ನು ಕಾವ್ಯವಾಗಿಸಿದ್ದಾರೆ.

ಈ ಭಾಗದಲ್ಲಿ ಬೇಂದ್ರೆಯವರ ಜೀವನ ಕಥೆಯ ಚಿಂತನೆಗಳು ಆಧ್ಯಾತ್ಮಿಕ ಚಿಂತನೆಗಳೊಂದಿಗೆ ಬಿಚ್ಚಿ ಬೇರಿಲ್ಲದಂತೆ ನೇಯ್ದುಕೊಂಡಿವೆ. ಮಾನವ ಜೀವಿತದ ಪರಮಪುರುಷಾರ್ಥದತ್ತ ನಮ್ಮನ್ನು ಒಯ್ಯುವ ಅಮೂಲ್ಯ ರಸಧಾರೆ ಇಲ್ಲಿದೆ. ಪಂಚಭೂತಗಳಿಂದಾದ ದೇಹಕ್ಕೆ ಅನಗತ್ಯವಾದ ಪೋಷಣೆ ಸಲ್ಲದು. ಅಧ್ಯಾತ್ಮ ಸಾಧನೆಗೆ, ಕಾವ್ಯಸಾಧನೆಗೆ, ಲೋಕಸಂಗ್ರಹಕ್ಕೆ ಅದನ್ನೊಂದು ಮಾಧ್ಯಮವಾಗಿಸಿಕೊಳ್ಳಬೇಕಷ್ಟೆ. ಅದಕ್ಕೆಷ್ಟು ಬೇಕೋ ಅಷ್ಟು ಅನ್ನಾಹಾರಗಳನ್ನು ಈ ದೇಹಕ್ಕೆ ನೀಡಿದರೆ ಸಾಕು. ಉಪನಿಷತ್ತುಗಳು ನಾವು ಸ್ವೀಕರಿಸುವ ಅನ್ನವು ಮೂರು ಭಾಗವಾಗಿ

ವಿಂಗಡಣೆಗೊಳ್ಳುತ್ತವೆಂದು ಹೇಳುತ್ತವೆ. ಮೊದಲನೆಯ ಭಾಗ ರಕ್ತ ಮಾಂಸಗಳಾಗುತ್ತವೆ. ಎರಡನೆಯ ಭಾಗ ಮನಸ್ಸಾಗುತ್ತದೆ. ಮೂರನೆಯ ಭಾಗ ತನ್ನ ಕಾರ್ಯವನ್ನು ಮುಗಿಸಿ ದೇಹದಿಂದ ಹೊರಬೀಳುತ್ತದೆ. ಕಾವ್ಯತಪಸ್ವಿಯಾಗಿದ್ದ ಕವಿ ಲೋಕದತ್ತ ಕಣ್ಣು ಹಾಯಿಸಿದಾಗ ಕಂಡದ್ದೇನು? ಕನ್ನಡ ಭಾಷೆಯ ಹಿನ್ನಡೆ, ಆಂಗ್ಲಭಾಷೆಯ ಮೆರವಣಿಗೆ, ಭಾರತಾಂಬೆಗೆ ತೊಡಿಸಿರುವ ಸಂಕೋಲೆ. ಇದೆಲ್ಲವನ್ನು ತನ್ನ ಕೈಲಾದ ಮಟ್ಟಿಗೆ ಸರಿಪಡಿಸಬೇಕೆಂದು ಸಂಕಲ್ಪಮಾಡಿದ ಕವಿ ತನ್ನ ಕವಿತೆಯ ಮೂಲಕ ತನ್ನ ಲೌಕಿಕ ಕರ್ಮಗಳ ಮೂಲಕ ತಮ್ಮ ಕೊಡುಗೆಗಳನ್ನು ನೀಡಿದರು. ಕವಿಯಾದವನು ಕವಿಯಾಗಷ್ಟೆ ಎಲ್ಲಿಯೋ ದಂತಗೋಪುರದಲ್ಲಿ ಕುಳಿತುಕೊಳ್ಳುವವನಾಗಬಾರದು. ಲೋಕಸಂಗ್ರಹದ ಕರ್ತವ್ಯವನ್ನು ಕಾವ್ಯನಿರ್ಮಿತಿಯ ಜೊತೆಗೆ ಕಾಯೇನ ವಾಚಾ ಮನಸಾ ನಿರ್ವಹಿಸಬೇಕು ಎಂಬ ತತ್ವ ಇಲ್ಲಿ ತಾನೇ ತಾನಾಗಿ ಪ್ರಕಟಗೊಂಡಿದೆ.

### ಕನ್ನಡಿ ಒಡೆದರೆ ಕಲ್ಲಿಗೆ ಯಾ ದುಃಖ

ಬೇಂದ್ರೆಯವರು 'ನಾನು ೧೦-೧೨ ವರುಷದವನಿರುವಾಗಲೆ ಭಾರತೀಯ ಸ್ವದೇಶಿ ಚಳುವಳಿಯ ಗಾಳಿಗೆ ಸಿಕ್ಕೆ. ಅದರಲ್ಲಿಯೆ ರವೀಂದ್ರ, ರಾಮಕೃಷ್ಣ, ರಾಮತೀರ್ಥ, ದಯಾನಂದ, ಥಿಯಾಸಫಿ, ಸನಾತನ ಧರ್ಮ ಇವುಗಳ ಎಳೆದಾಟದಲ್ಲಿ ಒದ್ದಾಡಿದೆ. ಸಮರ್ಥ ರಾಮದಾಸರ ದಾಸಬೋಧದಿಂದ (ಅದು ಶ್ರೀ ಬ್ರಹ್ಮಚೈತನ್ಯರ ನಿಮಿತ್ತವಾಗಿ), ಸ್ವಲ್ಪ ಎಚ್ಚತ್ತೆ'[೩೦] ಎಂದು ತಮ್ಮಲ್ಲಿ ಮೂಡಿದ ರಾಷ್ಟ್ರೀಯ ಭಾವನೆಯ ಅಂಕುರವನ್ನು ತಿಳಿಸಿದ್ದಾರೆ. ಅದು ಜನಾಂಗವನ್ನು ರೂಪಿಸುವ, ಚಿಂತನಶೀಲಮನದವನಾಗಿ ಕಾರ್ಯಕೈಗೊಳ್ಳುವ ರೀತಿಯದು. ಹೋರಾಟದ ಮನೋಭಾವದ್ದಲ್ಲ. ಆ ದೃಷ್ಟಿಯಲ್ಲಿ ಸಾಗಿ ಜನರನ್ನು ಎಚ್ಚರಿಸಲು, ಜನಾಂಗವನ್ನು ರೂಪಿಸಲು ಬೇಂದ್ರೆಯವರು ಕವಿಯಾದರು, ಶಿಕ್ಷಕರಾದರು. ಬ್ರಿಟಿಷರ ಆಡಳಿತದಲ್ಲಿ ಮತ್ತು ಸ್ವತಂತ್ರ್ಯಾನಂತರದ ಕಾಲದಲ್ಲಿ ಕರ್ನಾಟಕದ ಸಾಂಸ್ಕೃತಿಕ ಐಕ್ಯತೆಯನ್ನು ಕಾಪಾಡುವಲ್ಲಿ ಪ್ರಮುಖ ಪಾತ್ರವಹಿಸಿದರು.

ಬೇಂದ್ರೆಯವರು ಸಮಾಜ ಚಿಂತಕರಾಗಿ, ಸಾಹಿತ್ಯಕ್ರಾಂತಿಯ ಮೂಲಕ ಜನರ ಮನಃ ಪರಿವರ್ತನೆ ಮಾಡಲು ಶ್ರಮಿಸಿದರು. ಶಿಕ್ಷಕರಾಗಿ ವಿದ್ಯಾರ್ಥಿಗಳನ್ನು ನಾಡುನುಡಿಯ ಅಭಿಮಾನಿಗಳನ್ನಾಗಿಸಿ ಅವರನ್ನು ಉತ್ತಮ ಪ್ರಜೆಗಳನ್ನಾಗಿಸುವಲ್ಲಿ ಶ್ರಮಿಸಿದರು. ದ್ವೇಷ ಅಸೂಯಾರಹಿತವಾದ ಮೈತ್ರಿಯಿಂದಲೇ ಎಲ್ಲವನ್ನು ಸಾಧಿಸುವ ಕನಸು ಕಂಡರು. ಯೋಗಿ ಅರವಿಂದರ ಅನುಯಾಯಿಯಾಗಿ ಜನಜಾಗೃತಿಯಲ್ಲಿ ತೊಡಗಿದ್ದು, ಸ್ವಾತಂತ್ರ್ಯ

---

೩೦ ದ.ರಾ. ಬೇಂದ್ರೆ, ಮೊದಲಮಾತು ; ವಿನೀತ ರಾಮಚಂದ್ರ ರಾಯರು - 'ಕನ್ನಡ ಸಾಹಿತ್ಯ ಸಾಹಿತಿಗಳ ಮೇಲೆ ಮಹರ್ಷಿ ಅರವಿಂದರ ಪ್ರಭಾವ' ಪ್ರಮೋದ ಮಂಟಪ, ಧಾರವಾಡ ೧೯೭೩, ಪು ೧

ಆಂದೋಲನದಲ್ಲಿ ನೇರ ಚಳುವಳಿಗೆ ಧುಮುಕಲಿಲ್ಲ. ಅವರು ಸಾತ್ವಿಕ ಮಾರ್ಗಾನುಯಾಯಿಗಳಾಗಿದ್ದರು. ಅವರದು ಸೈದ್ಧಾಂತಿಕವಾದ, ವೈಚಾರಿಕವಾದ, ಸ್ನೇಹಪರವಾದ ಚಿಂತನಾ ಮಾರ್ಗವಾಗಿತ್ತು.

ಅವರು ವಾಸಿಸುತ್ತಿದ್ದ ಕಾಮನಕಟ್ಟೆಯು ರಾಷ್ಟ್ರೀಯ ಚಳುವಳಿಯ ಧಾರವಾಡ ಪ್ರಾಂತ್ಯದ ಪ್ರಮುಖ ನೆಲೆಯಾಗಿತ್ತು. ಉಜ್ವಲವಾದ ರಾಷ್ಟ್ರೀಯ ವಾತಾವರಣವು ಬಾಲಕರಾದ ಬೇಂದ್ರೆಯವರನ್ನು ರಾಷ್ಟ್ರಾಭಿಮಾನಿಯಾಗಿ ಮಾಡಿತು. ಧಾರವಾಡದಲ್ಲಿ ಸ್ವಾತಂತ್ರ್ಯ ಹೋರಾಟ ೧೯೨೧ರಲ್ಲಿ ಉಗ್ರರೂಪ ತಾಳಿತು.

## ಧಾರವಾಡದಲ್ಲಿ ಗೋಲಿಬಾರು

'ಧಾರವಾಡದಲ್ಲಿ ೧-೭-೧೯೨೧ರಂದು ಹೆಂಡದ ಗಡಂಗದ ಮುಂದೆ ಪಿಕೆಟಿಂಗ್ ನಡೆದಿತ್ತು. ಅಂದಿನ ಕಾಂಗ್ರೆಸ್ ಕಾರ್ಯಕ್ರಮದ ಪ್ರಕಾರ ಈ ಪಿಕೆಟಿಂಗ್ ನಡೆದಾಗ ಪೋಲಿಸ ಅಧಿಕಾರಿಗಳು ಗುಂಡು ಹಾರಿಸಿದ ಪರಿಣಾಮವಾಗಿ ಮೂರು ಜನರು ಅಸುನೀಗಿದರು. ಈ ಪ್ರಕರಣದಲ್ಲಿ ಧಾರವಾಡದ ಅನೇಕ ಕಾಂಗ್ರೆಸ್ ಕಾರ್ಯಕರ್ತರನ್ನು ಸುಳ್ಳು ಆರೋಪಗಳ ಮೇಲೆ ಸರಕಾರ ಬಂಧಿಸಿತು. ಹೀಗೆ ಬಂಧಿತರಾದವರಲ್ಲಿ ಸರ್ವಶ್ರೀ ಗೋಪಾಳರಾವ ದೇಶಪಾಂಡೆ, ಹನುಮಂತರಾವ ದೇಸಾಯಿ, ರಂಗರಾವ ದಿವಾಕರ, ಕೃಷ್ಣರಾವ ಮುದವೇಡಕರ, ವೆಂಕಟರಾವ ಮುದವೇಡಕರ, ಗೋವಿಂದಾಚಾರ್ಯ ಗುತ್ತಲ ವಕೀಲ, ಮಧ್ವರಾವ ಕಬ್ಬೂರ ವಕೀಲ, ಅನಂತರಾವ ದಾಬಡೆ, ನಾರಾಯಣರಾವ ಬಿಸೆ ಇವರೇ ಮೊದಲಾದವರು ಇದ್ದರು. ಬಂಧಿತರಾದವರಲ್ಲಿ ಕೆಲಜನ ಮುಸಲ್ಮಾನ ಬಂಧೂಗಳೂ ಇದ್ದರು. ಇವರೆಲ್ಲರ ಮೇಲೂ ಮೊಕದ್ದಮೆ ನಡೆಯಿತು. ಆಗ ದಕ್ಷಿಣ ಭಾಗದ ಕಮಿಶನರ್ ಮತ್ತು ಮುಂಬಯಿ ಸರಕಾರದ ಹೋಂ ಮೆಂಬರ್ ಧಾರವಾಡಕ್ಕೆ ಬಂದು ವಿಚಾರಣೆ ಮಾಡಿಕೊಂಡು ಹೋದರು. ಪದ್ಧತಿಯಂತೆ ಮ್ಯಾಜಿಸ್ಟ್ರೇಟರ ಮುಂದೆ ವಿಚಾರಣೆ ಆಗಿ ಮೊಕದ್ದಮೆ ಸೆಷೆನ್ ಕೋರ್ಟಿಗೆ ಕಮಿಟ್ ಮಾಡಲಾಯಿತು. ಆರೋಪಿಗಳು, ಗಾಂಧೀಜಿ ತತ್ವಕ್ಕೆ ಅನುಗುಣವಾಗಿ, ಮೊಕದ್ದಮೆಯಲ್ಲಿ ಭಾಗವಹಿಸಲು ನಿರಾಕರಿಸಿದರು. ಅವರು ಕೇವಲ ತಮ್ಮ ಹೇಳಿಕೆ ಕೊಡುವುದಕ್ಕಿಂತ ಹೆಚ್ಚಿನದೇನನ್ನೂ ಮಾಡಲಿಲ್ಲ.

'ಮುಂಬಯಿ ಎ.ಐ.ಸಿ.ಸಿ. ಸಭೆಯಲ್ಲಿ ಧಾರವಾಡ ಗೋಲಿಬಾರ್ ಪ್ರಶ್ನೆ ಬಂದು ಕಾಂಗ್ರೆಸ್ ಪರವಾಗಿ ಈ ಪ್ರಕರಣದ ವಿಚಾರಣೆ ನಡೆಯಬೇಕೆಂದು ನಿರ್ಣಯವಾಯಿತು. ಅದರಂತೆ, ಅಬ್ಬಾಸ್ ತಯ್ಯಬ್‌ಜಿ ಅವರ ನೇತೃತ್ವದಲ್ಲಿ ಒಂದು ವಿಚಾರಣಾ ಸಮಿತಿ ಏರ್ಪಟ್ಟಿತು. ಮುಖಂಡರಲ್ಲಿ ಯಾರಾದರೂ ಧಾರವಾಡಕ್ಕೆ ಹೋಗಿ, ಬಂಧನದಲ್ಲಿದ್ದ ಆರೋಪಿಗಳನ್ನು ಕಂಡು ಬಂದರೆ, ಅವರಿಗೆಲ್ಲಾ ಸಮಾಧಾನವಾಗುವದೆಂದು ಗಾಂಧೀಜಿ ಹೇಳಿದ್ದರಿಂದ ಲಾಲಾಲಜಪತರಾಯರು ಮತ್ತು ಶೌಕತ್ ಅಲಿ ಧಾರವಾಡಕ್ಕೆ ಬಂದರು.....

'ಈ ಗೋಲಿಬಾರ್ ಪ್ರಕರಣದ ಸಂಬಂಧದಲ್ಲಿ ಗಾಂಧೀಜಿ ೧೪-೭-೧೯೨೧ರಲ್ಲಿ ಒಂದು ಸಂದೇಶ ಕಳಿಸಿದ್ದು ಅದು ಹೀಗಿದೆ : ಧಾರವಾಡದಲ್ಲಿ ಸರಕಾರ ಮಾಡುತ್ತಿರುವ ಕೆಲಸವನ್ನು ಆಸಕ್ತಿಯಿಂದ ನಾನು ಗಮನಿಸುತ್ತಿದ್ದೇನೆ. ಸರಕಾರದ ದಬ್ಬಾಳಿಕೆಗೆ ಗುರಿಯಾದವರ ಬಳಗದವರಿಗೆ ನನ್ನ ಅಭಿನಂದನೆಗಳು. ಒಟ್ಟಿನಲ್ಲಿ ಜನತೆಯನ್ನೇ ನಾನು ಅಭಿನಂದಿಸುತ್ತೇನೆ. ಅವರ ಧೈರ್ಯ ಸ್ಥೈರ್ಯ ಸಹನೆಗಳಿಗೆ ಅಭಿನಂದಿಸುತ್ತೇನೆ. ಅಲ್ಲಿ ದಸ್ತಗಿರಿಗಳಿಂದ ಧಾರವಾಡದ ಜನರ ನೀತಿ ಸ್ವಲ್ಪವೂ ಕೆಡಲಿಲ್ಲವೆಂದು ಕೇಳಿ ನನಗೆ ಸಂತೋಷವಾಗಿದೆ.[೩೧] ಇದು ಕರ್ನಾಟಕದಲ್ಲಿ ಸ್ವಾತಂತ್ರ್ಯದ ಹೋರಾಟ ತೀವ್ರಗೊಂಡ ಚರಿತ್ರೆ. ಅದನ್ನು ಬೇಂದ್ರೆಯವರು :

'ಬಡವರ ಮನೆಗೆಂತೊ ಭಾಗೀರಥಿ ಬಂತೊ
ಅಂತು ಇಂತು ಬಂತು ಕನ್ನಡಕೆ.
ರಾಷ್ಟ್ರೀಯ ಸಭೆಯ ಸವಾರಿಯು ದಯಮಾಡಿ
ಎಡೆಮಾಡಿ ಹೋಯಿತು ಮುನ್ನಡೆಗೆ'

ಎಂದು ಚಿತ್ರಿಸಿದ್ದಾರೆ. ಆಗ ಬ್ರಿಟೀಷರು ಒಡೆದು ಆಳುವ ಪ್ರವೃತ್ತಿಯಲ್ಲಿದ್ದರು. ಅದು ಅವರ ಭೇದದ ರೀತಿ. ಆದರೆ ಭಾರತೀಯರೆಲ್ಲರೂ ಅಭೇದದ ಪ್ರೀತಿಯಿಂದ ಒಂದಾಗಿ ಅವರನ್ನು ಎದುರಿಸಿದರು ಎಂದು ಬೇಂದ್ರೆಯವರು ಆ ಕಾಲದ ಭಾರತೀಯರ ಮನಸ್ಸನ್ನು ಕಾವ್ಯವಾಗಿ ಕಡೆದಿದ್ದಾರೆ.

'ಕನ್ನಡಿ ಒಡೆದರೆ ಕಲ್ಲಿಗೆ ಯಾ ದುಃಖ ?
ಚುನ್ನಾಟ, ಚಿನ್ನಾಟ ಎನಿಸುವುದು
ಭೇದದ ನೀತಿ ಅಭೇದದ ಪ್ರೀತಿಗೆ
ಎದುರಾಗಿ ಇದಿರ್ಗೊಂಡೆ ಎಣಿಸುವುದು'

**ಕರ್ನಾಟಕಕ್ಕೆ ಪ್ರತ್ಯೇಕ ಸ್ಥಾನಮಾನ**

'ಆಲೂರ ವೆಂಕಟರಾಯರು ೧೯೧೬ರಲ್ಲಿ ತಿಲಕರ ಹೋಂರೂಲ್ ಚಳವಳದಿಂದ ಉತ್ಸಾಹಿತರಾಗಿ ಮುಂದೆ ಬಂದರು. ಗಂಗಾಧರರಾ ದೇಶಪಾಂಡೆಯವರ ಹಿರಿತನದಲ್ಲಿ ಧಾರವಾಡದಲ್ಲಿಯೇ ಹೋಮ್‌ರೂಲ್ ಲೀಗಿನ ಕರ್ನಾಟಕದ ಶಾಖೆ ಸ್ಥಾಪಿಸಲ್ಪಟ್ಟಿತು.

'ರಾಜಕೀಯ ಹಾಗೂ ಆಡಳಿತ ದೃಷ್ಟಿಯಿಂದ ಕರ್ನಾಟಕಕ್ಕೆ ಒಂದು ಅಸ್ತಿತ್ವವಿರಬೇಕೆಂಬ ಭಾವನೆ ಬೆಳದದ್ದೂ ಇದೇ ಕಾಲದಲ್ಲಿ. ಈ ವಿಷಯವನ್ನು ಜನರಲ್ಲಿ ಬಿಂಬಿಸುವುದಕ್ಕಾಗಿ ಆಲೂರ ವೆಂಕಟರಾಯರು ಮತ್ತು ಕಡಪ ರಾಘವೇಂದ್ರರಾಯರೂ 'ಕರ್ನಾಟಕದ ಸಭೆ'ಯನ್ನು ಧಾರವಾಡದಲ್ಲಿ ಸ್ಥಾಪಿಸಿದರು. ಮುಂದೆ ೧೯೨೦ರಲ್ಲಿ ಸೇರಿದ ನಾಗಪುರ ಕಾಂಗ್ರೆಸ್

---

೩೧ ಸಿದ್ಧವನಹಳ್ಳಿ ಕೃಷ್ಣಶರ್ಮ (ಸಂ). ಗಾಂಧೀ ಮತ್ತು ಕರ್ನಾಟಕ, ಗಾಂಧೀಸ್ಮಾರಕ ನಿಧಿ, ಬೆಂಗಳೂರು, ೧೯೬೯, ಪು. ೪೭, ೪೮

ಅಧಿವೇಶನಕ್ಕೆ ಕಡಪಾ ರಾಘವೇಂದ್ರರಾಯರು ನೂರಾರು ಪ್ರತಿನಿಧಿಗಳೊಂದಿಗೆ ಹೋಗಿ ಬಲವಾದ ಬೇಡಿಕೆಯನ್ನು ಮಂಡಿಸಿದ್ದರಿಂದ ಕರ್ನಾಟಕಕ್ಕೆ ಪ್ರತ್ಯೇಕ ಸ್ಥಾನಮಾನಗಳು ಲಭಿಸಿದವು....’[೩೨] ಎಂದು ಬಾಲಚಂದ್ರ ವೆಂಕಟೇಶ ಘಾಣೆಕರ ಅವರು ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳಲ್ಲಿ ನೆನೆದಿದ್ದಾರೆ.

ಕರ್ನಾಟಕ ಮತ್ತು ಮಹಾರಾಷ್ಟ್ರೀಯರಲ್ಲಿ, ರಾಜ್ಯ ಹಾಗೂ ಭಾಷಾವಿಷಯದಲ್ಲಿ ಅಭಿಮಾನವಿದ್ದು, ಭಿನ್ನಭಿಪ್ರಾಯಗಳಿದ್ದವು. ವಿದ್ಯಾವಂತರೆನಿಸಿಕೊಂಡರೂ ಕೋಡಿತನ, ನೀಚತನದ ಅವಿದ್ಯಾ ಲಕ್ಷಣಗಳು ಅವರಲ್ಲಿದ್ದವು. ಆಗ ರಾಜ್ಯ ವಿಂಗಡಣೆಯಾಗಿ ಪ್ರದೇಶಗಳ ಆದಾನ ಪ್ರಧಾನವಾಗಿರಲಿಲ್ಲ. ಪ್ರತ್ಯೇಕ ರಾಜ್ಯಗಳ ಆಡಳಿತದಲ್ಲಿ ರಾಜಕೀಯ ಲಾಭಕ್ಕಾಗಿ ಭಾಷಾವೈಷಮ್ಯ ಬೆಳೆಸುವ ಸಣ್ಣತನ ಬೆಳೆದಿರಲಿಲ್ಲ. ಅದನ್ನು ಬೇಂದ್ರೆಯವರು ‘ಬತ್ತಿರಲಿಲ್ಲಾಗ ದಾನ ಧನ’ ಎಂದಿದ್ದಾರೆ.

ಕೊಂಕಣ ಎಂದರೆ ಮಹಾರಾಷ್ಟ್ರ, ತೆಂಕಣ ಎಂದರೆ ಕರ್ನಾಟಕ ಆ ಎರಡೂ ಪ್ರದೇಶಗಳ ಜನರಲ್ಲಿ ಬಾಂಧವ್ಯದ ಸ್ನೇಹವಿತ್ತು, ಪರಸ್ಪರ ಪ್ರೀತಿ ವಿಶ್ವಾಸವಿತ್ತು. ಆ ಜೀವಗುಣ ಭಗ್ನವಾಗಿರಲಿಲ್ಲ. ಆಗಿನ ಭಾಷಾಬಾಂಧವರಲ್ಲಿಯ ಘರ್ಷಣೆಯಲ್ಲಿಯೂ ಒಂದು ಹೊಂದಾಣಿಕೆ ಇತ್ತು. ಕಿಡಿಗೇಡಿತನ ದಟ್ಟಡಿ ಅಂದರೆ ತಪ್ಪು ಹೆಜ್ಜೆ ಇಡುತ್ತಿದ್ದರೂ ಕನ್ನಡ ಮರಾಠಿ ಎರಡು ಮನಸ್ಸುಗಳು ಘರ್ಷಣೆಗೆ ಎಡೆಗೊಟ್ಟಿರಲಿಲ್ಲ. ತೊದಲಾಡಿ ಅಂದರೆ ತೊದಲು ತೊದಲಾಗಿ ಭಿನ್ನಾಭಿಪ್ರಾಯವನ್ನು ಮಾತಾಡಿಕೊಂಡು ಅಡಗಿ ಹೋಗಿತ್ತು. ಭಾಷಾಸಮಸ್ಯೆ, ಗಡಿ ಸಮಸ್ಯೆ ದೊಡ್ಡ ಸಮಸ್ಯೆಯಾಗಿರಲಿಲ್ಲ ಎಂದು ಅಂದಿನ ಕರ್ನಾಟಕ ಮಹಾರಾಷ್ಟ್ರದ ಜನರ ಮನಸ್ಸಿನ ಭಾವವನ್ನು ಬೇಂದ್ರೆಯವರು ದಾಖಲಿಸಿದ್ದಾರೆ.

### ಬೈಚಣ್ಣನಾಡಿದ ರಾಜಕಾರಣ

ಬೇಂದ್ರೆಯವರು ರಾಜಕೀಯವಾಗಿ ಚಿಂತಿಸುತ್ತ ರಾಷ್ಟ್ರದ ಬಗ್ಗೆ ರೂಪಿಸಿಗೊಂಡ ಆದರ್ಶ ವೈವಿಧ್ಯತೆಯಲ್ಲಿ ಏಕತೆ ಎಂಬುದಾಗಿತ್ತು. ಅವರು ರಾಷ್ಟ್ರಭಕ್ತರಾದರೂ ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಏಳ್ಗೆಯ ಬಗ್ಗೆ ಸದಾಚಿಂತಿಸುತ್ತಿದ್ದರು. ರಾಷ್ಟ್ರೀಯ ಭಾವನೆಯನ್ನು ಮೈಗೂಡಿಸಿಕೊಂಡಂತೆ ಕರ್ನಾಟಕದ ಸರ್ವತೋಮುಖ ಪ್ರಗತಿಗಾಗಿ ದುಡಿಯುತ್ತಿದ್ದರು. ಪ್ರತಿ ಭಾಷಾವಾರು ಪ್ರಾಂತ್ಯಗಟ್ಟಿಗೊಂಡಾಗ ರಾಷ್ಟ್ರದ ಪ್ರಗತಿ ಸಾಧ್ಯ; ಅವು ಒಂದಕ್ಕೊಂದು ಪೂರಕ, ಪೋಷಕ ಎಂಬ ಸ್ಪಷ್ಟ ನಿಲುವನ್ನು ಹೊಂದಿದ್ದರು. ಅವರು ಕರ್ನಾಟಕ ಮತ್ತು ಮಹಾರಾಷ್ಟ್ರದ ನಡುವಿನ ಗಡಿ ತಕರಾರನ್ನು, ಭಾಷಾವೈಷಮ್ಯವನ್ನು ಎಂದೂ ಒಪ್ಪುತ್ತಿರಲಿಲ್ಲ. ಭಾಷಾಸಾಮರಸ್ಯ, ಜನಾಂಗ ಪ್ರೀತಿ ಅವರ ಜೀವನಧ್ಯೇಯವಾಗಿತ್ತು.

---

೩೨ ಬಾಲಚಂದ್ರ ವೆಂಕಟೇಶ ಘಾಣೇಕಾರ ; ಡಾ. ಸೂರ್ಯನಾಥಕಾಮತ್ (ಸಂ) ಸ್ವಾತಂತ್ರ್ಯ ಸಂಗ್ರಾಮ ಸ್ಮೃತಿಗಳು, ಸಂಪುಟ - ಒಂದು, ಗೀತಾ ಬುಕ್‌ಹೌಸ್, ಮೈಸೂರು, ೧೯೭೪, ಪು. ೫೭೭

ಬೇಂದ್ರೆಯವರ ಮಾತೃಭಾಷೆ ಮರಾಠಿಯಾಗಿದ್ದು ಅವರು ಆ ಭಾಷೆಯನ್ನು ಆಳವಾಗಿ ಅಭ್ಯಾಸಮಾಡಿದ್ದರು. ಅವರು ಮರಾಠಿಯಲ್ಲಿ 'ವಿಠ್ಠಲ ಸಂಪ್ರದಾಯ', 'ಸಂತ ಮಹಂತಾಂಚಾ ಪೂರ್ಣ ಶಂಭು ವಿಠ್ಠಲ', 'ಸಂವಾದ', 'ಉಮಾಳ' ಎಂಬ ಕೃತಿಗಳನ್ನು ರಚಿಸಿದ್ದರು. ಭಾಷಾವೈಷಮ್ಯವನ್ನು ಖಂಡಿಸಿ, ಅದನ್ನು ರಾಜಕೀಯ ಲಾಭಕ್ಕೆ ಬಳಸಿಕೊಳ್ಳುವ ಕ್ಷುಲ್ಲಕ ಮನಸ್ಸನ್ನು ಅವರು ಸದಾ ದ್ವೇಷಿಸುತ್ತಿದ್ದರು. ಅವರು ನೆರೆಹೊರೆಯ ಎರಡು ಭಾಷೆಗಳನ್ನು ಕಲಿಯುವುದು ಎರಡು ಭಾಷಿಕರಿಗೂ ಭೂಷಣ. ವ್ಯವಹಾರಿಕ ದೃಷ್ಟಿಯಿಂದ ದ್ವಿಜಿಹ್ವ ಅಂದರೆ ಎರಡು ಭಾಷಾ ಪರಿಚಯದವರಾಗುವುದು ಸರಿ. ಆದರೆ ಮೋಸ ವಂಚನೆ ಘರ್ಷಣೆಯ 'ದ್ವಿಜಿಹ್ವರಾಗುವುದಾವಗುಣ?' ಇಬ್ಬಂದಿಗಳಾಗುವುದು ಯಾವ ಗುಣ? ಎಂದು ಪ್ರಶ್ನಿಸಿ ಅಂತಹ ದುರ್ವರ್ತನೆ ಹೊಂದಿದ ಜನರನ್ನು ಕಂಡು ನೊಂದಿದ್ದಾರೆ. ಗಡಿ ಪ್ರದೇಶ ಸೊಲ್ಲಾಪುರವು ಶಿವಲಿಂಗಕ್ಷೇತ್ರವಾಗಿದ್ದರೂ ಭಾಷಾಸಮಸ್ಯೆಯಿಂದ ಮರ್ಯಾದೆಯ ಗೆರೆ ಮೀರಿ ಭೂತಗಣವಾಗುವುದು ಸರಿಯಲ್ಲ ಎಂದು ಎಚ್ಚರಿಸಿದ್ದಾರೆ. ಭಾಷಾವೈಷಮ್ಯದ ಭೂತಗಳಿಗೆ ವಿದ್ಯೆ ಬುದ್ಧಿ ಇಲ್ಲ. ಅವುಗಳು ಸ್ಮಶಾನದ ಒಕ್ಕಲು. ಅವು ಸಾವಿನ ಜೊತೆಗಿರುವವುಗಳು. ಅಂತಹವುಗಳು 'ಬೈಚಣ್ಣ'ಗಳು. ಅಂದರೆ ಮುಚ್ಚಿದ ಭಾವನೆಗಳ ಅಣ್ಣಗಳು ಎಂದು ಭಾಷಾ ಸಮಸ್ಯೆ ಸೃಷ್ಟಿಸಿದ ರಾಜಕಾರಣದ ಮನಸ್ಸಿನ ಜನರನ್ನು ಛೇಡಿಸಿದ್ದಾರೆ.

'ಕುಣಿವವು ನಡು ಹಗಲು, ಅವಕೆ ಹೇಳುವರಾರು?
ರುದ್ರಭೂಮಿಯ ಒಕ್ಕಲದರ ಜನ
ಬೈಚಣ್ಣನಾಡಿದ ರಾಜಕಾರಣದಲ್ಲಿ
ಬೇಲಗಾಮಿ ಮನದ ಜಾಣತನ'

ಸ್ವಾತಂತ್ರ್ಯ ಹೋರಾಟವು ಸರಿಯಾದ ದಿಕ್ಕಿನಲ್ಲಿಯೇ ಸಾಗುತ್ತಿದ್ದರೂ ಬ್ರಿಟಿಷರ ಒಡೆದು ಆಳುವ ನೀತಿಯ ದುಷ್ಪರಿಣಾಮ ಕನ್ನಡಿಗರ ಮೇಲೆ ದೊಡ್ಡ ಪ್ರಮಾಣದಲ್ಲಿಯೇ ಆಯಿತು. ಕನ್ನಡಿಯಂತಿದ್ದ ಕನ್ನಡಿಗರ ಮನಸ್ಸನ್ನು ಕಲ್ಲಿನಂತಿದ್ದ ಬ್ರಿಟಿಷ್ ಭಾವನೆಗಳು ಒಡೆದು ಚೂರು ಮಾಡಿದವು. ಒಡೆದ ಕಲ್ಲಿಗೆ ಯಾವ ದುಃಖವೂ ಇಲ್ಲ. ಈ ಒಡೆಯುವಿಕೆ ಇನ್ನಾದರೂ ಸಮಾಪ್ತವಾಗಬೇಕೆಂದು ಹಿರಿಯ ನಾಯಕರೂ ಸಂಕಲ್ಪಿಸಲಿಲ್ಲ. ಒಡೆದ ಮನಸ್ಸುಗಳನ್ನು ಬೇಗನೆ ಕೂಡಿಸಬೇಕೆಂದು ಕಾರ್ಯೋನ್ಮುಖರಾಗಲೂ ಇಲ್ಲ. ಅದೇ ಕಾರಣವಾಗಿ ಗಡಿವಿವಾದಗಳು ಮೇಲೆದ್ದು ಒಬ್ಬರಿಗೊಬ್ಬರು ಅನ್ಯೋನ್ಯವಾಗಿದ್ದ ಮರಾಠಿಗರ ಮತ್ತು ಕನ್ನಡಿಗರ ಮನಸ್ಸುಗಳನ್ನು ಕದಡಿ ಬಿಟ್ಟವು. ಹಾಗೆ ಕದಡಿ ಹೋದ ಮನಸ್ಸು ಇಂದಿನ ದಿನಕ್ಕೂ ತಿಳಿಯಾಗಿಲ್ಲವೆಂಬುದನ್ನು ಗಮನಿಸಿದರೆ ಬೇಂದ್ರೆಯವರ ಕವಿಕಾಣ್ಕೆ ಎಷ್ಟು ಆಳವಾಗಿ ಚಿಂತನೆ ಮಾಡಿತ್ತು ಎಂಬುದನ್ನು ಮನಗಾಣಬಹುದಾಗಿದೆ.

■ ■

# ತಾಯಿ ತೀರಿದ ಮೇಲೆ

ವರಕವಿ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರಿಗೆ ಸ್ಫೂರ್ತಿಯ ಸೆಲೆ ತಾಯಿಯಾಗಿದ್ದರು. 'ತಾಯಿ ನೀನಲ್ಲದೆ ದೇವನಾವ' ಎಂಬುದು ಅವರ ಸ್ಪಷ್ಟ ಅರಿವಾಗಿತ್ತು. ಅವರ ಜೀವ ಮಾತೃಪೋಷಿತವಾಗಿ ಅವರ ಮಹತ್ತು ಮತ್ತು ಬೃಹತ್ತನ್ನು ಅನುಭವವಾಗಿಸಿಕೊಂಡು, ಐದು ಐದೆಯರನ್ನು ಆರಾಧಿಸುತ್ತಿತ್ತು. ಅವರು ತಮ್ಮ ಕಾವ್ಯನಾಮವನ್ನು 'ಅಂಬಿಕಾತನಯದತ್ತ' ಎಂದಿಟ್ಟುಕೊಂಡು, ತಾತ್ವಿಕ ಚಿಂತನಾ ಕವನಗಳಿಗೆ ಅದನ್ನು ಅಂಕಿತವಾಗಿ ಬಳಸಿ ಆ ದೈವದಲ್ಲಿ ಒಂದಾಗಿ ಹೋಗಿದ್ದರು.

'ನಿನ್ನ ತನುವಿನಿಂದ ಬಂದ ಮುದ್ದು ತನಯನೀತನು
ನೀನು ಈಯಲಿತ್ತನು.
ತಾಯೆ ಮಾಯೇ ಅಂಬಿಕೆಯೇ! ನಿನ್ನ ತನಯದತ್ತನು
ನೀನು ಇತ್ತುದಿತ್ತನು.
ನಿನ್ನ ಜನುಮದೊಂದು ಪಾಡು, ಹಾಡು ಆಗಿ ಮೂಡಿತು
ನನ್ನ ಕೊರಳು ಹಾಡಿತು.'[೧]

ಎಂದು 'ಅಂಬಿಕಾತನಯದತ್ತ' ಕವನದಲ್ಲಿ ಬೇಂದ್ರೆಯವರು ತಾನು, ತನ್ನದೆಲ್ಲವೂ ಆ ಮಾತೆಯ ಕೃಪೆ ಎಂಬುದಾಗಿ ವರ್ಣಿಸಿ ನಲಿದಿದ್ದಾರೆ. ಆ ತಾಯಿ ಅಂಬಿಕೆ ೧೯೨೪ರಲ್ಲಿ ತೀರಿ ಹೋದಾಗ ತನಗೆ ದೇಹವನ್ನು ಕೊಟ್ಟ ತಾಯಿ ತನ್ನ ದೇಹವನ್ನು ಬಿಟ್ಟು ಹೊರಹೋಗಿಲ್ಲ, ತನ್ನಲ್ಲಿಯೆ ಇದ್ದಾಳೆ- ಎಂದು ಅವರಿಗೆ ಅನಿಸಿದೆ. ಅವರಿಗೆ ತಾಯಿಯನ್ನು ನೆನೆಯುವಾಗಲೆಲ್ಲ ದುಃಖ ಒತ್ತರಿಸಿ ಬಂದಿದೆ. ಅವರು ಒಮ್ಮೊಮ್ಮೆ ತಾಯಿಯ ಸ್ಮರಣೆಯಲ್ಲಿ ಪೂರ್ಣವಾಗಿ ಮುಳುಗಿ ಪ್ರಜ್ಞಾಹೀನಸ್ಥಿತಿ ತಲುಪಿ ಮತ್ತೆ ಪ್ರಜ್ಞೆ ಬಂದಾಗ ವಿಭಿನ್ನ ನೆನಪುಗಳ ಬಿಸಿಯಲ್ಲಿ 'ಮೈ ಬೆವತು, ಮನ ಬೆವತು ಕಣ್ಣೀರ ಧಾರೆಯಲೆ' ತೋಯ್ದುಹೋಗಿದ್ದಾರೆ. ಅವರು ತಾಯಿ

---

೧ ದ.ರಾ. ಬೇಂದ್ರೆ, ಗಂಗಾವತರಣ, ಪೂರ್ವೋಕ್ತ, ಪು-೧೨.

ತನ್ನನ್ನು ಬಿಟ್ಟು ಹೋಗಿರಬಹುದೆ? ಅಥವಾ ಹೋಗಿಲ್ಲವೆ? ಅಥವಾ ತನ್ನಲ್ಲಿಯೆ ಇದ್ದಾಳೆಯೆ? ಎಂದು ವಿವಿಧ ಭಾವ ಲಹರಿಯಲ್ಲಿ ಅತ್ತಿದ್ದಾರೆ. ಅವರು ತಾಯಿಯ ಕಳೆಬರಹದ ಪಾದದ ಮೇಲೆ ಉರುಳಿ, ಹೊರಳಿ ಅದನ್ನು ಮುದ್ದಾಡಿದ್ದಾರೆ. ಯಾರೋ ಏನೋ ಬೆನ್ನು ಸವರಿದಂತಾಗಿ ತಾಯಿಯ ಕರುಣೆಯ ದುಃಖದಲ್ಲಿರುವ ತನ್ನ ಬೆನ್ನನ್ನು ಸವರಿದ 'ತಾಯ್ಗರುಳ ಮಾಯೆಯ ಕೊಂಡಾಡಿದೆ' ಎಂದು ಭಾವಪರವಶರಾಗಿದ್ದಾರೆ.

ಭಾವನೆಯು ಸೂಕ್ಷ್ಮಹೃದಯಕ್ಕೆ ತಿಳಿಯುತ್ತದೆ. ಅದು ಮನಸ್ಸಿನ ಮೃದುಹೃದಯದ ನವಿರು ಭಾವ. ಯಾರೋ ಬೆನ್ನು ಸವರಿದಂತಾದಾಗ ತನಗೆ ತನ್ನ ತಾಯಿಯ ಕರುಳು ಅರಿವಾಯಿತು. 'ತಲೆಗೇನು ಕಂಡೀತು ಅದರ ತಲೆ' ಎಂದಿದ್ದಾರೆ. ಬುದ್ಧಿಯಿಂದ ಎಲ್ಲವನ್ನು ಅಳೆಯ ಹೊರಟರೆ ಅದು ನೇತ್ಯಾತ್ಮಕ ಫಲಕೊಡುತ್ತದೆ. 'ಮೈಯಂಥ ಮೈಗೆ' ಅಂದರೆ ಪಂಚಭೌತ ಶಕ್ತಿಯ ದೇಹ ತಾಯಿಯ ವಾತ್ಸಲ್ಯವನ್ನು ಅನುಭವಿಸುತ್ತದೆ. ಬೌದ್ಧಿಕ ನೆಲೆಯಲ್ಲಿ ವ್ಯವಹರಿಸಿದರೆ ಬಹುಶಃ ಜೀವನವನ್ನು ಪೂರ್ಣವಾಗಿ ಆಸ್ವಾದಿಸಲಾಗುವುದಿಲ್ಲ. ಭಾವನೆಯ ನೆಲೆಯಲ್ಲಿಯೂ ವ್ಯವಹರಿಸಬೇಕಾಗುತ್ತದೆ.

'ಬುದ್ಧಿಭಾವಗಳ ವಿದ್ಯುದಾಲಿಂಗನವೇ ಕಾವ್ಯ' ಎಂದು ಕುವೆಂಪು ನುಡಿದಿದ್ದಾರೆ. ಕಾವ್ಯರಸಾಸ್ವಾದನೆಗೆ ಈಡಾಗಬೇಕಾದರೆ ಬರಿ ಬುದ್ಧಿ ಇದ್ದರೆ ನೀರಸವಾಗುತ್ತದೆ. ಭಾವದ ಆರ್ದ್ರಗುಣ ಇದ್ದಾಗ ಅದು ರಸಾಸ್ವಾದ ಯೋಗ್ಯವಾಗುತ್ತದೆ. ಹೃದಯವಿಲ್ಲದ ತಲೆ ಅದು ನೀರಸ. ತಲೆ ಇಲ್ಲದ ಹೃದಯ ಅತಿ ಭಾವುಕ. ಭಾವನೆಗೆ ಬುದ್ಧಿಯ ಚೌಕಟ್ಟಿರಬೇಕು, ಬುದ್ಧಿಯ ಕೊಳವೆಯೊಳಗೆ ಭಾವದ ಅಮೃತ ತುಂಬಿರಬೇಕು.

ಸತ್ತವಳು ಬೆನ್ನು ಸವರಲು ಸಾಧ್ಯವೆ ? ಎಂದು ತಲೆ logical ಆಗಿ ಯೋಚಿಸಬಹುದು. ಯಾವುದೋ ಕಾಣದ ಕೈ ಬೆನ್ನನ್ನು ಸವರಿರುತ್ತದೆ. ಅದನ್ನು ಭಾವ ಗ್ರಹಿಸುತ್ತದೆ. ಬುದ್ಧಿ ತನ್ನ ತರ್ಕದಲ್ಲಿ ನಿರಾಕರಿಸುತ್ತದೆ. ಜನ್ಮಾಂತರದಿಂದ ಬಂದ ಸಂಬಂಧ ಪ್ರವಾಹ ಈ ದೃಶ್ಯಾದೃಶ್ಯದ ಹಳ್ಳದಲ್ಲಿ ಹರಿಯುತ್ತದೆ. ಅದು ಕೆಲವರಿಗೆ ಕಾಣಬಹುದು. ಇನ್ನು ಹಲವರಿಗೆ ಕಾಣದಿರಬಹುದು. ತಾಯಿಯ ಪಂಚಭೌತಿಕ ದೇಹ ಮುಂದೆ ಇದೆ. ಆದರೆ ತಾಯಿಯ ವಾತ್ಸಲ್ಯದ ಕೈ ಬೆನ್ನು ಸವರುತ್ತದೆ. ಅದು ಅಭೌತಿಕ ದೃಶ್ಯಾದೃಶ್ಯ.

'ದೃಶ್ಯಾದೃಶ್ಯದ ದರಿಯಲ್ಲಿ ಹರಿವುದು
ಜನ್ಮಾಂತರದಿಂದ ಬರುವ ತೊರೆ'

ತಾಯಿಯು ಸತ್ತ ದುಃಖದ ಕಾಲ ತನ್ನ ಜೀವನದ ಬಿರು ಬೇಸಿಗೆ ಕಾಲ. ಅದು ತಂಪಿಲ್ಲದ ದಗೆ- ಎಂದು ತಿಳಿದ ಬೇಂದ್ರೆಯವರು 'ಬೇಸಿಗೆ ಕಾಲಕು ನೆರೆ ಬರುವುದುಂಟೆಲಗೆ' ಎಂದು ಸತಿ ಲಕ್ಷ್ಮೀಬಾಯಿಯನ್ನು ಎಲಗೆ ಎಂದು ಸಂಬೋಧಿಸಿ ತಂಪಿನ ಪ್ರವಾಹಕ್ಕೆ ಆಶಿಸಿದ್ದಾರೆ.

ಸಾವು ಮತ್ತು ಹುಟ್ಟಿನ ಕ್ರಿಯೆ ಸದಾ ನಡೆಯುತ್ತಿರುತ್ತದೆ. ಸಾವಿನ ಎದುರು ಬದುಕು ಸ್ಥಗಿತವಾಗುವುದಿಲ್ಲ ಎಂಬ ಚಿಂತನೆಯಿಂದ 'ಹೊಸದೊಂದು ಮಿಥುನಕೆ ಯಾವ ಕೊರೆ?' ಎಂದು ಪ್ರಶ್ನಿಸಿಕೊಂಡಿದ್ದಾರೆ.

'ಅಂಬಿಕಾತನಯದತ್ತ'ರ ತಾಯಿ ಅಂಬಿಕೆ ತೀರಿಕೊಂಡ ಮೇಲೆ ಏಕಾಂಗಿಯಾಗಿ ಉಳಿದ ದತ್ತಾತ್ರೇಯನ ಅನುತಾಪ 'ನಲ್‌ತಾಯಿ' ಎಂಬ ಕಾವ್ಯವಾಗಿದೆ. ನಲ್‌ನ ವಿಸ್ತೃತ ರೂಪವೆ ತಾಯಿ. ಅದೇ ಅರಿವು. ಆ ನಲ್ ಮತ್ತು ಅರಿವನ್ನು ತಿಳಿಯುವಷ್ಟರಲ್ಲಿ ಅದು ನಮ್ಮಿಂದ ದೂರವಾಗಿ ಹೋಗಿರುತ್ತದೆ. ಕವಿ ಅರಿವು ಎಂಬ ಅಮೂರ್ತಭಾವವನ್ನು ಮೂರ್ತ ಚೇತನ ತಾಯಿಯಲ್ಲಿ ಆವಿರ್ಭವಿಸಿಕೊಂಡು ಅದನ್ನು ಅನುಭವವಾಗಿಸಿಕೊಳ್ಳುವಲ್ಲಿ ಅದು ತನ್ನಿಂದ ದೂರವಾದ ಭಾವವು ಇಲ್ಲಿದೆ. ತಾಯಿಯನ್ನು ತಾನು ತಿಳಿಯಬೇಕು ಎನ್ನುವಷ್ಟರಲ್ಲಿ ಅವಳು ತನ್ನಿಂದ ದೂರವಾದಾಗ:

'ತಿಳಿವಳಿಕೆಯಂಥ ತಿಳಿಗೇಡಿ ಎಲ್ಲಿಯೂ ಇಲ್ಲ।
ಕಳಕೊಂಡ ಹೊರತು ಬೆಲೆವರಿಯದದು ಫಲವಿಲ್ಲ ॥'

ಎಂದು ತಾಯಿಯ ಅಗಲಿಕೆ, ತಿಳಿವಳಿಕೆಯನ್ನು ಕಾವ್ಯವಾಗಿಸಿದ್ದಾರೆ. ತಾಯಿಯನ್ನು ತಿಳಿಯಬೇಕು. ತಾಯಿಯ ಋಣ ತೀರಿಸಬೇಕು ಎನ್ನುವಷ್ಟರಲ್ಲಿ ಅವಳು ಇನ್ನು ಇಲ್ಲವಾದ ನೋವನ್ನು 'ಇದ್ದಾಗ ತಿಳಿಯಲಿಲ್ಲೆನ್ನ ತಿಳಿವು। ಮುದ್ದಾಡಿಕೊಳುವಷ್ಟರಲ್ಲಿ ಬಂದಿತಳಿವು । ಯಾವ ಜನ್ಮದಲಿನ್ನು ರಿಣವ ತೀರಿಸಲಿ । ಯಾವ ಸೇವೆಯ ಮಾಡಿ ಹೆಸರ ಬೀರಿಸಲಿ।' ಎಂದು ಹೇಳುತ್ತ ತಾಯಿಯನ್ನು ತಿಳಿಯಲು ಆಗುವುದಿಲ್ಲ ಮತ್ತು ಅವಳ ಋಣವನ್ನು ತೀರಿಸಲು ಸಾಧ್ಯವಿಲ್ಲ ಎಂದು ಹೇಳಿದ್ದಾರೆ. ತಾಯಿಯ ಸಾವು ಅವರಿಗೆ ಆಕಸ್ಮಿಕವಾಗಿದ್ದು ಆ ನೋವನ್ನು:

'ಕನಸಿಗು ಹೊಳೆಯದ ಬರಸಿಡಿಲೆರಗಿತು
ತಾಯಿ-ಗಿಡವು ಮಾಯವಾಯಿತಲೇ'

ಎಂದು 'ಸಖೀಗೀತ'ದಲ್ಲಿ ನುಡಿದಿದ್ದಾರೆ. ತಾಯಿಯ ವಾತ್ಸಲ್ಯ ಅಪಾರವಾದುದು. ಆದರೆ ಮಕ್ಕಳು ಅವಳ ಬಗ್ಗೆ ತೋರಿಸುವ ಮಮತೆ ಅದೂ ಅವಳು ಸತ್ತನಂತರ ತೀವ್ರವಾಗುವುದನ್ನು ಅದು ಎಷ್ಟು ವ್ಯರ್ಥವೆಂದು ಒಂದು ಉಪಮೆಯ ಮೂಲಕ ಸ್ಪಷ್ಟಪಡಿಸಿದ್ದಾರೆ.

'ವ್ರಣನೋಡಿ ಬಂದದರ ಮೇಲ್ಕೂತ ನೊಣದಂತೆ
ರಿಣಗೇಡಿ ಜೀವವಿನ್ನೇಕೆ ಮಮತೆಯ ಚಿಂತೆ'

ಎಂದು ಕ್ಷುಲ್ಲಕ ನೊಣದ ಉಪಮಾನದಿಂದ ಋಣಗೇಡಿ ಮಕ್ಕಳ ಹುಸಿಮಮತೆಯನ್ನು ಛೇಡಿಸುತ್ತ ಆತ್ಮಶೋಧಕರಾಗಿ ವಸ್ತುನಿಷ್ಠ ಚಿಂತನೆಯನ್ನು ಭಾವನಿರ್ಭರರಾಗಿ ಸಾಧಿಸಿದ್ದಾರೆ. ತಾಯಿ ಸತ್ತ ನಂತರ ಎಷ್ಟೇ ಅತ್ತರೂ ಅವಳನ್ನು ಮತ್ತೆ ಪಡೆಯಲು ಸಾಧ್ಯವಿಲ್ಲ. ಆ

ವಾತ್ಸಲ್ಯ ಮತ್ತೆ ಲಭಿಸದು. ತಾಯಿಯನ್ನು ಅವಳ ವಾತ್ಸಲ್ಯವನ್ನು ನೂರು ಜನ್ಮವೆತ್ತಿದರೂ ಪಡೆಯಲು ಸಾಧ್ಯವಿಲ್ಲ. ಆದಕಾರಣ ಅತ್ತು ಪ್ರಯೋಜನವಿಲ್ಲ ಎಂದಿದ್ದಾರೆ.

ತಾಯಿಯ ಕಳಕೊಂಡು ಪ್ರೌಢನಾದೆನು ನಾನು

'ತಾಯಿಯ ಕಳಕೊಂಡು ಪ್ರೌಢನಾದೆನು ನಾನು' ಎಂದಾಗ ಜೀವನವನ್ನು ಎದುರಿಸುವುದರಲ್ಲಿ ತಾನು ಪ್ರೌಢನಾದೆ ಎಂದುಕೊಂಡಿದ್ದಾರೆ. ತಾಯಿಯು ಅದುವರೆಗೆ ಸಂಸಾರ ನಿರ್ವಹಣೆ ಮಾಡುತ್ತಿದ್ದಳು. ಅವಳು ಗತಿಸಿದ ನಂತರ ಆ ಜವಾಬ್ದಾರಿ ತನಗೆ ಬಂದಿತ್ತು. ಅದು 'ತಂದೆಯ ಹೊಸ ಹೊಣೆ ಕ್ಷಿತಿಜಕಿರೆ' ಎಂಬುವಂತಹದಾಗಿತ್ತು. ಆ ಜವಾಬ್ದಾರಿಯ ಕ್ಷಿತಿಜ ಬಾನಂಚು ತಾನೇ ಆದೆ. 'ಕಾಣದ ಆಕಾಶ ಕೆಣಕಾಡಿ ಬಂದೆನು'. ಅಂದರೆ ಪಾರಮಾರ್ಥಿಕವಾದುದನ್ನು ಕೆಣಕಾಡಿ ಶೋಧಿಸಿ ಬಂದರೂ ಸಹ ಮುಂದಿನ ಜೀವನದ ಜವಾಬ್ದಾರಿ ಅಂದಿನಿಂದಲೇ (ತಾಯಿ ಸತ್ತ ದಿನದಿಂದಲೇ) ತನಗೆ ಬಂದಿತು ಎಂದು ತಿಳಿಸಿದ್ದಾರೆ.

'ತಾಯಿಯ ಕಳಕೊಂಡು ಪ್ರೌಢನಾದೆನು ನಾನು
ತಂದೆಯ ಹೊಸ ಹೊಣೆ ಕ್ಷಿತಿಜಕಿರೆ
ಕಾಣದ ಆಕಾಶ ಕೆಣಕಾಡಿ ಬಂದೆನು
ಮುಂದಿನ ಪ್ರಶ್ನೆಯು ಅಂದೆ ಬರೆ.'

ತಂದೆ ತಾಯಿ ಎರಡೂ ಆಗಿ ಕಾಪಾಡಿದ ತಾಯಿ ಅಂಬವ್ವ ಇನ್ನಿಲ್ಲದಿರುವಾಗ ತನ್ನ ಜೊತೆಯ ಜೀವಸಖಿ ಲಕ್ಷ್ಮೀಬಾಯಿಯು ತಾಯಿಯಾಗುವದಿತ್ತು ಎಂದು ಕೇಳಿದ ಅವರ ಅಂತರಂಗದ ಮೊರೆ ಸ್ತಂಭನಗೊಂಡಿತು. ಕ್ರಿಯಾಶೀಲವಾಗಲಿಲ್ಲ. ಅದರ ಮರುಕ್ಷಣವೆ ಮನಸ್ಸು ಮತ್ತೆ ಯೋಚಿಸಿತು.

'ಎಂಥ ಗಿಡಕೂ ಕೂಡ ಬಳ್ಳಿ ಅಲಂಕಾರ
ಬಳ್ಳಿಗೆ ಭಾರವೆ ಹೂವು ಹೊರೆ?'

ಗಂಡಾದ ಗಿಡಕ್ಕೆ ಬಳ್ಳಿಯಾದ ಹೆಣ್ಣು ಹೇಗೆ ಅಲಂಕಾರವೋ ಹಾಗೆ ಬಳ್ಳಿಗೆ ಹೂವು ಭಾರವಲ್ಲ.

ವಿಶ್ವಮಾತೆಯ ಸುಪುತ್ರ

ಈ ಭಾಗದಲ್ಲಿ ಬೇಂದ್ರೆಯುವರ ಬದುಕಿನ ಕೌಟುಂಬಿಕ ನೆಲೆಯ ಚಿತ್ರಗಳೇ ಹರಡಿಕೊಂಡಿದ್ದರೂ ಅವುಗಳ ಮಧ್ಯದಲ್ಲಿಯೇ ಘೂಮವಾದ ಚಿಂತನೆಗಳು ಮೊಳಕೆಯೊಡೆದಿವೆ. 'ಮಾತೃ ದೇವೋಭವ' ಎಂಬ ಉಪನಿಷತ್ತಿನ ಮಾತಿನಂತೆ ಬೇಂದ್ರೆಯವರು ತಮ್ಮ ತಾಯಿಯನ್ನು ದೇವರೆಂದೇ ಭಾವಿಸಿದರು. ಆ ಭಾವನೆಗೆ ಪೋಷಕವಾಗುವಂತೆ ಮಾತೆಯ ಮಾರ್ಗದರ್ಶನ

ಬೇಂದ್ರೆಯವರ ಬದುಕನ್ನು ಸಂಪನ್ನಗೊಳಿಸಿತು. 'ನಾನು ಯಾವುದಕ್ಕೂ ಅಂಜಬೇಕಾಗಿಲ್ಲ, ನನ್ನ ತಾಯಿ ಎಲ್ಲವನ್ನು ನೋಡಿಕೊಳ್ಳುತ್ತಾಳೆ' ಎಂಬ ಆತ್ಮ ವಿಶ್ವಾಸ ಅವರ ಅಂತರಂಗವನ್ನು ತುಂಬಿಕೊಂಡಿದ್ದುದರಿಂದ ಮಾತೃವಿಯೋಗ ಅವರನ್ನು ಗಹನವಾದ ಸಂಕಟಕ್ಕೆ ದೂಡಿತು. ಹೆಣ್ಣಿನ ಬದುಕಿನಲ್ಲಿ ಬೇರೆ ಬೇರೆ ಮುಖಗಳಿವೆ. ಒಬ್ಬಳು ತಾಯಿಯಾಗಿ ಬಂದರೆ ಮತ್ತೊಬ್ಬಳು ಗೃಹಲಕ್ಷ್ಮಿಯಾಗಿ ಆಗಮಿಸುತ್ತಾಳೆ. ಮಾತೆಯ ವಿಯೋಗದಿಂದ ಉಂಟಾದ ದುಃಖವನ್ನು ಆ ಗೃಹಲಕ್ಷ್ಮಿ ನಿವಾರಿಸಿಕೊಡುತ್ತಾಳೆ. ಸಂತಾನದ ಬಳ್ಳಿ ಹಬ್ಬಿದ ಮೇಲಂತೂ ಬದುಕಿನ ಸಂತಸಕ್ಕೆ ಕೋಡು ಮೂಡುತ್ತದೆ.

ಬೇಂದ್ರೆಯವರ ಮಾತೃಪರವಾದ ಚಿಂತನೆಗಳು ಅವರನ್ನು ಕ್ರಮಕ್ರಮವಾಗಿ ವಿಶ್ವಮಾನವನ ಎತ್ತರಕ್ಕೆ ಕೊಂಡೊಯ್ದಿರುವುದನ್ನು ನಾವು ಅವರ ಕಾವ್ಯಾನುಶೀಲನದಿಂದ ಮನಗಾಣಬಹುದಾಗಿದೆ. ಅವರ ಗಾಢವಾದ ಮಾತೃಪ್ರೇಮ ಧಾರವಾಡದ ಮಾತೆಯನ್ನು ಪ್ರೀತಿಸಲು ಪ್ರೇರಣೆಕೊಟ್ಟಿತು. ಅದು ಅಷ್ಟಕ್ಕೆ ನಿಲ್ಲದೆ ಕನ್ನಡಮಾತೆಯ ಪ್ರೇಮವಾಗಿ ಪರಿವರ್ತಿತವಾಯಿತು. ಅಲ್ಲಿಂದ ಮುಂದಕ್ಕೆ ಅವರು ಭಾರತಾಂಬೆಯ ಕಣ್ಮಣಿಯಾದರು. ಹೆಚ್ಚು ಹೇಳುವುದೇನು ? ಅವರು ವಿಶ್ವಮಾತೆಯ ಸುಪುತ್ರರಾದರು.

■ ■

# ಉಪಸಂಹಾರ

ಉಪಸಂಹಾರ

ತಾಯಿಯ ಮರಣಾನಂತರದ ದಿನಗಳಲ್ಲಿ ಕುಟುಂಬವನ್ನು ಜಾಣತನದಿಂದ ನಿರ್ವಹಿಸಿದ ಸಖಿ ಲಕ್ಷ್ಮೀಬಾಯಿಯನ್ನು, ತನ್ನ ಸಾಹಿತ್ಯ ಚಟುವಟಿಕೆಗೆ ಗರಿ ಮೂಡಿಸಿದ 'ಗೆಳೆಯರ ಗುಂಪ'ನ್ನು ಬೇಂದ್ರೆಯವರು ನೆನೆದಿದ್ದಾರೆ. ಒಬ್ಬ ತಾಯಿಯ ಪಾತ್ರ ಅದೃಶ್ಯವಾಗುವಷ್ಟರಲ್ಲಿ ಹೆಂಡತಿಯಾದ ಲಕ್ಷ್ಮೀಬಾಯಿ ತಾಯಿಯ ಕೊರತೆಯನ್ನು ತುಂಬಿದಳು. 'ಗೆಳೆಯರ ಗುಂಪು' ತನಗೆ ಅಂಜನ ಹಾಕಿದಾಗ ಕಾಣುವ ನವನಿಧಿಯಂತೆ ಕಂಡಿತು. ತನ್ನ ಸ್ನೇಹದ ಸೂತ್ರದಿಂದ ಹೊಸ ಹೊಸ ಗೆಳೆಯರನ್ನು ಕೂಡಿಸಿಕೊಂಡು 'ಗೆಳೆಯರ ಗುಂಪನ್ನು' ಕಟ್ಟುವ ಕಾಯಕದ ಜಪದಲ್ಲಿ ತೊಡಗಿತು ಎಂದು ನುಡಿದಿದ್ದಾರೆ.

'ಗೆಳೆಯರ ಗುಂಪು' ಎಂಬ ಕೃತಿಯಲ್ಲಿ ವಾಮನ ಬೇಂದ್ರೆಯವರು ಸವಿವರವಾಗಿ ಆ ಗುಂಪಿನ ಧ್ಯೇಯ, ಧೋರಣೆ, ಸಾಧನೆ ಮತ್ತು ಇಂದಿಗೂ ಅದು ಜೀವಂತವಾಗಿ ಕನ್ನಡ ಕೈಂಕರ್ಯ ಮಾಡುತ್ತಿರುವುದನ್ನು ದಾಖಲಿಸಿದ್ದಾರೆ. ಹೀಗೆ 'ಕರ್ನಾಟಕ ಕುಲಪುರೋಹಿತ ಆಲೂರ ವೆಂಕಟರಾಯರು ೪-೧೧-೨೨ರಂದು ಜಯಕರ್ನಾಟಕದ ಪ್ರಥಮ ಸಂಚಿಕೆಯನ್ನು ಪ್ರಕಟಪಡಿಸಿದರು. ಗೆಳೆಯರ ಗುಂಪಿನ ಲೇಖಕರ ಸಹಭಾಗಿತ್ವವನ್ನು ಅಪೇಕ್ಷಿಸಿದರು. ಶ್ರೀಧರ, ದ.ರಾ. ಬೇಂದ್ರೆ, ವಿನೀತ ರಾಮಚಂದ್ರರಾವ್, ಬೇಂದ್ರೆ ಲಕ್ಷ್ಮಣರಾವ್, ಚೆನ್ನಮಲ್ಲಪ್ಪ ಗಲಗಲಿ (ಮಧುರ ಚೆನ್ನ) ಇವರ ಲೇಖನಗಳು, ಬಿಡಿನುಡಿಗಳು ಪ್ರಕಟವಾಗಿವೆ. ಮೊದಲನೆಯ ಸಂಚಿಕೆಯಲ್ಲಿ ಕವಿಭೂಷಣ ಕೃ.ಶ್ರೀ. ಬೆಟಗೇರಿ (ಆನಂದಕಂದ) 'ಕೊಡಲಾರೆನೆನ್ನ ಕೈದುವನು' ಎಂಬ ಕವನ ದಾಸರ ಹಾಡಿನ ಧಾಟಿಯಲ್ಲಿ ಬರೆದದ್ದು ಪ್ರಕಟವಾಗಿದೆ. ಎರಡನೆಯ ಸಂಚಿಕೆಯಲ್ಲಿ ಬೇಂದ್ರೆ ಲಕ್ಷ್ಮಣರಾಯರ ಚಿಕ್ಕ ಕಥೆ ಪ್ರಕಟವಾಗಿದೆ. ಮೂರನೆಯ ಸಂಚಿಕೆಯಲ್ಲಿ ಬೇಂದ್ರೆಯವರ ಲೀಲೆ (ಲೀಲೆಯಲ್ಲಿ ಯಾವುದೂ ವಿಫಲವಲ್ಲ) ಎಂಬ ಕವನ ಪ್ರಕಟವಾಗಿದೆ. ಎಳೆಯ ಗೆಳೆಯರ ಸಾಹಿತ್ಯ ಸಾಧನೆಯ ಗುರಿ ಈ ಕವನದಲ್ಲಿ ಪ್ರತಿಬಿಂಬಿತವಾಗಿದೆ. ನಾಲ್ಕನೆಯ ಸಂಚಿಕೆಯಲ್ಲಿ

ವಿನೀತರಾಮಚಂದ್ರರಾಯರ 'ಕೋರಿಕೆ' ಎಂಬ ಷಟ್ಪದಿ ರಚನೆ ಪ್ರಕಟವಾಗಿದೆ. ಆರನೆಯ ಸಂಚಿಕೆಯಲ್ಲಿ ಚಿದಂಬರರ 'ಹೊಸಯುಗದ ಹಾಡಿನ ಪಲ್ಲವಿ' ಎಂಬ ಗದ್ಯ ಲೇಖನ - ಓಂ ಸಹನಾವವತು ॥ ಸಹನೌಭುನಕ್ತು ॥ ಸಹವೀರ್ಯಂಕರವಾವಹೈ ತೇಜಸ್ವಿನಾವಧೀತಮಸ್ತು । ಮಾವಿದ್ವಿಷಾವ ಹೈ - ಎಂಬ ಮಂತ್ರದ ವಿವರಣೆಯಾಗಿದೆ. 'ಸ್ವಾತಂತ್ರ್ಯದೇವಿಯ ಪ್ರಸಾದ ಪಡೆಯಲು ಓಂ ಮಂತ್ರವನ್ನು ಜಪಿಸುವಾ, ವರವ ಪಡೆಯುವ ಎಂಬ ಉಲ್ಲೇಖವಿದೆ. ಶ್ರೀಧರ ಖಾನೋಳಕರರ ಬಾಯಿ ಬಂಧಿಸಿದ ಬಸವನ ಬಿನ್ನಹ ಎಂಬ ೩೩ ದ್ವಿಪದಿಗಳ ನೀಳ್ಗವನ ಪ್ರಕಟವಾಗಿದೆ. ಬಿಡಿನುಡಿ ಎಂಬ ಸಂಪಾದಕೀಯ ಲೇಖನಗಳನ್ನು ಬೇಂದ್ರೆಯವರೂ ಬರೆಯುತ್ತಿದ್ದರು.

'೧೯೨೪ರಲ್ಲಿ ಗೆಳೆಯರ ಗುಂಪಿನ 'ಗೆಳೆಯ' ಹಸ್ತಲಿಖಿತ ಪತ್ರಿಕೆಯ ಎರಡನೆಯ ಸಂಚಿಕೆ ಸಿದ್ಧವಾಯಿತು. ಇದರಲ್ಲಿ-ವಿನೀತರಾಮಚಂದ್ರರಾವ್, ಅಂಬಿಕಾತನಯದತ್ತ, ಹಲಸಂಗಿಯ ಗೆಳೆಯರು, ಪ್ರಹ್ಲಾದನರೇಗಲ್ಲ, ಚಿದಂಬರ, ನಾರಾಯಣ ಸಂಗಮ ಮೊದಲಾದವರ ಕವನ ಹಾಗೂ ಲೇಖನಗಳಿದ್ದವು. ಗೆಳೆಯ ಪತ್ರಿಕೆಯ ಮೂರು ಸಂಚಿಕೆಗಳು ಬಿಡುಗಡೆ ಹೊಂದಿದ್ದವು.

'೧೯೨೪ರಲ್ಲಿಯೇ 'ನಸುಕು' ಎಂಬ ಹಸ್ತ ಲಿಖಿತ ಪತ್ರಿಕೆ ಸಿದ್ಧವಾಯಿತು ೧೬೮ ಪುಟಗಳ ಈ ಸಂಕಲನದಲ್ಲಿ ಅಂಬಿಕಾತನಯದತ್ತ, ವಿನೀತ ರಾಮಚಂದ್ರರಾವ್, ಪ್ರಹ್ಲಾದನರೇಗಲ್ಲ, ಗೋವಿಂದ ಚುಳಕಿ, ನಾರಾಯಣ ಸಂಗಮ, ಗಂಗಾಪ್ರಸಾದ ತಿವಾರಿ, ಚಿದಂಬರ, ಶ್ರೀಧರ ಖಾನೋಳಕರ, ಕೃಷ್ಣಕುಮಾರ ಕಲ್ಲೂರ ಎಂಬ ಒಂಭತ್ತು ಗೆಳೆಯರ ಕವನಗಳಿದ್ದವು. ಕೊಪ್ಪಳ, ಹಲಸಂಗಿ, ಮೈಸೂರು, ವಿಜಾಪುರ ಗೆಳೆಯರ ಕವನಗಳೂ ಇದ್ದವು. ೨೪ ಕವಿಗಳ ಒಟ್ಟು ೧೨೪ ಕವನಗಳ ಸಂಗ್ರಹ ಇದಾಗಿತ್ತು'[೧].

ಬೇಂದ್ರೆಯವರಿಗೆ ಗೆಳೆತನದ ಬೆಳಕೇ ಜೀವನದ ಹೊಳಪಾಗಿತ್ತು. ಅವರು ಬಾಲ್ಯ ಗೆಳೆಯರಾದ ಶ್ರೀ ಖಾನೋಳಕರ, ರಾಮೂದೀಕ್ಷಿತ, ನರಸಿಂಹ ಬಾಗಲವಾಡಿಯಿಂದ ಧಾರವಾಡದ ಸ್ನೇಹಸೌರಭಕ್ಕೆ ಒಳಗಾದರು; ಬಾ.ಬ. ಪಟವರ್ಧನ, ದತ್ತೋಪಂತ ಪೋತದಾರರಿಂದ ಚಿಂತನಶೀಲವಾಗಿ ವಿಕಾಸಗೊಂಡರು. ಬೇಂದ್ರೆ ಮಾಸ್ತರರಾಗಿ ಚಿದಂಬರ, ಪ್ರಹ್ಲಾದನರೇಗಲ್ಲ, ಮಲ್ಲಾರಿ ಕುಲಕರ್ಣಿ ವಿದ್ಯಾರ್ಥಿಗಳನ್ನು ಗೆಳೆಯರೆಂದು ಕಂಡು ಮುದ್ದಿಸಿದರು. ಕವಿಯಾಗಿ ನಾಡಿನ ಉದ್ದಗಲಕ್ಕೂ 'ಗೆಳೆಯರ ಗುಂಪಿ'ನಿಂದ ಸ್ನೇಹದ ಕಂಪನ್ನು ಹಬ್ಬಿಸಿದರು. ಗೆಳೆಯರ ಗುಂಪಿನ ಮುಖಾಂತರ ತಮ್ಮ ಹಾಗೂ ಗೆಳೆಯರ ಆತ್ಮ ಸಾಧನೆಯನ್ನು, ಕರ್ನಾಟಕದ ಭಿನ್ನಭಿನ್ನ ಭಾಗದ ಭಿನ್ನವ್ಯಕ್ತಿಗಳನ್ನು ಅಭಿನ್ನವಾಗಿ ಬಂಧಿಸುವ ಸಾಧನೆಯನ್ನು ಹಾಗೂ ಕಾವ್ಯದ ಮುಖಾಂತರ ಕಾಲ-ದೇಶ-ಜನಾಂಗವನ್ನು ಸಮನ್ವಯಗೊಳಿಸುವುದನ್ನು ಸಾಧಿಸಿದರು.

---

೧ ವಾಮನಬೇಂದ್ರೆ, ಗೆಳೆಯರ ಗುಂಪು ಪ್ರಸಾರಾಂಗ, ಹಂಪಿ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪು-೧೧, ೧೨

ಬೇಂದ್ರೆಯವರು ಆಧುನಿಕ ಕನ್ನಡ ಕಾವ್ಯದ ಮುಂಗೋಳಿಯಾದಂತೆ, ಕರ್ನಾಟಕವನ್ನು ಒಗ್ಗೂಡಿಸುವ ಜಾತ್ಯತೀತ ನೆಲೆಯ ನಾಡಹಬ್ಬವನ್ನು ಸೃಷ್ಟಿಸಿದರು. ನಾವು ಕನ್ನಡಿಗರು ಒಂದು ಎಂಬ ಭಾವವನ್ನು ನಾಡಿಗರಲ್ಲಿ ಉಂಟುಮಾಡಿದರು. ಅದು ಕರ್ನಾಟಕವು ಸಾಂಸ್ಕೃತಿಕವಾಗಿ ಒಂದು ಎಂಬ ಭಾವನೆ ಬೆಳೆದು, ಮುಂದೆ ಕರ್ನಾಟಕ ರಾಜ್ಯವಾಗಲು ಇಂಬಾಯಿತು.

ನಮ್ಮ ಭಾಷೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ಖ್ಯಾತವಾಗಲು ನಿಜರಾಷ್ಟ್ರೀಯತ್ವ ಮೂಡಬೇಕು. ಆ ರಾಷ್ಟ್ರೀಯ ಸಾಹಿತ್ಯ ಸೃಷ್ಟಿಯಾಗುವುದು ಪ್ರಾದೇಶಿಕ ಭಾಷೆಗಳ ಪುನರುತ್ಥಾನದಲ್ಲಿ ಎಂಬ ಅರಿವಿದ್ದ ಬೇಂದ್ರೆಯವರು ಅದರ ಸತ್ವ ಪೂರಿತ ಬೆಳವಣಿಗಾಗಿ ನಾಡಿನ ಚಿಂತನಶೀಲ ಯುವ ಬರಹಗಾರರನ್ನು ಸೇರಿಸಿ 'ಗೆಳೆಯರ ಗುಂಪು' ಕಟ್ಟಿದರು. ಆ ಸಂಘಟನೆಯಲ್ಲಿ ತೋರಿಕೆ ಆಡಂಬರಗಳಿರಲಿಲ್ಲ. ಅದು ಕನ್ನಡ ಭಾಷೆ ಸಂಸ್ಕೃತಿಯನ್ನವಲಂಭಿಸಿದ ಕನ್ನಡದ ವಿಭಿನ್ನ ಉಪಸಂಸ್ಕೃತಿಯ ಸಂಯುಕ್ತ ಸಾಂಸ್ಕೃತಿಕ ಶೋಧವಾಗಿತ್ತು. ಅವರು ಸಮುದಾಯದ ಬಾಲಕನಾಗಿ ಬೆಳೆದು ಸಮಾಜದ ಎಲ್ಲರೊಂದಿಗೆ ಪ್ರೀತಿಯಿಂದಿರುವ ಲಕ್ಷಣವನ್ನೇ, ಹೊಂದಾಣಿಕೆಯನ್ನೇ ತನ್ನ ಸಂಘಟನೆಯ ಹಾಗೂ ಕಾವ್ಯದ ಗುಣವಾಗಿಸಿಕೊಂಡಿದ್ದರು. ಆ ಕಾರಣವಾಗಿಯೆ 'ವಿಶ್ವದೊನುಡಿಯಾಗಿ ಕನ್ನಡಿಸುತಿಹನಿಲ್ಲಿ । ಅಂಬಿಕಾತನಯನಿವನು' ಎಂದು ಹೆಮ್ಮೆಯಿಂದ ಹಾಡಿದರು. ಆ ಸಮೂಹ ಬದ್ಧ ಮನಸ್ಸು ಅವರ ಸಾಹಿತ್ಯ ಮತ್ತು ಜನ ಸಂಪರ್ಕವನ್ನು ರೂಪಿಸಿ ಅದು 'ಕಂಪಿನ ಕರೆ'ಯಂತೆ ಜನರನ್ನು ಸೆಳೆಯಿತು.

ಸುಭದ್ರ ನೌಕರಿಯಿಲ್ಲದ ಅಲೆಮಾರಿ ಬದುಕಿನ ದ್ವಂದ್ವ, ಸಂಘರ್ಷದಲ್ಲಿಯೇ ಸ್ಥಿರ ಆಲೋಚನೆಗಳ ಬೆನ್ನೇರಿ ಮಾನವ ಬದುಕಿನ ಸತ್ಯವನ್ನು ಕಾವ್ಯವಾಗಿಸಿದರು. ಪ್ರಕೃತಿಯ ಸೃಷ್ಟಿಯಾದ ಮಾನವನು ನಿಸರ್ಗದಿಂದ ಪಡೆದ ಇಂದ್ರಿಯಾನುಭವಗಳ ಅನುಭವವನ್ನು ಆನಂದಿಸುತ್ತ-ಆ ಪ್ರಕೃತಿ ನೀಡುವ ಅಧ್ಯಾತ್ಮಿಕ ಆನಂದದ ನೆಲೆಗೆ ಸಾಗಿದರು. ಪ್ರಕೃತಿಯ ಭಾಗವಾದ ಮಾನವನ ಒಳನೋಟವೇ ವಿಕಾಸಶೀಲ ಲಕ್ಷಣ ಎಂದು ಸಾರಿದರು. ಭೌತಿಕಾನುಭವವು ಇಂದ್ರಿಯಾನುಭವವಾಗಿ ಅದರಾಚೆಗಿನ ಅಧ್ಯಾತ್ಮನುಭವಾದುದೇ ಅವರ ಕಾವ್ಯದ ವೈಶಿಷ್ಟ್ಯವಾಯಿತು.

ಬೇಂದ್ರೆಯವರು ವಿರೋಧಾಭಾಸ, ದ್ವಂದ್ವಗಳಿಗೆ ಉನ್ಮುಖವಾಗಿರುವ ಮಾನವನ ಗುಣಧರ್ಮವನ್ನು ಶೋಧಿಸುತ್ತಲೇ ಅವನಲ್ಲಿರುವ ಐಕ್ಯ ಮತ್ತು ಸಾಮರಸ್ಯದ ಗುಣವನ್ನು ಕಾವ್ಯವಾಗಿಸಿದರು. ಅವರಿಗೆ ಕಾವ್ಯ ಬರಿ ಲೌಕಿಕವಾದ, ಸೌಂದರ್ಯಾರಾಧನೆಯ ಆತ್ಮ ಪ್ರಶಂಸೆಯ ಸಾಧನವಾಗಿರಲಿಲ್ಲ. ಅದು ಆತ್ಮಶೋಧದ ಕಾವ್ಯವಾಗಿ ಸತ್ಯದ ಅರಿವಿನತ್ತ ಸಾಗುವುದಾಗಿತ್ತು; ವ್ಯಕ್ತಿಯ ಎಚ್ಚರದ ಸಾಧನವಾಗಿತ್ತು.

ಕಾವ್ಯವೆಂಬುದು ಅವರಿಗೆ ಜೀವನ ವೈರುಧ್ಯದಲ್ಲಿಯೇ ತಿಳಿ, ಶಾಂತಿ, ನೆಮ್ಮದಿ ಅಡಗಿದೆ ಎಂಬುದನ್ನು ತಿಳಿಸುವ ಕಲಾಮಾಧ್ಯಮವಾಗಿತ್ತು. ಅವರ ಜೀವನಶೋಧವೇ ಕಾವ್ಯ

ಶೋಧವಾಗಿತ್ತು. ಅವರಿಗೆ ಅದು ವ್ಯಕ್ತಿಯ ಅನುಭವ ವಿಶೇಷಗಳು ಅನುಭಾವದೆಡೆಗೆ ಸಾಗಿ ಅದೇ ಚಿಂತನೆಗಳು ಸಹೃದಯನ ಅನುಭವವಾಗುವ ಗಾರುಡಿಗ ಕಲೆಯಾಗಿತ್ತು. ಅವರ ಕಾವ್ಯ ಒಂದು ಕಾಲಮಾನದ ಬರಿ ಒಣದಾಖಲೆಯಾಗದೆ ಮಾನವೀಯ ಮೌಲ್ಯಗಳ ಶೋಧವಾಗಿತ್ತು.

### ಮೈತ್ರಿಯ ಸೂತ್ರದಿ ಹೊಸ ಮಣಿ ಪೋಣಿಸಿ

'ಗೆಳೆಯರ ಗುಂಪು' ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಪುನಶ್ಚೇತನಕ್ಕೆ ಕಾರಣವಾದುದನ್ನು ಕುರಿತು ವಿ. ಕೃ. ಗೋಕಾಕರು 'ಉತ್ತರ ಕರ್ನಾಟಕದ ತರುಣರಲ್ಲಿ ಕನ್ನಡ ಸಂಸ್ಕೃತಿ ಮತ್ತು ಸಾಹಿತ್ಯದ ಬಗ್ಗೆ ಅಚಲವಾದ ಪ್ರೀತಿಯು ಹುಟ್ಟಿದ್ದಕ್ಕೆ ಹೆಚ್ಚಾಗಿ' 'ಗುಂಪಿ'ನ ಪ್ರಯತ್ನವೇ ಕಾರಣವೆಂದು ಹೇಳಬಹುದು... 'ಗುಂಪಿನ' ಕಡೆಯಿಂದ ಎರಡು ವರುಷಗಳ ವರೆಗೆ ಹೊರಡುತ್ತಿದ್ದ 'ಸ್ವಧರ್ಮ' ಪತ್ರಿಕೆಯು ಜನರಿಗೆ ಅದರ ಸಾಹಿತ್ಯಸೇವೆಯ ರೀತಿ-ನೀತಿ ಮತ್ತು ಸಹಾಯ-ಸಂಪತ್ತಿನ ಬಗ್ಗೆ ಸಾಕಷ್ಟು ಪರಿಚಯಮಾಡಿಕೊಟ್ಟಿತು. ಆ ಮೇಲೆ 'ಗುಂಪು' ಪ್ರಾಂತದ ಪ್ರಮುಖ ಪತ್ರಿಕೆಯಾದ 'ಜಯಕರ್ನಾಟಕ'ವನ್ನು ಹೊರಡಿಸುವ ಭಾರ ವಹಿಸಿತು. ಈ ಮಾಸಿಕ ಮತ್ತು ಅದರ ಹೆಸರಿನ ಗ್ರಂಥಮಾಲೆಯ ಮೂಲಕ ಅದು ಕನ್ನಡ ಜಾನಪದ ಸಾಹಿತ್ಯದ ಪುನರುಜ್ಜೀವನ ಸಫಲಗೊಳಿಸುವುದರಲ್ಲಿ ನೆರವಾಯಿತು. ಮಹಾನವಮಿ, ಪಂಪೋತ್ಸವ, ವಿದ್ಯಾರಣ್ಯೋತ್ಸವ, ಶಾಂತಕವಿ ತಿಥಿ ಮುಂತಾದ ಉತ್ಸವಗಳನ್ನು ಆಚರಣೆಯಲ್ಲಿ ತಂದಿತು. ಈಗ ಅವುಗಳಲ್ಲಿ ಕೆಲವನ್ನು ಇಡೀ ನಾಡು ಆಚರಿಸುತ್ತಿದೆ'[೧] ಎಂದು ಹೇಳಿದ್ದಾರೆ.

ವಾಮನ ಬೇಂದ್ರೆಯವರು 'ಗೆಳೆಯರ ಗುಂಪಿ'ನ ಸದಸ್ಯರ ಕಾವ್ಯ ಹಾಗೂ ಆತ್ಮೋನ್ನತಿಯ ಸಾಧನಾ ಮುಖವನ್ನು ಪರಿಚಯಿಸಿದ್ದಾರೆ. 'ಈ ಗುಂಪಿನಲ್ಲಿ ಕಾವ್ಯಸಾಧನೆಯೂ ಒಂದು ಪ್ರಮುಖ ಅಂಗವಾಗಿತ್ತು. ಏಕೆಂದರೆ 'ಕಾವ್ಯ ಒಂದು ಉತ್‌ಯೋಗ'. ಪ್ರತಿಯೊಬ್ಬರು ತಮ್ಮ ತಮ್ಮ ಉನ್ನತಿಗಾಗಿ, ಆತ್ಮೋನ್ನತಿಗಾಗಿ ಮಾಡಬೇಕಾದ ಸಾಧನೆ-ಕಾವ್ಯರಚನೆ ಆಗಿತ್ತು. ಹೀಗೆ ಆತ್ಮೋನ್ನತಿಯ ಸಾಧಕರು ಒಂದೆಡೆಗೆ ಕೂಡಿ ಮಾಡುವ ಯೋಗ ಸಾಧನೆಯೆ ? ಸಾಹಿತ್ಯ ಸಾಧನೆಯಾಗಿತ್ತು. ಬೇಂದ್ರೆಯವರಿಗೆ.'[೨]

### ಮಕ್ಕಳೊಳಿತ್ತು ಮಧುರತನ

ಬೇಂದ್ರೆಯವರು ಆಗಿನ ತಮ್ಮ ದಾಂಪತ್ಯವನ್ನು ಕುರಿತು ಯಾವ ಜನ್ಮಜನ್ಮಾಂತರದ ಸಂಸ್ಕಾರವೊ ತನ್ನ ಪತ್ನಿಗೆ ತನ್ನಲ್ಲಿ ವಿರಸ ಉಂಟಾಯಿತು. ವಿರಸ ಏನೇ ಇದ್ದರೂ ಪತ್ನಿಯಾದ ಅವಳು ಮೆಲುದನಿಯಲ್ಲಿದ್ದು ಕೆರಳಿ ಉದ್ರಿಕ್ತಳಾಗದ ಕಾರಣ, ತನ್ನ ಸಂಸಾರ ಚಂಡಿ

೧ ವಿ.ಕೃ ಗೋಕಾಕ, ಗೆಳೆಯರ ಗುಂಪಿನ ಕಣಸು, ಕವಿವರ ಬೇಂದ್ರೆ, ಪೂರ್ವೋಕ್ತ, ಪು-೨೯

೨ ವಾಮನ ಬೇಂದ್ರೆ, ಹಿನ್ನುಡಿ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ ಪು-೧೦೩೪

ಸಂದೀಪನದಂತಾಗಲಿಲ್ಲ. ಮಕ್ಕಳಲ್ಲಿ ಮಧುರತನವಿತ್ತು. ಆ ದಾಂಪತ್ಯದ ಗಾಥೆಯನ್ನು ಕುರಿತು ಅಂದು 'ಸಖೀಗೀತ' ಹಾಡಿದೆ. ಇಂದು ಬಾಲಮನಸ್ಸು ಬಾಲ್ಯಕಾಂಡವನ್ನು ರಚಿಸಿದೆ. ಅದನ್ನು ಕೇಳು ಎಂದು ಸಖಿಯನ್ನು ಕೇಳಿಕೊಂಡಿದ್ದೇನೆ, ಎಂದಿದ್ದಾರೆ.

'ತಾಯಿ ಇದ್ದಾ ಕಾಲ ಬಾಲ್ಯವಲ್ಲದೆ ಏನು,
ಇಳಿವಯಕೆ ನೆನೆಸಿದೆ ಎಳೆಯತನ'

ಬೇಂದ್ರೆಯವರು ಪತ್ನಿ ಲಕ್ಷ್ಮೀಬಾಯಿಯನ್ನುದ್ದೇಶಿಸಿ ಸಖಿ ನಮ್ಮ ಹಳೆಯ ಮಧುರಗೀತೆ ಹೊಸಹೊಸ ಭಾವ ಲಹರಿಗಳಲ್ಲಿ ಹರಿವ 'ಹಾಡ ಹಾಡುಗಳಲ್ಲಿ ಒಂದಾಗಿದೆ'. ಇದು ನಿರಂತರ ಚಲನಶೀಲ ದನಿಯಾಗಿ ಜನಪದ ಕಂಠದಲ್ಲಿದೆ. ಇದು ಸವಿನುಡಿಯ ಸೆಲೆಯಿಂದ ಹೊಮ್ಮಿದ್ದಾಗಿದ್ದು ಇದಕ್ಕೆ ಮುಪ್ಪಿಲ್ಲ. ಇದು ಬಾಲಮನದ ವಿಕಾಸರೂಪಿ ಜಲದ ಕಣ್ಣು, ನೆಲದ ಹಸಿರು, ಮುಗಿಲ ನೀಲಿ, ಜಗದ ಬೆಳಕು. ಇದನ್ನು ಯಾರು ಹಾಡಿದರೂ ಸವಿಯೇ ಸವಿ, ಸೊಬಗೇ ಸೊಬಗು ಎಂದು ಹೇಳಿದ್ದಾರೆ.

'ಸಖಿ ನಮ್ಮ ಹಳಗೀತ ಪೊಸಪೊಸ ಬಗೆಯಲ್ಲಿ
ಹಾಡ ಹಾಡುಗಳಲ್ಲಿ ಒಂದಾಗಿದೆ.
ಸವಿನುಡಿಯ ಸೆಲೆಯಿರುವ ಹಾಡಿಗೆ ಮುಪ್ಪಿಲ್ಲ
ಯಾರು ಹಾಡಿದರೂನು ಚೆಂದಾಗಿದೆ.'

ಬೇಂದ್ರೆಯವರು ಇಳಿವಯಸ್ಸಿನಲ್ಲಿ ಬಾಲ್ಯವನ್ನು ಧ್ಯಾನಿಸುತ್ತಾ ತನ್ನ ಬದುಕಿನ ಶೋಧಕ್ಕೆ ತೊಡಗಿ ತನ್ನ ವೈಯಕ್ತಿಕ ಅನುಭವಗಳನ್ನು ಮಾನಸಿಕ ದೂರದಿಂದ ಅವಲೋಕಿಸಿ ರಸಾನುಭವವಾಗಿಸಿದ್ದಾರೆ. ಅವರ ಈ ಬಾಲ್ಯಕಾಂಡವು ಆತ್ಮಕಥನವಾಗಿದ್ದರೂ ಅದರ ಮಾಸಿನಿಂದ ಬಿಡುಗಡೆ ಹೊಂದಿದ ಸರ್ವಾದರಣೀಯ ಮುದ್ದು ಮಗುವಿನಂತಿದೆ. ಅದು ಹೊಸ ಅರ್ಥ, ರೂಪ, ಲಾವಣ್ಯ, ಬೆಡಗಿನಿಂದ ಕೂಡಿದೆ. ಅವರ ಯಾವುದೇ ಜಾತಿ, ಮತ ಪಂಥ ಜನಾಂಗದ ಭೇದಕ್ಕೆ ಜೋತು ಬೀಳದ ಸ್ವಚ್ಛಂದ ಬಾಲ್ಯವೇ ಅವರನ್ನು 'ಸರ್ವವರ್ಣ ಮಾನವ' ಚಿಂತನೆಯತ್ತ ಕೊಂಡೊಯ್ದು, ಜಗದ ಕವಿಯನ್ನಾಗಿಸಿದೆ.

## ಬತ್ತದ ತವನಿಧಿ

ತಮ್ಮ ಬಾಲ್ಯಕಾಂಡದ ಮುಕ್ತಾಯದಲ್ಲಿ ಬೇಂದ್ರೆಯವರು ತಮ್ಮ ವಿಚಾರಧಾರೆಗೊಂದು ಕಿರೀಟ ತೊಡಿಸಿದ್ದಾರೆ. ಮಡದಿ ಮಕ್ಕಳ ಆನಂದಮಯ ವಾತಾವರಣದಿಂದಷ್ಟೆ ತೃಪ್ತರಾಗದೆ ಲೋಕಜೀವನವನ್ನು ಪರಿಮಳ ಪೂರ್ಣವಾಗಿಸುವ ಕಾಯಕಕ್ಕೆ ಅವರು ತಮ್ಮನ್ನು ತೊಡಗಿಸಿಕೊಂಡರು. ಆ ಹಂತದಲ್ಲಿ ಉಂಟಾದ ಕೌಟುಂಬಿಕ ಬಿರುಕುಗಳು ಅವರ ಮನಸ್ಸನ್ನು ನಲುಗಿಸಿದರೂ ಧೃತಿಗೆಡದೆ ಮುಂದೆ ಸಾಗಿದರು. ಕಾವ್ಯಾರಾಧನೆಯಿಂದ ಹಿಮ್ಮೆಟ್ಟದೆ

ಅದನ್ನೊಂದು ತಪಸ್ಸಾಗಿ ಮಾಡಿಕೊಂಡರು. ತಮ್ಮಂತೆಯೇ ಹಾಡು ಹಕ್ಕಿಯಾಗಿ ಗಾನ ಮಾಡುತ್ತಿದ್ದ ಗಃನ ವಿಹಾರಿಗಳಾದ ಮಧುರಚೆನ್ನರೇ ಮೊದಲಾದ ಸತ್ಕವಿಗಳನ್ನು ತಮ್ಮ ಹೃದಯದಲ್ಲಿ ತುಂಬಿಕೊಂಡರು.

ಕವಿಯು ತನ್ನ ವ್ಯಕ್ತಿಗತವಾದ ಅನುಭವಗಳನ್ನು ಹಾಡಾಗಿ ಹರಿಸಿದಾಗ ಅದಕ್ಕೊಂದು ವಿಶಾಲವಾದ ವ್ಯಾಪ್ತಿ ಲಭ್ಯವಾಗುತ್ತದೆ. ಅದು ಕೇವಲ ಕವಿಯ ಭಾವನೆಗಳಾಗಿ ಉಳಿಯದೆ ಸಮಷ್ಟಿಪ್ರಜ್ಞೆಯ ಭಾವನೆಯಾಗುತ್ತದೆ. ವ್ಯಕ್ತಿಗತವಾದ ಹಂತದಿಂದ ಮೇಲೆದ್ದು ಕವಿಯು ತನ್ನ ಭಾವನೆಗಳನ್ನು ಅಭಿವ್ಯಕ್ತ ಪಡಿಸಿರುತ್ತಾನಾದ್ದರಿಂದ ಅವು ಕಾಲ ದೇಶಗಳ ಎಲ್ಲೆಯನ್ನು ಮೀರಿ ಎಲ್ಲ ಸಹೃದಯರ ಅಂತರಂಗವನ್ನು ಬೆಳಗಿಸುತ್ತವೆ. ಸಾಧಾರಣೀಕರಣಗೊಂಡ ಕವಿ ಚಿಂತನೆಗಳು ಬೆಳಗು ದೀಪಗಳಾಗಿ, ಲೋಕಕ್ಕೆ ಶಾಶ್ವತ, ಮಾರ್ಗದರ್ಶನ ಮಾಡುತ್ತವೆ. ಆನಂದವನ್ನುಂಟುಮಾಡುವುದರ ಜೊತೆಗೆ ಲೋಕಾನುಭವವನ್ನೂ, ಲೋಕೋಪದೇಶವನ್ನೂ ಅವು ನಮಗೆ ಉಂಟುಮಾಡುತ್ತವೆ. ಬೇಂದ್ರೆಯವರ ಕಾವ್ಯವೆಂದರೆ ಅವು ಚಿರಯೌವನ ಪೂರ್ಣವಾದವು, ಚಿರಂತನವಾದುವು, ಚಿರಂಜೀವಿಯಾದವು. ಕವಿಯೇ ಹಾಡಿದಾಗ ಯಾವ ಭಾವಗಳು ಸ್ಫುರಿಸಿದ್ದುವೋ ಅವು ಸಹೃದಯರು ಹಾಡಿದಾಗಲೂ ಮತ್ತಷ್ಟು ಅನುರಣಿಸುತ್ತವೆ. ಮೊಗೆದಷ್ಟು ಅಲ್ಲಿನ ಭಾವಗಳು ಆಳವಾಗುತ್ತ ಹೋಗುತ್ತವೆ, ದಿವ್ಯಾಮೃತವನ್ನು ಚಿಮ್ಮಿಸುತ್ತಾ ಹೋಗುತ್ತವೆ. ಬೇಂದ್ರೆಯವರ ಕಾವ್ಯವೆಂದರೆ ಅದು ಬತ್ತದ ತವನಿಧಿ.

■ ■

# ‘ಬಾಲ್ಯಕಾಂಡ ಕಾವ್ಯ’ದ ಸರಳಗದ್ಯಾನುವಾದ

## ೧. ಮುದ್ದೆ ಮೂರ್ತತೆಗೊಂಡು ಕೂಸಾಗಿದೆ

ಸಖಿ ಲಕ್ಷ್ಮೀಬಾಯಿಯೆ ನಾನು ನನ್ನ ಬಾಲ್ಯದ ಕಥೆಯನ್ನು ಹೇಳುವ ಉಸುರಿನಲ್ಲಿಯೇ ಅದರಲ್ಲಿ ಅಡಗಿರುವ ನನ್ನ ಆಂತರಿಕ ನೋವು ನಲಿವುಗಳನ್ನು ಆಲಿಸಿ ಕೇಳುವ ಸಹೃದಯರಿಗಾಗಿ ಹುಡುಕುತ್ತಿದ್ದೇನೆ. ನೀನು ಗತಿಸಿದರೂ ಅಮರಳಾಗಿ ನನ್ನೆದುರು ಇರುವ ಸಹೃದಯಳೆಂದೇ ಬಗೆದು, ಕೇಳುತ್ತಿಯೆಂದೇ ತಿಳಿದು ಇದನ್ನೆಲ್ಲಾ ನಿನಗೆ ಅರುಹುತ್ತಿದ್ದೇನೆ. ಇದು ಒಂದು ಬಗೆಯ ಅಮೂರ್ತಭಾವಕ್ಕೆ ಹೊಸ ರೂಪಕೊಡುವ ಕಲೆಯ ಹೊಸ ಆವಿಷ್ಕಾರ. ನಾನು ಹೇಳುವ ಕಥೆ ವ್ಯಥೆಯಿಂದ ಕೂಡಿದ್ದರೂ ಅದರ ನೋವೆಲ್ಲ ನೀಗಿ ಅದೀಗ ಹೂವಾಗಿ ಅರಳಿದೆ, ಕಂಪಿನ ನೆಲೆಯಾಗಿದೆ. ಬಸಿರಿನಲ್ಲಿಯೇ ಇದ್ದಾಗ, ಇನ್ನೂ ಪೂರ್ಣವಾಗಿ ರೂಪುಗೊಂಡಿತ್ತಿಲ್ಲವಾದ ಕಾರಣ ನನಗೆ ಬೇನೆಯನ್ನುಂಟು ಮಾಡುತ್ತಿತ್ತು. ಈಗ ಮೂರ್ತರೂಪಗೊಂಡ ಕೂಸಾಗಿರುವುದರಿಂದ ಬಸಿರಬೇನೆ ಎಲ್ಲವೂ ಮಾಯವಾಗಿದೆ. ಈ ಮೊದಲು ಮಣ್ಣು ಮುದ್ದೆಯಂತಿದ್ದ ಭಾವಗಳೆಲ್ಲ ನಿನಗೆ ಹೇಳುತ್ತ ಹೋದಂತೆ ಕಣ್ಣು ಕೈಕಾಲುಗಳು ಮೂಡಿ ಸ್ಫುಟವಾದ ಆಕಾರವನ್ನು ತಾಳಿಕೊಳ್ಳುತ್ತಿವೆ.

ನಾನು ಹುಟ್ಟಿದ ವರ್ಷ ೧೮೯೬, ಶತಕ ಹೊರಳುವ ಕಾಲ. ಹತ್ತೊಂಬತ್ತನೇ ಶತಮಾನವು ತನ್ನ ಮುಕ್ತಾಯವನ್ನು ಕಾಣುವ ಹಂತದಲ್ಲಿತ್ತು. ನವನೂತನವಾದ ಇಪ್ಪತ್ತನೆಯ ಶತಮಾನವು ಇನ್ನೂ ಹುಟ್ಟಿರಲಿಲ್ಲ. ಹಳೆಯ ಶತಮಾನದ ಕೊನೆಯ ದಶಕದ ಕೊನೆ ಕೊನೆಗೆ ಪ್ರವೇಶ ಮಾಡಿದ್ದಾಗಿತ್ತು. ಹಾಗೆ ನನ್ನ ಜನನ ಒಂದು ಸಂಧಿಕಾಲ. ಅದು ವಿಶ್ವದಲ್ಲಿ ವೈಜ್ಞಾನಿಕ ಪ್ರಗತಿಯನ್ನು ಔದ್ಯೋಗಿಕರಣವನ್ನು ಸಾಧಿಸುತ್ತಿದ್ದ ಕಾಲ. ವಿಜ್ಞಾನಿಗಳು ಸೃಷ್ಟಿಗರ್ಭದಲ್ಲಿ ಹುದುಗಿದ್ದ ರೇಡಿಯಮ್ಮಿನ ಕಿರಣವನ್ನು ಸಾಕ್ಷಾತ್ಕರಿಸಿಕೊಂಡ ಕಾಲ ಅದು.

ಅದೇ ವೇಳೆಯಲ್ಲಿ ಗಂಟು ಬೇನೆ ಎಂಬ ಪ್ಲೇಗು ಮಾರಿಯು ಧಾರವಾಡವನ್ನು ಪ್ರವೇಶಿಸಿತ್ತು, ಆ ವ್ಯಾಧಿಯು ಅಲ್ಲಲ್ಲಿ ತನ್ನ ತುಂಟತನವನ್ನು ಮೆರೆಯುತ್ತ ಪ್ರಾಣಗಳನ್ನು ನುಂಗಿ ನೊಣೆಯುತ್ತಿತ್ತು. ಅಷ್ಟು ಪ್ರೌಢಾವಸ್ಥೆಗೆ ಬಾರದಿದ್ದರೂ ತನ್ನ ಬಾಲಲೀಲೆಯಲ್ಲಿಯೇ ತನ್ನ ಶಕ್ತಿವಿಶೇಷಗಳನ್ನು ಮೆರೆಯುತ್ತಿತ್ತು. ಆಗಲೇ ರಾಷ್ಟ್ರೀಯ ಚಳುವಳಿ ಎನಿಸಿದ ಸ್ವಾತಂತ್ರ್ಯ ಸಂಗ್ರಾಮವು ಪ್ರಾರಂಭಾವಸ್ಥೆಯಲ್ಲಿದ್ದು ಕುಂಟುತ್ತ ನಡೆದಿತ್ತು. ಅಂದಿನ ರಾಷ್ಟ್ರೀಯ ನಾಯಕರಿಗೆ ಒಂದು ಆದರ್ಶವಿತ್ತು. ಮುಂದಾಳುಗಳನ್ನು ಒಪ್ಪಿಕೊಂಡು ನಡೆಯುವ ಹಿಂಬಾಲಕರೂ ಇದ್ದರು.

ಆಗ ಸ್ವಾತಂತ್ರ್ಯತತ್ತ್ವ ಜನಮನದಲ್ಲಿ ಮೂಡಿತ್ತು. ಆ ಚಳುವಳಿಯಿಂದಾಗಿ ಬ್ರಿಟೀಷ್ ಆಡಳಿತದ ಕನಸು ಒಡೆಯಲು ಆರಂಭವಾಗಿತ್ತು. ವಿಕ್ಟೋರಿಯಾ ಮಹಾರಾಣಿ ರಾಜ್ಯವಾಳುವ ಕನಸು ಹರಿದು ಹೋಗುವುದರಲ್ಲಿತ್ತು. ಸ್ವರಾಜ್ಯ ಕಲ್ಪನೆಯ ಬೀಜಕ್ಕೆ ಮೊಳಕೆಯೊಡೆದಿತ್ತು. ಅಂತಹ ಪರ್ವಕಾಲದಲ್ಲಿ ಅಂಬಿಕೆಯ ಹೃದಯಾಂಬರದಲ್ಲಿ ನನ್ನ ಜನನಕೆ ಸಿದ್ಧತೆಗಳಾದವು. ಆಕೆಯ ಹೃದಯಾಕಾಶದಲ್ಲಿ ನವಮೇಘವು ಶಿಶುವಿನ ರೂಪದ ಪೂರ್ವರೂಪವಾಗಿ ಒಂದು ತತ್ತಿಯನ್ನಿಟ್ಟಿತ್ತು.೧

ಆ ತಾಯಿ ಸಾಮಾನ್ಯಳಲ್ಲ, ದೈವಸ್ವರೂಪಿಣಿಯಾದ ಮಹಾತಾಯಿಯಾಗಿದ್ದಳು, ಶಕ್ತಿ ಸ್ವರೂಪಿಣಿಯಾಗಿದ್ದಳು. ಅವಳನ್ನು ಕೊಂಡಾಡುವುದಕ್ಕಾಗಲಿ, ಅವಳ ಮಹಿಮಾತಿಶಯವನ್ನು ವರ್ಣಿಸುವುದಕ್ಕಾಗಲಿ ನನಗೆ ಧೈರ್ಯ ಸಾಕಾಗುವುದಿಲ್ಲ. ಅವಳು ನನ್ನ ವರ್ಣನೆಯ ಬಾಯಿಗೆ ತುತ್ತಾಗಲಾರಳು. ಹಾಗೆಂದು ಮೌನತಾಳಿಬಿಡುವುದು ಲೋಕಧರ್ಮಕ್ಕೆ, ಕಾವ್ಯಧರ್ಮಕ್ಕೆ ಹೊರತಾಗುತ್ತದೆ. ಈ ಕಾರಣದಿಂದಾಗಿ ಅವಳನ್ನು ಕುರಿತು ನನ್ನ ಅಂತರಾಳದಲ್ಲಿರುವ ಮಾತುಗಳನ್ನು ನಾಲ್ಕಾರು ಪಾದಗಳನ್ನಾಗಿ ಮಾಡಿ ಅವಳ ಪಾದಗಳಿಗೆ ಸಮರ್ಪಿಸುತ್ತಿದ್ದೇನೆ.

ಹೆಣ್ಣು ಎಂದರೆ ಅವಳು ಮಾತೃಸ್ವರೂಪಿಣಿಯಾದವಳು. ಹೆಣ್ಣೆಂದರೂ ಅವಳೆ; ತಾಯಿಯೆಂದರೂ ಅವಳೆ; ಅದೊಂದು ಅಭೇದ ಕಲ್ಪನೆ. ಇದು ನನಗೆ ನನ್ನ ತಾಯಿ ಬಾಲ್ಯದಲ್ಲೇ ಬೋಧಿಸಿದ ಮಂತ್ರ. ಪುರುಷರೆಲ್ಲರೂ ಇದನ್ನು ಸರಿಯಾಗಿ ಅರಿತರಾದರೆ ಇಡೀ ವಿಶ್ವವೇ  ವಿಶ್ವಮಾತೆಯ ದೇಗುಲವಾಗುತ್ತದೆ. ಅಮ್ಮನ ಬಸಿರೆ ಬ್ರಹ್ಮಾಂಡ, ಅವಳೇ ಈ ವಿಶ್ವದ ಬೃಹತ್ ಚೇತನ. ಮನುಷ್ಯರೂಪಿ ಈ ದೇಹ ಪಿಂಡಾಂಡ ಸೀಮಿತವಾದ ಮಿತಿಗಳಿಂದ ಕೂಡಿದ್ದು. ಅವಳು ಪಿಂಡಾಂಡರೂಪಿಯಾಗಿದ್ದರೂ ನಿಜದಲ್ಲಿ ಬ್ರಹಾಂಡರೂಪಿ.೨ ಎಲ್ಲ ಮಾನವರ ಜನ್ಮದಾತೆಯಾದ ತಾಯಿಯೇ ವಿಶ್ವವ್ಯಾಪಿಯಾದ ಮಹತ್ತು ಹಾಗೂ ಬೃಹತ್ತು. ಗಿಡದಿಂದ ತೆನೆ ಅಥವಾ ಕಾಯಿ ಹೊಮ್ಮುವ ಎಳೆಯ ಅಂಕುರವೇ ಕುಸುರು. ಅದೇ ರೀತಿ ತಾಯಿ ಎಂಬ ಬ್ರಹ್ಮಾಂಡದಿಂದ ಹುಟ್ಟಿದ ಮಗು ಕುಸುರು. ಅದಕ್ಕೆ ಬೆಲೆಯಿದೆ. ತಾಯಿ ತನ್ನ ಕುಡಿಯಾದ ಶಿಶುವಿಗೆ ಅದರ ಮೌಲ್ಯವನ್ನು ಸದಾ ತಿಳಿಸುವಳು. ಈ ಬಗೆಯ ನನ್ನ ಚಿಂತನೆಯಲ್ಲಿ ತಾಯಿ ಮತ್ತು ಮಗುವಿನ ವಿಶ್ವವ್ಯಾಪಕ ಘನತೆಯಿದೆ, ಮಾತೃ ವ್ಯಾತ್ಸಲ್ಯವಿದೆ. ಅದನ್ನು ಆತ್ಮಗತ ಮಾಡಿಕೊಂಡು ನಾನು ಸಾಗುತ್ತಿದ್ದೇನೆ.

**ಅಡಿಟಿಪ್ಪಣಿಗಳು**

೧. ಉಪನಿಷತ್ತುಗಳಲ್ಲಿ ಮಾನವನ ಪೂರ್ವಜನ್ಮ ಮತ್ತು ಪುನರ್ಜನ್ಮಗಳ ಅತ್ಯಂತ ಸೂಕ್ಷ್ಮವಾದ ವಿವರಗಳಿವೆ. ಸ್ವರ್ಗದಲ್ಲಿರುವ ಚೇತನದ ಪುಣ್ಯವು ಮುಗಿಯುತ್ತಿದ್ದಂತೆಯೆ ಅಲ್ಲಿನ ದೇವತೆಗಳು ಆ ಚೇತನವನ್ನು ಭೂಮಿಗೆ ತಳ್ಳಿ ಬಿಡುತ್ತಾರೆ. 'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ' ಎಂದು ಭಗವದ್ಗೀತೆಯಲ್ಲಿಯೂ ಹೇಳಿದೆ. ಹಾಗೆ ತಳ್ಳಲ್ಪಟ್ಟ ಚೇತನವು ಮೇಘಗಳೊಡನೆ ಸೇರಿಕೊಂಡು ಭೂಮಿಗೆ ಬಿದ್ದು ದವಸ ಧಾನ್ಯಗಳೊಡನೆ ಬೆರೆತುಕೊಂಡು ತಾನು ಪುನರ್ಜನ್ಮ ಪಡೆಯಲು ಯಾವುದು ತಾಣವೊ ಆ ಪುರುಷನಿಂದ ತಿನ್ನಲ್ಪಡುತ್ತದೆ. ಅಲ್ಲಿಂದ ಮುಂದೆ ರೇತಸ್ಸಾಗಿ ಸ್ತ್ರೀಯ ಗರ್ಭಕೋಶವನ್ನು ಸೇರಿಕೊಳ್ಳುತ್ತದೆ. ರೇತಸ್ಸಿನ ರೂಪವಾಗಿ ಸೇರಿಕೊಳ್ಳುವಿಕೆಯನ್ನೇ ಇಲ್ಲಿ ಕವಿವರ್ಯರು 'ತತ್ತಿ' ಎಂದಿದ್ದಾರೆ.

೨. ಬ್ರಹ್ಮಾಂಡವೆಂಬುದು ಆಕಾಶ, ವಾಯು, ಅಗ್ನಿ, ಜಲ ಮತ್ತು ಪೃಥ್ವಿ ಎಂಬ ಪಂಚಮಹಾಭೂತಗಳ ಸಂಯೋಗದಿಂದ ನಿರ್ಮಾಣವಾಗಿದೆ. ಆ ಪಂಚಮಹಾಭೂತಗಳಿಂದಲೆ ಮಾನವ ಶರೀರವೂ ರೂಪು ತಳೆಯುತ್ತದೆ. ಬ್ರಹ್ಮಾಂಡದ ಪಂಚಭೂತಗಳು ಭೂಮರೂಪದಲ್ಲಿದ್ದರೆ ಅವೇ ಅಣುರೂಪಿಯಾಗಿ ಈ ದೇಹದಲ್ಲಿ ಸೇರಿಕೊಳ್ಳುತ್ತವೆ. ಬ್ರಹ್ಮಾಂಡದ ಒಂದು ಅಣುರೂಪವೇ ಈ ದೇಹ, ಇದೇ ಪಿಂಡಾಂಡ.

## ೨. ಪುರುಷಾರ್ಥಕೆತ್ತಿದ ಮೂರ್ತಿಯದು

ನನ್ನ ತಾಯಿಯ ತಾಯಿ ಗೋದುಬಾಯಿಯೇ ನಮ್ಮ ಕುಟುಂಬದ ಆಧಾರಸ್ತಂಭ. ಅವಳಿಂದಲೇ ನನ್ನವ್ವ, ನಾನು, ನನ್ನ ತಮ್ಮಂದಿರು ಉಳಿದು ಬೆಳೆದೆವು. ಅವಳು ಸ್ತ್ರೀ ರೂಪದಲ್ಲಿದ್ದರೂ ಪುರುಷನ ಪೌರುಷವನ್ನು ಪಡೆದಿದ್ದಳು.[೧] ಅವಳ ತುದಿಮೂಗು ಧೈರ್ಯವನ್ನು ಸಂಕೇತಿಸುವಂತೆ ನೀಳವಾಗಿದ್ದು, ನೋಟವಾದರೋ ಯಾರಿಗೂ ಹೆದರದ ನೇರ ದಿಟ್ಟಿಯಾಗಿತ್ತು. ಹೆಣ್ಣಾಗಿ ಹುಟ್ಟಿದರೂ ಅವಳು ಗಂಡಿನಂತೆ ಬಾಳಿದಳು. ಅವಳ ಮಾತುಗಳಲ್ಲಿ ಉತ್ಸಾಹ, ವೀರರಸಗಳು ಅನುಪಮವಾಗಿ ತುಳುಕುತಿದ್ದುವು.

ನನ್ನ ಅಜ್ಜಿ ಹದಿನೇಳು ಮಕ್ಕಳನ್ನು ಹಡೆದಳು, ಆ ಪೈಕಿ ಒಂದು ಹೆಣ್ಣುಮಗು ಮಾತ್ರ ಉಳಿಯಿತು. ಅಷ್ಟಾದರೂ ನನ್ನ ಅಜ್ಜಿ ಜಗ್ಗಲಿಲ್ಲ, ಕುಗ್ಗಲಿಲ್ಲ, ಎದೆಗುಂದಲಿಲ್ಲ. ಹಾಗೆ ಉಳಿದುಕೊಂಡ ಒಂದು ಹೆಣ್ಣು ಮಗುವೆ ನನ್ನ ತಾಯಿ ಅಂಬವ್ವ. ಅಂತಹ ಧೀರೆ ನನಗೆ 'ಹುಲಿಹಾಲು ಕುಡಿಸಿದಳು' ಹುಲಿಯಂತಹ ಧೈರ್ಯ ನನ್ನ ರಕ್ತವನ್ನು ಹೊಗುವಂತೆ ಮಾಡಿದಳು. ಅವಳು ನನ್ನನ್ನು 'ತಂತಿಯಲ್ಲಿ ನಡೆಸಿದಳು'[೨] ಜೀವನದ ಹೋರಾಟದಲ್ಲಿ ಸಾಹಸ ಪ್ರವೃತ್ತಿಯನ್ನು; ದೇಹ ಮತ್ತು ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡ ಸಮತೋಲ ತಪ್ಪದ ಜೀವನ ವಿಧಾನವನ್ನು ಕಲಿಸಿದಳು. 'ಸೂಜಿಯ ಮೊನೆಯಲ್ಲಿ ನಿಲಿಸಿದಳು' ಕಷ್ಟದಲ್ಲಿ, ನೋವಿನಲ್ಲಿ ಯಾತನೆಯಲ್ಲಿ ಹೇಗೆ ಬದುಕಬೇಕೆಂಬ ಶಿಸ್ತನ್ನು ಕಲಿಸಿದಳು. ನಾನು ನನ್ನ ಅಜ್ಜಿಯನ್ನು ನೆನೆಯುತ್ತಿದ್ದಂತೆ ಪ್ರತಿಮೆಗಳು ಭಾವಸಂಜೀವಿನಿಯಂತೆ ಮುನ್ನುಗ್ಗಿ ಬರುತ್ತವೆ.

ನನ್ನ ಅಜ್ಜಿ ವೃದ್ಧಾಪ್ಯದ ಹೊಸ್ತಿಲಲ್ಲಿದ್ದರೂ ಶ್ರದ್ಧೆಯಿಂದ ತನ್ನ ಕರ್ತವ್ಯದಲ್ಲಿ ಸದಾ ತೊಡಗಿರುತ್ತಿದ್ದಳು. ಅವಳು 'ಕಾಯಕವೇ ಕೈಲಾಸ'ವೆಂದು ನಂಬಿದ್ದಳು. ತನ್ನ ಪಾಲಿಗೆ ಬಂದ ಕರ್ತವ್ಯವನ್ನು ತನ್ನ ಕೊನೆಯುಸಿರಿರುವ ವರೆಗೂ ನಿರ್ವಹಿಸಿದಳು. ಅವಳ ಜೀವನವೇ ಒಂದು ಮಹಾಯಜ್ಞವಾಗಿತ್ತು. ಸರ್ವಸಮರ್ಪಣ ಭಾವದಿಂದ ಆ ಯಜ್ಞಾಗ್ನಿಗೆ ಸ್ವಾಹಾ ಸ್ವಾಹಾ ಎಂದು ಹೇಳುತ್ತ ತನ್ನ ಸರ್ವಸ್ವವನ್ನು ಸಮರ್ಪಿಸಿದಳು.

ನನ್ನ ತಾಯಿ ಮತ್ತು ಅಜ್ಜಿಗೆ ಸದ್ಗುರುನಾಥ ಶ್ರೀ ಚಿದಂಬರಸ್ವಾಮಿಗಳ ಬಗ್ಗೆ ಅಪಾರವಾದ ಭಕ್ತಿ, ಶ್ರದ್ಧೆ. ಶ್ರದ್ಧೆ ಇದ್ದವರ ಅಂತರಂಗದಲ್ಲಿ ಗುರು ಹುಟ್ಟುತ್ತಾನೆ ಎಂಬಂತೆ ಅವರ ಮನದಲ್ಲಿ ಆ ಗುರು ಸದಾ ವಾಸಿಸುತ್ತಿದ್ದನು. ಯಾವ ಭಕ್ತರು ಹಂಬಲಿಸುತ್ತ ಪ್ರೀತಿಯಿಂದ ನೋಡುತ್ತಾರೊ ಅಂತಹವರನ್ನು ಗುರು ಪ್ರೀತಿಸುತ್ತಾನೆ. ಹಾಗಾಗಿ 'ಆರ್ತಾರ್ತಿಪ್ರೀತ' ಗುರುಗೊಂದಾವಲೇಕರ ಮಹಾರಾಜರನ್ನು ನನ್ನ ಅಜ್ಜಿ ಸದಾ ನೆನೆಯುತ್ತಿದ್ದಳು. ಅನನ್ಯ ಗುರು ಭಕ್ತಳಾದ ಆಕೆ ನನ್ನ ಪ್ರಕಾರ 'ಗಾಳಿಯಲ್ಲಿ ನಡೆದಾಡಿ ಮೇಲು ಚಿಕ್ಕೆಯ ನೋಡಿ /ಕೊನೆಗಳಿಗೆ ಗೆದ್ದಳು ಎನಿಸಿದ್ದಳು'[೩] ನೆಲದಲ್ಲಿ ಹೆಜ್ಜೆಯೂರದೆ, ಬದುಕಿನ ಭಾವಗಳಿಗೆ ಅಂಟಿಕೊಳ್ಳದೆ, ಆಗಸದ ನಕ್ಷತ್ರಗಳನ್ನೇ ನೋಡುತ್ತ ; ಪರಮಾರ್ಥವನ್ನು ಹಂಬಲಿಸುತ್ತ ತನ್ನ ಬದುಕನ್ನು ಸಾರ್ಥಕ ಪಡಿಸಿಕೊಂಡಳು. ಅವಳು ಶಾಂತಿಪೂರ್ಣವಾದ ಮರಣವನ್ನು ತನ್ನದಾಗಿಸಿಕೊಂಡು ಗೆದ್ದಳು. 'ಶರಣರ ಗುಣವನ್ನು ಮರಣದಲ್ಲಿ ನೋಡು' ಎಂಬಂತಿತ್ತು ಅವಳ ಅಂತ್ಯಕಾಲ.

ನನ್ನ ಅಜ್ಜಿಯ ಕಾಲವೆಂದರೆ ಅದು ಸ್ವಾತಂತ್ರ್ಯ ಪ್ರೇಮಿಗಳಾದ ಭಾರತೀಯರು ಬ್ರಿಟೀಷರ ವಿರುದ್ಧ ಬಂಡಾಯವೇಳುತ್ತಿದ್ದ ಕಾಲ. ನನ್ನ ಮುತ್ತಜ್ಜ ಮುತ್ತಜ್ಜಿಯವರು ಅದರಲ್ಲಿ ಪಾಲ್ಗೊಂಡುದೇ ಕಾರಣವಾಗಿ ಅವರ ಬದುಕು ಛಿದ್ರವಿಚ್ಛಿದ್ರವಾಯಿತು. ಅಂತಹ ಖಂಡಿತ ಜೀವನದ ನೋವನ್ನು ಅಜ್ಜಿ ಅನುಭವಿಸುತ್ತಿದ್ದಳು. ಅಂದಿನ ಆ ನೋವು ಅವಳನ್ನು ಎಂತಹ ಘೋರ ಕಹಿಯನ್ನಾದರೂ ಉಣ್ಣುವ ಶಕ್ತಿಯನ್ನು ದೊರಕಿಸಿಕೊಟ್ಟಿತ್ತು.[೪] ನನ್ನ ಅಜ್ಜಿಯ ತಾಯಿ ತಂದೆಯವರು ಬ್ರಿಟೀಷರ ವಿರುದ್ಧದ ಹೋರಾಟದಲ್ಲಿ ತಮ್ಮ ಸರ್ವಸ್ವವನ್ನೂ ಸಮರ್ಪಿಸಿ ಬಿಟ್ಟಿದ್ದರು. ಅಂತಹವರ ಮಗಳಾಗಿ ನನ್ನ ಅಜ್ಜಿಯು ಬದುಕಿನ ಪರ್ಯಂತ ಬಹುಬಗೆಯ ದುಃಖಗಳನ್ನೆ ಅನುಭವಿಸಿದಳು. ಪರಮಾತ್ಮನಲ್ಲದೆ ಅನ್ಯ ರಕ್ಷಕರಾರೂ ಅವಳಿಗಿರಲಿಲ್ಲ. ಕಾಪಾಡು, ಕಾಪಾಡು ಎನ್ನುತ್ತ, ಆ ಸರ್ವಶಕ್ತನನ್ನೇ ಬೇಡುತ್ತ ಬದುಕಿನ ಹಾದಿಯಲ್ಲಿ ಮುನ್ನಡೆದಳು.

ನನ್ನ ಅಜ್ಜಿ ಸಂಕಟದ ಕಣ್ಣೀರು ಹರಿಸಿದರೂ ಅದನ್ನು ಹೃದಯದ ಒಳತುತ್ತಾಗಿ ಸ್ವೀಕರಿಸಿದಳು. ಇನ್ನೊಬ್ಬರ ಮುಂದೆ ಹೇಳಿಕೊಂಡು ಗೋಳಾಡಲಿಲ್ಲ. ಕಪ್ಪೆಯ ಚಿಪ್ಪು ಸ್ವಾತಿಮಳೆಯ ಹನಿಯನ್ನು ತನ್ನೊಳಗೆ ಅಡಗಿಸಿಟ್ಟುಕೊಂಡು ಮುತ್ತಾಗಿ ಪರಿವರ್ತಿಸುತ್ತದೆ. ಹಾಗೆಯೆ ನನ್ನ ಅಜ್ಜಿಯೂ ಸಂಕಟದ ಕಣ್ಣೀರ ಹನಿಗಳನ್ನೆಲ್ಲ ತಮ್ಮ ಹೃದಯ ಸಂಪುಟದಲ್ಲಿ ಅಡಗಿಸಿಟ್ಟುಕೊಂಡು ಮುತ್ತಿನ ಮಣಿಯಾಗಿ ರೂಪಿಸಿದಳು. ತಾನು ಸಂಕಟವನ್ನುಂಡು ಆ ಮುತ್ತುಗಳನ್ನು ಲೋಕಕ್ಕೆ ನೀಡಿದಳು.

ನೋವಿಗೆ ಅವಳು ಜಗ್ಗದೆ ಕುಗ್ಗದೆ ಮೈಮುರಿದು ದುಡಿದು ರಾಜನ ಹಾಗೆ ಉಂಡು ಪಾಲಿಗೆ ಬಂದದ್ದು ಪಂಚಾಮೃತವೆಂಬಂತೆ ಸುಖದುಃಖಗಳನ್ನು ಸಮನಾಗಿ ಅನುಭವಿಸಿದಳು.

***ಅಡಿಟಿಪ್ಪಣಿಗಳು***

೧. 'ಪುರುಷಾರ್ಥಕೆತ್ತಿದ ಮೂರ್ತಿಯದು' - ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬಿವು ಚತುರ್ವಿಧ ಪುರುಷಾರ್ಥಗಳು. ಆಕೆ ಅವುಗಳನ್ನು ಒಂದಕ್ಕೊಂದಕ್ಕೆ ವಿರೋಧವಾಗದಂತೆ ಬದುಕಿನಲ್ಲಿ ಸಾಧಿಸುವ ಮೂರ್ತಿಯಾಗಿದ್ದಳು.

೨. 'ತಂತಿಯಲ್ಲಿ ನಡೆಸಿದಳು', ಎಂಬ ಮಾತು ಸರ್ಕಸ್ಸಿನ ಚಿತ್ರವನ್ನು ನಮ್ಮ ಹೃದಯಕ್ಕೆ ತುಂಬುತ್ತದೆ. ತಂತಿಯ ಮೇಲೆ ನಡೆಯುವಾಗ ಆ ಕಲಾವಿದರು ಏಕಾಗ್ರಮನಸ್ಕರಾಗಿ ತಮ್ಮ ಮನಸ್ಸಿನ ಮತ್ತು ದೇಹದ ಸಮತೋಲನವನ್ನು ಕಾಪಾಡಿಕೊಳ್ಳಬೇಕು. 'ತಂತಿಯಲ್ಲಿ ನಡೆಸುವುದು' ಎಂಬುದು ಒಂದು ನುಡಿಗಟ್ಟೂ ಹೌದು. ಸಂಕೀರ್ಣದಲ್ಲಿ ಮುನ್ನಡೆಸಿಕೊಂಡು ಹೋಗುವುದು ಎಂಬುದೇ ಅದಕ್ಕಿರುವ ಅರ್ಥ.

೩. ಇದೊಂದು ಬೇಂದ್ರೆಯವರ ಅಧ್ಯಾತ್ಮ ಸಾಧನಾಫಲವಾದ ಪ್ರತಿಮಾ ಸೃಷ್ಟಿ. ಈ ಪಾರ್ಥಿವ ಲೋಕದ ನೂರೆಂಟು ನೋವು ಯಾತನೆಯ ಸ್ತರವನ್ನು ಬಿಟ್ಟು ಅಲೌಕಿಕದ ಪರಮಾರ್ಥ ಸ್ತರಕ್ಕೆ ಏರುತ್ತ ಆದರ್ಶದ ಚಿಕ್ಕೆಯನ್ನು ನೋಡಿ ಉನ್ಮುಖವಾಗಿ ಹಿರಿದಾದುದಕ್ಕೆ ಹಂಬಲಿಸಿ ಗೆದ್ದೆ ಎಂಬುದು. ಅದು ಗೋದೂಬಾಯಿಯ ಬಗೆಗಿನ ಅಧ್ಯಾತ್ಮ ದರ್ಶನ. ಅದು ನಮ್ಮ ಭಾರತೀಯ ಸಂಸ್ಕೃತಿಯಲ್ಲಿಯ ವೃದ್ಧೆಯಾದವರ ಜೀವನ ರೀತಿ.

೪. 'ಬಸಿರ ಕುತ್ತ ಹೊತ್ತುಕೊಂಡು', 'ಗೋದಲೆಗೆ ಬಾಗೋದು' ಎಂಬ ಕರೆಗೆ ಓಗೊಟ್ಟು 'ತಲವಾಯಿ' ಎಂಬ ಊರಿನ ದನದ ಕೊಟ್ಟಿಗೆಯಲ್ಲಿ ಗೋದುಬಾಯಿಯು ಅಂಬವ್ವನನ್ನು ಹಡೆದಳು. ಹೀಗಾದುದರಿಂದ ಅವಳಿಗೆ ಬದುಕಿನಲ್ಲಿ ಎಲ್ಲ ಕಹಿಯನ್ನೂ ನುಂಗಿಕೊಳ್ಳುವ ಸಾಮರ್ಥ್ಯ ಬೆಳೆಯಿತು. ತನ್ನ ಹದಿನೇಳನೇ ಒಡಲ ಕುಡಿಗಾಗಿ ತನ್ನ ಖಂಡಿತ ಜೀವನಕ್ಕೆ ಬದುಕನ್ನು ಅರಸುತ್ತ 'ಊಟದ ಮನೆ'ಯನ್ನು ಧಾರವಾಡದಲ್ಲಿ ತೆರೆದಳು. ಸಿರಿವಂತ ಬ್ರಾಹ್ಮಣರ ಮನೆಯಲ್ಲಿ ಅಡುಗೆ ಮಾಡುತ್ತ ತನ್ನ ಮಗಳನ್ನು, ಅಳಿಯ ರಾಮಚಂದ್ರ ಬೇಂದ್ರೆಯನ್ನು ಮತ್ತು ಮೊಮ್ಮಕ್ಕಳನ್ನು ಸಾಕಿದಳು. ಹಾಗೆ ಜೀವನ ಸಾಗಿಸುತ್ತಿರುವಾಗಲೆಲ್ಲ ಪರಮಾತ್ಮನಲ್ಲೆ ಚಿತ್ತವಿಟ್ಟು ಕಾಪಾಡು, ಕಾಪಾಡು ಎಂದು ಬೇಡಿಕೊಳ್ಳುತ್ತಿದ್ದಳು - ಈ ಎಲ್ಲ ಅರ್ಥವು 'ಖಂಡಿತ ಜೀವನ' ಎಂಬ ಹಾಗೂ ಇತರ ನುಡಿಗಳಲ್ಲಿ ಧ್ವನಿತವಾಗಿದೆ.

## ೩. ತಂದೆಯವರ ಮಾತು ಒಂದೆ ಮಾತಿನೊಳಾಡಿ

ನಾನೀಗ ನನ್ನ ತಂದೆಯವರಾದ ರಾಮಚಂದ್ರ ಬೇದ್ರೆಯವರ ವಿಚಾರವನ್ನು ಸಂಗ್ರಹವಾಗಿ ಒಂದೆರಡು ಮಾತುಗಳಲ್ಲಿ ಹೇಳಿ ಅವರ ಚರಣಕಮಲಗಳಿಗೆರಗಿ ಮುನ್ನಡೆಯುತ್ತೇನೆ. ಅವರು ತಮ್ಮ ಪ್ರಾರಬ್ಧಕರ್ಮದ ಫಲವಾಗಿ ಒಂದಷ್ಟು ಪಾಪಗಳನ್ನು ಈ ಜನ್ಮಕ್ಕೆ ಅನುಭವಿಸಲು

ತಂದಿದ್ದರು. ಅದನ್ನು ಅನುಭವಿಸುವಾಗ ಮಾತ್ರ ತಾವು ಯಾವ ಪಾಪಕರ್ಮವನ್ನೂ ಮಾಡದೆ ನಿಷ್ಪಾಪರಾಗಿದ್ದು ಕೊಂಡಿದ್ದರು. ಅವರು ತಮ್ಮ ಪ್ರಾರಬ್ದ ಕರ್ಮದ ಫಲವಾಗಿ ಬೇಕಾದಷ್ಟು ಸಂಕಟ ಪರಂಪರೆಯನ್ನೆ ಅನುಭವಿಸಿದರು. ಅವರು ಅನುಭವಿಸಿದ ಜೀವನ ತಾಪಗಳನ್ನು ಅವರು ಮಾತ್ರವೇ ಬಲ್ಲರು. ಮಿಕ್ಕ ಯಾರಿಗೂ ಅದು ತಿಳಿದಿಲ್ಲ ; ಅದರ ವರ್ಣನೆಯೂ ಸಾಧ್ಯವಿಲ್ಲ.

ನನ್ನ ತಂದೆಯವರು ಗಂಡಮಾಲೆಯೆಂಬ ಕ್ರೂರವಾದ ರೋಗದಿಂದ ಬಳಲುತ್ತಿದ್ದರು. ಆದರೂ ಅದನ್ನು ಹೇಗೋ ಸಹಿಸಿಕೊಂಡಿದ್ದರು. ಶಿವನು ರುಂಡಮಾಲೆಯನ್ನು ಕಂಠದಲ್ಲಿ ಧರಿಸಿದ ಹಾಗೆಯೇ ಇವರ ಕಂಠದಲ್ಲಿ ಗಂಡಮಾಲೆ ಶೋಭಿಸುತ್ತಿತ್ತು. ಅವರು ಯಾವಾಗ ಬೇಕಾದರೂ ಮರಣವನ್ನಪ್ಪಬಹುದಾದ ಸನ್ನಿವೇಶವಾಗಿತ್ತು. ಹೀಗಾಗಿ ಅವರು ಬದುಕಿದ್ದಾರೆ ಎಂದು ಹೇಳಿದರೂ ಮಸಣದಲ್ಲಿದ್ದುಕೊಂಡೇ ಉಸಿರಾಡುತ್ತಿದ್ದಾರೆ ಎನಿಸುವಂತಿತ್ತು. ಗಂಡಮಾಲೆಯಿಂದ ಹೊಮ್ಮುತ್ತಿದ್ದ ದುರ್ವಾಸನೆಯಿಂದ ಕೂಡಿದ ವಿಷಪದಾರ್ಥವನ್ನು ಆಗಾಗ ಕಕ್ಕುತ್ತಿದ್ದರು. ಅವರೇನೂ ಅನ್ನ ಆಹಾರಗಳನ್ನು ಜೀರ್ಣಿಸಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಒಂದಷ್ಟು ನೀರು ಕುಡಿದು ಅದನ್ನು ದಕ್ಕಿಸಿಕೊಂಡರೆ ಸಾಕಾಗುತ್ತಿತ್ತು. ಇದೆಲ್ಲವನ್ನು ನೋಡಿದಾಗ ನಮ್ಮ ತಂದೆಯವರು ಮೃತ್ಯದೇವತೆಯೊಡನೆ ಸರಸವಾಡುತ್ತಿದ್ದಾರೆ ಎಂದು ನಮಗೆ ಅನಿಸುತ್ತಿತ್ತು.

ನನ್ನ ತಂದೆಯವರು ನನ್ನ ತಾಯಿಗೆ ಸಥಿಯಿಂದ ಅಂದರೆ ಮಮತೆ, ಆತ್ಮೀಯತೆಯಿಂದ ಅಧಿಕಾರಯುತವಾಗಿ 'ಶ್ರೀರಾಮ ಜಯರಾಮ ಜಯಜಯರಾಮ' ಎಂಬ ತಾರಕಮಂತ್ರವನ್ನು ಬೋಧಿಸಿದರು.[೧] ಅವರು ತರುಣರಾಗಿದ್ದಾಗಲೆ ಅತ್ಯಂತ ಕರುಣಾಜನಕವೆಂಬಂತೆ ಈ ಜೀವನಾರಣ್ಯವನ್ನು ದಾಟಿ ತೀರಿ ಹೊರಟುಹೋದರು. ಸಾವು ಅವರನ್ನು ನುಂಗಿ ಬಿಟ್ಟಿತು.

ಅವರು ಉಪದೇಶಿಸಿದ ರಾಮ ತಾರಕನಾಮವೇ ನಮ್ಮ ತಾಯಿಯವರನ್ನು ಜೀವನ ಪರ್ಯಂತ ಕೈಹಿಡಿದು ನಡೆಸಿತು. ಅದೆಷ್ಟೋ ಗಂಡಾಂತರಗಳು ಅವರ ಬದುಕಿನಲ್ಲಿ ನಡುನಡುವೆ ಬಂದಿದ್ದರೂ ಅವುಗಳನ್ನೆಲ್ಲ ಆ ರಾಮನಾಮವೇ ಪರಿಹರಿಸಿತು. ದುಃಖದಿಂದ ದಾಟಿಸುವ ಮಂತ್ರ ಅದಲ್ಲವೇ? ಏನಾದರೂ ಈ ದೇಹಧರ್ಮವೆಂಬುದು ನಮ್ಮನ್ನು ದುಃಖಕ್ಕೆ ಈಡುಮಾಡುವ ಸಂಗತಿಯಲ್ಲವೆ ? ತನ್ನ ತಾರುಣ್ಯದಲ್ಲಿಯೇ ಪತಿಯನ್ನು ಕಳೆದುಕೊಂಡ ನಮ್ಮ ತಾಯಿಯವರು ಅತೀವವಾದ ವಿರಹ ವೇದನೆಯನ್ನು ಅನುಭವಿಸಬೇಕಾಯಿತು. ಅದನ್ನು ಹಸಿವಿರಹವೆನ್ನುತ್ತೀರ, ಬಿಸಿ ವಿರಹವೆನ್ನುತ್ತೀರ, ಒಣವಿರಹವೆನ್ನುತ್ತೀರ ಯಾವ ಹೆಸರಿನಿಂದ ಕರೆದರೂ ಸರಿಯೆ. ಇವುಗಳನ್ನು, ಸಂಸಾರವನ್ನು ಆ ತಾರಕನಾಮವೇ ದಾಟಿಸಿ ಪಾರುಮಾಡಿತು.

ಹೆಣ್ಣು ಜೀವದ ಅಂತರಂಗದ ದುಃಖವನ್ನು ಯಾರು ತಾನೆ ಅಳೆಯಬಲ್ಲರು ! ಇನ್ನು ತನ್ನ ಜೀವದ ಕುಡಿಗಳತ್ತ ಅವಳು ಗಮನ ಕೊಡಬೇಕು, ಅವುಗಳ ಬಾಳಿಗೆ ಬೆಳಕು ತೋರಬೇಕು.

ಅದಕ್ಕೆಂದೇ ಅವಳು ತನ್ನ ಕಣ್ಣುಗಳನ್ನೇ ಬೆಳಕು ಕೊಡುವ ಹಣತೆಯಾಗಿ ಮಾಡಿದಳು. ತನ್ನ ಜೀವದ ಕುಡಿಗಳ ಬದುಕಿನಲ್ಲಿ ಅವಳು ಕುಗ್ಗುವಿಕೆ ಹಿಗ್ಗುವಿಕೆಗಳನ್ನು ಕಾಣುತ್ತಲೇ ಇದ್ದಳು. ಅದೆಲ್ಲವನ್ನೂ ನೋಡನೋಡುತ್ತಲೇ ತನ್ನ ಕಣ್ಣ ಹಣತೆಯನ್ನು ಅವುಗಳ ಮಾರ್ಗದಲ್ಲಿ ಎಚ್ಚರಿಂದ ಇರಿಸಿದಳು.

ನಮ್ಮ ತಂದೆಯವರ ಮರಣಾನಂತರ ತಾಯಿಯವರು ಬದುಕಿನ ಕಾಮವಾಸನೆಗಳನ್ನೆಲ್ಲ ಕಳೆದುಕೊಡು ನಿರ್ಮಲವಾದರು. ಅಂತಹ ನಿರ್ಮಲವಾದ ಬಾಳಿಗೆ ದುರ್ವಾಸನೆಯ ಪೀಡೆ ಕಾಡುವುದಾದರೂ ಹೇಗೆ ? ಅವರು ತಮ್ಮ ಹೃದಯವನ್ನೇ ವೃಂದಾವನವಾಗಿಸಿಕೊಂಡರು. ತಾವೊಂದು ತುಳಸಿಯ ಸಸಿಯಾಗಿ ತುಳಸಿಯ ಪತಿಯಾದ ಮಹಾವಿಷ್ಣುವನ್ನು ತಮ್ಮ ಹೃದಯಾಂತರಾಳದಲ್ಲಿ ತುಂಬಿಕೊಂಡರು. ಕ್ಷೀರಸಮುದ್ರ ಶಯನನಾದ ಆ ಮಹಾವಿಷ್ಣುವೇ ಅವರಿಗೆ ಪತಿಯಾದನು.

***ಅಡಿಟಿಪ್ಪಣಿ***

೧. 'ಕೃಷ್ಣದೀಕ್ಷಿತರ ಮದುವೆಗಾಗಿಯೇ ನಮ್ಮ ಅಜ್ಜಿ ನನ್ನ ತಾಯಿ ತಂದೆಗಳೊಡನೆ ಬಾಲಕನಾದ ನನ್ನನ್ನು ಕರೆದುಕೊಂಡು ನರಗುಂದಕ್ಕೆ ಮೊಟ್ಟ ಮೊದಲನೆಯ ಸಲ ೧೯೦೨-೧೯೦೩ರಲ್ಲಿ ಹೋದಳು. ಆಗ ಅಲ್ಲಿ ಗೋಂದಾವಲೇಕರ ಮಹಾರಾಜರು ಬಂದಿದ್ದರು. ಆಗ ನಮ್ಮ ತಂದೆ ತಮ್ಮ ತಂದೆಯ ಹೇಳಿಕೆಯಂತೆ ಮಹಾರಾಜರಿಂದ ಜಪದೀಕ್ಷೆಯ ಅನುಗ್ರಹಪಡೆದು, ನಮ್ಮ ತಾಯಿಗೆ ಗುರುಗಳಾಗಿ ಅತ್ಯಂತ ಮಮತೆಯಿಂದ ಜಪಕೊಟ್ಟರು' (ಆತ್ಮಕಥನದಿಂದ)

ಮಂತ್ರೋಪದೇಶವನ್ನು ಪತಿಯಿಂದಲೇ ಸತಿಯಾದವಳು ಪಡೆದುಕೊಳ್ಳಬೇಕೆಂಬ ನಿಯಮವಿದೆ. ಅದಕ್ಕಾಗಿ ಗೋಂದಾವಲೇಕರ ಮಹಾರಾಜರಿಂದ ಮೊದಲು ಬೇಂದ್ರೆಯವರ ತಂದೆಯವರು ಆ ರಾಮತಾರಕಮಂತ್ರವನ್ನು ಪಡೆದುಕೊಂಡು ಅದನ್ನು ಅವರ ಮಡದಿಗೆ ಬೋಧಿಸಿದರು.

ವಾಸನಾಕ್ಷಯ : ಆಧ್ಯಾತ್ಮಿಕ ಪ್ರಗತಿಗೆ ವಾಸನಾಕ್ಷಯ ಒಂದು ಮೆಟ್ಟಿಲು.

## ೪. ಭವದ ಬೆನ್ನಲ್ಲಿ ಅನುಭವ ಬಂತು

ನಾನು ಶಾರೀರಿಕವಾಗಿ ಹೆಚ್ಚು ಎತ್ತರದವನೇನೂ ಆಗಿರಲಿಲ್ಲ. ಹೇ ಸಖಿಯೆ ನೀನು ನನ್ನನ್ನು ಕಾಮನಕಟ್ಟೆಯ[೧] ವಾಮನಮೂರ್ತಿಯೆಂದೇ ತಿಳಿಯಬಹುದು. ವಾಮನಮೂರ್ತಿಯು ತ್ರಿವಿಕ್ರಮನಾಗಿ ಬೆಳೆದ ಲೀಲೆ ಅತ್ಯದ್ಭುತವಾದುದು. ಹಾಗೆಯೇ ನಾನೂ ಕೂಡ ಕಾವ್ಯಜಗತ್ತಿನ ತ್ರಿವಿಕ್ರಮನಾಗಿ ಬೆಳೆದೆ.[೨] ನನ್ನ ಕಾವ್ಯಕಲ್ಪನೆಗಳೆಲ್ಲ, ನಾನು ಕಂಡ ಕನಸುಗಳೆಲ್ಲ ಸಾಕಾರಗೊಂಡು ಕಾವ್ಯರೂಪದಲ್ಲಿ ಜಗತ್ತಿಗೆ ಸಮರ್ಪಿಸಲ್ಪಟ್ಟು ಅದನ್ನೆಲ್ಲ ಈಗ ನೆನೆಯುತ್ತಿದ್ದರೆ ಮನಸ್ಸಿಗೆ ಹರ್ಷವಾಗುತ್ತದೆ. ನೆನಪಿನ ಪೇಟೆಯಲ್ಲಿ ನನ್ನ ಜೀವನಾನುಭವದ ನೆನಪುಗಳಿಗೆ ವಿಶಿಷ್ಟವಾದ ಸ್ಥಾನವಿದೆ.

ಬದುಕಿನ ಮಾರ್ಗದಲ್ಲಿ ಮುನ್ನಡೆಯುತ್ತಿದ್ದಂತೆಲ್ಲ, ಆ ಬದುಕಿನ ಬೆನ್ನ ಹಿಂದೆಯೇ, ಸಮೃದ್ಧವಾದ ಅನುಭವಗಳು ನನ್ನ ಕೈವಶವಾದವು. ನಾನು ಆ ಅನುಭವಗಳನ್ನೆಲ್ಲ

ಅನುಭಾವವಾಗಿಸಿಕೊಂಡೆ. ಭಾವದ ತಳಿಯಿಂದಲೇ ಆ ಅನುಭವ ತಾನೇ ತಾನಾಗಿ ರೂಪುಗೊಂಡಿತು. ಲೋಕಾನುಭೂತಿಯು ಸ್ವಾನುಭೂತಿಯಾಯಿತು.[೨] ನಾನು ಲೋಕದಲ್ಲಿ ನಡೆಯುವಾಗ ನನ್ನೊಡನೆ ನಡೆದುಬಂದ ಅನುಭೂತಿಯೆಲ್ಲ ಹೃದಯದ ಆಳಕ್ಕೆ ಇಳಿದು ಸ್ವ ಅನುಭೂತಿಯಾಯಿತು. ಅವುಗಳನ್ನೆಲ್ಲ ನಾನು ಜೀರ್ಣಿಸಿಕೊಂಡು ನನ್ನದಾಗಿಸಿಕೊಂಡೆ. ಆಗಲೇ ಅದು ಕಾವ್ಯವಾಗಿ ತನ್ನಷ್ಟಕ್ಕೆ ತಾನೆ ರೂಪುತಾಳಿತು. ಹೆಚ್ಚೇನು ಹೇಳಲಿ ಅದು ಉದ್ಭವ ವಿಭೂತಿಯಾಗಿ ಅನಾಯಾಸವಾಗಿ ನನ್ನ ಒಡಲಿಂದ ಹುಟ್ಟಿಬಂದಿತು.[೩]

ಸಾಹಿತ್ಯಾಸಕ್ತಿ ಎಂಬುದು ನನಗೆ ಬಾಲ್ಯದಿಂದಲೇ ಮೈಗೂಡಿಕೊಂಡಿತ್ತು. ಬಹುಬಗೆಯ ಪುಸ್ತಕಗಳನ್ನು ನಾನು ಓದುತ್ತಿದ್ದೆ. ಅವುಗಳನ್ನು ಓದುವಾಗಲೆಲ್ಲ ಇದು ನಾನು ಕಂಡ ಸಂಗತಿಯೇ ಅಲ್ಲವೆ, ಇದು ನಾನು ಉಂಡ ಪದಾರ್ಥವೇ ಅಲ್ಲವೆ ಎಂಬಂತೆ ಅದು ನನ್ನಲ್ಲಿ ವಿಶಿಷ್ಟವಾದ ಅಭಿರುಚಿಯನ್ನು ಹುಟ್ಟಿಸುತ್ತಿತ್ತು. ನಾನು ಅಧ್ಯಯನ ಮಾಡಿದ ಗ್ರಂಥಗಳ ಸದ್ವಿಚಾರಗಳ ಸ್ಮರಣೆಯಲ್ಲಿಯೂ ನನಗೆ ವಿಶೇಷ ಆನಂದ ಉಂಟಾಗುತ್ತಿತ್ತು. ತೇಗಿನಲ್ಲಿಯೂ ತೃಪ್ತಿ ಇರುವಂತೆ ಸದ್ವಿಚಾರಗಳ ಸ್ಮರಣೆಯಲ್ಲಿಯೂ ನಾನು ಆನಂದವನ್ನು ಅನುಭವಿಸುತ್ತಿದ್ದೆ. ಹಾಗೆ ಉಂಡ ಸಾಹಿತ್ಯದ ಹಸಿವು ನನ್ನಲ್ಲಿ ಎಂದಿಗೂ ಆರಲಿಲ್ಲ. ಸದಾಕಾಲ ಅದು ಬಿಸಿಬಿಸಿಯಾಗಿಯೇ ಇತ್ತು.[೪]

ನನ್ನ ಜೀವನಾನುಭವಗಳಾಗಲಿ, ಸಾಹಿತ್ಯಾಧ್ಯಯನದಿಂದ ನಾನು ಪಡೆದುಕೊಂಡ ಅನುಭವಗಳಾಗಲಿ ನುಂಗಿ ನೀರುಕುಡಿದಂತೆ ಆಗಿದ್ದರೂ ಅವು ಇಂಗಿ ಹೋಗಿರಲಿಲ್ಲ. ನನ್ನ ಹೃದಯದ ಕೊಠಡಿಗಳಲ್ಲಿ, ಮಿದುಳಿನ ಮಾಡಗಳಲ್ಲಿ ಶಾಶ್ವತವಾಗಿ ಮನೆ ಮಾಡಿಕೊಂಡಿದ್ದವು. ಆ ಅನುಭವಗಳೆಲ್ಲವೂ ತುಂಬ ವೈವಿಧ್ಯಮಯವಾಗಿದ್ದವು. ಸಿಹಿ, ಕಾರ, ಹುಳಿ, ಒಗರು, ಕಹಿ, ಉಪ್ಪು ಎಂಬೀ ಷಡ್ರಸಗಳೆಲ್ಲವೂ ಆ ಅನುಭವದಲ್ಲಿ ಅಡಕವಾಗಿದ್ದವು. ಮಿದುಳಿನ ಮಾಡಗಳಲ್ಲಿ ಇದ್ದ ಆ ಅನುಭವಗಳು ನನ್ನ ದೇಹವನ್ನೆಲ್ಲ ವ್ಯಾಪಿಸಿ ನನ್ನ ದೇಹದ ಚರ್ಮವಾಗಿ, ನನ್ನ ಬದುಕಿನ ಮರ್ಮವಾಗಿ ಸರ್ವಸ್ವವನ್ನು ವ್ಯಾಪಿಸಿಬಿಟ್ಟವು.

ಕಪ್ಪತಗುಡ್ಡದ ಓರೆಕೋರೆಯ ಪೊಟರೆಗಳಲ್ಲಿ ಕಡ್ಲಿಗೊಂಚಕ ಪಕ್ಷಿಗಳು ಬೇಕಾದಷ್ಟು ಕಾಳುಕಡಿಗಳನ್ನು ಸಂಗ್ರಹಿಸಿ ಇಟ್ಟುಕೊಳ್ಳುತ್ತವೆ. ಅಂತೆಯೆ ನನ್ನ ಚಿತ್ತದ ಮಿದುಳಿನ ಓರೆಕೋರೆಯ ಪೊಟರೆಗಳಲ್ಲಿ ಬೇಕಾದಷ್ಟು ಅನುಭವಗಳು ಸಂಚಯನಗೊಂಡಿದ್ದವು. ಅವೆಲ್ಲವೂ ಫಲಕೊಡಲು ಸಮರ್ಥವಾಗಿದ್ದುವು. ಸಂಚಿತ ಕರ್ಮದ ಮೂಟೆಯಲ್ಲಿರುವ ವಾಸನೆಗಳೆಲ್ಲವೂ ಒಂದೂ ಉದರರದ ಹಾಗೆ ಪ್ರಾರಬ್ಧಕ್ಕೆ ಬಂದು ಫಲಕೊಡುವಂತೆ ಅವು ರೂಪುಗೊಂಡಿದ್ದವು. ಸಂಚಿತ ಕರ್ಮದ ಯಾವ ವಾಸನೆಯೂ ಫಲಕೊಡದೆ ಉದುರಿ ಹೋಗುವಂತಿಲ್ಲ. ಅದು ಬಾಳಿನ ವೈಚಿತ್ರ್ಯ. ಹಾಗೆಯೆ ನನ್ನ ಜೀವನಾನುಭವಗಳೆಲ್ಲ ಕಾವ್ಯವಾಗಿ ಹರಿದು ಲೋಕದ ಬಾಳನ್ನು ಸಮೃದ್ಧಗೊಳಿಸಿದುವು.[೫]

ಬಾಲ್ಯದಲ್ಲಿ ಕಳೆದ ದಿನಗಳು, ಅನುಭವಗಳು ನನ್ನನ್ನು ಭೂತದಂತೆ ಹಿಡಿದುಕೊಂಡಿವೆ. ನನಗೆ ಅವುಗಳಿಂದ ಬಿಡುಗಡೆ ಹೊಂದಲು ಆಗುತ್ತಿಲ್ಲ. ಸ್ಮಶಾನ ಕಟ್ಟೆ ಹಾಳು ಸುರಿಯುತ್ತ ಬಿಕೊ ಎನಿಸುತ್ತಿದ್ದರೂ ಅಲ್ಲಿ ಭೂತ ಸಂಚಾರದ ನಾದವಿರುತ್ತದೆ. ಹಾಗೆ ನನ್ನ ಬಾಲ್ಯದ ಕಳೆದ ದಿನಗಳು ತಮ್ಮ ನಾದಲೀಲೆಯನ್ನು ನನಗೆ ನೀಡುತ್ತಿವೆ. ಆ ಬಾಲ್ಯದ ಅನುಭವಗಳೇ ವಿಧಿಯಾಗಿ ನಿಂತು ನನ್ನ ನಾಳೆಗಳನ್ನು ರೂಪಿಸುತ್ತಿವೆ ; ನನಗೆ ನೀಡಬೇಕಾದ ಫಲಗಳನ್ನು ಸಲ್ಲಿಸಲು ಸಿದ್ಧವಾಗಿವೆ. ನಾಳೆ ಏನಾಗುತ್ತದೆ ಎಂಬುದನ್ನು ನಾವು ಇಂದೇ ಕಾಣಲಾರೆವು. ಆದ್ದರಿಂದಲೇ ಅದು ಅದೃಷ್ಟ. ಅದೃಷ್ಟವಾದ ನಾಳೆ ಎಂಬಲ್ಲಿ ಅವೆಲ್ಲವೂ ತಪ್ಪದೆ ತಮ್ಮ ಫಲಗಳನ್ನು ನನಗೆ ನೀಡಿದುವು.

*ಅಡಿಟಿಪ್ಪಣಿಗಳು*

೧. ಧಾರವಾಡದ ಹೃದಯಸ್ಥಾನದಂತಿದ್ದ ಕಾಮನಕಟ್ಟೆ ಬೇಂದ್ರೆಯವರ ಬಾಲ್ಯವನ್ನು ರೂಪಿಸಿದೆ.

೨. ಮಹಾವಿಷ್ಣುವು ತನ್ನ ಐದನೆಯ ಅವತಾರದಲ್ಲಿ ವಾಮನಮೂರ್ತಿಯಾಗಿ ತೋರಿಕೊಂಡನು. ತೇಜಸ್ವಿಯಾದ ಬ್ರಹ್ಮಚಾರಿಯರೂಪದಲ್ಲಿ ವಾಮನಮೂರ್ತಿಯಾಗಿ ಬಲಿಚಕ್ರವರ್ತಿಯ ಯಜ್ಞಶಾಲೆಯನ್ನು ಪ್ರವೇಶಿಸಿ ಮೂರು ಅಡಿ ನೆಲವನ್ನು ದಾನವಾಗಿ ಬೇಡಿದನು. ಹಾಗೆ ತಾನು ಬೇಡಿದ ನೆಲವನ್ನು ಅಳೆದುಕೊಳ್ಳುವಾಗ ಭೂಮ್ಯಾಕಾಶಗಳಿಗೆ ಒಂದಾಗಿ ಬೆಳೆದು ತನ್ನ ತ್ರಿವಿಕ್ರಮ ಲೀಲೆಯನ್ನು ಮೆರೆದನು.

೩. ಸಹ + ಅನುಭೂತಿ ಎಂಬಂತೆ ಇಲ್ಲಿ ಪದ ವಿಭಾಗ ಮಾಡಬೇಕು. ಸಹಚರ ಎಂಬ ಶಬ್ದದಂತೆ ಇಲ್ಲಿ ಸಹಾನುಭೂತಿ. ಜೀವನ ಪಥದಲ್ಲಿ ನಮ್ಮೊಡನೆ ಉದ್ದಕ್ಕೂ ನಡೆದು ಬರುವ ಅನುಭೂತಿಯೆ ಸಹಾನುಭೂತಿ. ಕವಿಯಾದವನು ಅವುಗಳನ್ನು ಅಲ್ಲಿಂದಲ್ಲಿಗೆ ಬಿಟ್ಟು ಬಿಡದೆ ಒಳಕ್ಕೆ ತೆಗೆದುಕೊಂಡು ಕಾವ್ಯಮಾರ್ಗಕ್ಕೆ ಒಗ್ಗುವಂತೆ ತನ್ನದೇ ಅನುಭೂತಿಯನ್ನಾಗಿ ಮಾಡಿಕೊಳ್ಳುತ್ತಾನೆ. ಆಗ ಲೋಕಾನುಭೂತಿಯು ಕಾವ್ಯಾನುಭೂತಿಯಾಗುತ್ತದೆ.

೪. That if poertry comes not as naturally as the leaves to a tree it had better not come at all. - John Keats.

೫. 'ಕಂಡ ಸಂಗತಿ ತಾನೆ ಉಂಡ ಪದಾರ್ಥವೊ' ಎಂಬ ಬೇಂದ್ರೆಯವರ ಈ ಮಾತು ಜನ್ನನ ಯಶೋಧರ ಚರಿತೆಯಲ್ಲಿ ಬರುವ 'ಉಂಡಮರ್ದು ಕಂಡ ವಿಚಾರಂ' (೧-೨೫) ಎಂಬ ಮಾತನ್ನು ನೆನಪಿಗೆ ತರುತ್ತದೆ.

೬. 'ಭೂತ' ಎಂದರೆ ಇಲ್ಲಿ ಭೂತಕಾಲ ಎಂದೂ ಅರ್ಥ. ನೆನಪುಗಳೆಲ್ಲವೂ ಭೂತಕಾಲಕ್ಕೆ ಸೇರಿದ್ದು ; ಅಂದರೆ ಅವು ಸಂಚಿತವಾಸನೆಗಳು. ಅವು ಪ್ರಾರಬ್ಧ ಅಂದರೆ ವರ್ತಮಾನಕ್ಕೆ ಬಂದು ಕವಿಗೆ ಫಲಕೊಡುತ್ತಿವೆ.

## ೫. ಹುಣಸಿಯ ಪಕ್ಕದ ಭಿಂಗರಿ

ಬಾಲ್ಯದ ಆಟಗಳಲ್ಲಿ ಬುಗುರಿಯಾಟವು ನನಗೆ ಅತ್ಯಂತ ಪ್ರಿಯವಾಗಿತ್ತು. ಬೆಳವಲನಾಡಿನ ಬುಗುರಿಗಳೆಂದರೆ ನನಗೆ ಪ್ರಾಣ. ಅದಕ್ಕೆ ತಕ್ಕ ಜಾಳಿಗೆ ಸುತ್ತಿ ನೆಲದ ಮೇಲೆ ಬೀಸಿ ಬಿಟ್ಟಾಗ ಅದು ಭೌಂಗುಡುತ್ತ ಸೊಗಸಾಗಿ ತಿರುಗುತ್ತಿತ್ತು. ಹಾಗೆ ತಿರುಗುವಾಗ ಆ ಬುಗುರಿಯು ನಿದ್ರೆ ಮಾಡುತ್ತಿದೆಯೆ ಅಥವಾ ಕನಸು ಕಾಣುತ್ತಿದ್ದೆಯೆ ಎಂಬುದನ್ನು, ಅದು ನನ್ನ ಕಣ್ಮುಂದೆ ಇದ್ದರೂ ನಿರ್ಧರಿಸಲು ಸಾಧ್ಯವಾಗುತ್ತಿರಲಿಲ್ಲ. ಬುಗುರಿ ವಿರಹಿತವಾದ ಜಾಳಿಗೆ ಮಾತ್ರ ನನ್ನ ಬೆರಳುಗಳ ನಡುನಡುವೆ ಸುಳುಸುಳನೆ ಸುಳಿದಾಡುತ್ತಿತ್ತು.

ಬುಗುರಿಯಾಡಿಸುವಲ್ಲಿ ನಾನು ತಲ್ಲೀನನಾಗಿ ಬಿಡುತ್ತಿದ್ದೆ. ತಿರುಗುವ ಬುಗುರಿಯ ಲಯದಲ್ಲಿ ನಾನು ಹೊಸ ಹೊಸ ಭಂಗಿಗಳನ್ನು ಕಾಣುತ್ತಿದ್ದೆ. ಬುಗುರಿಯು ತಿರುಗುತ್ತ ತಿರುಗುತ್ತ ಆ ತಿರುಗುವಿಕೆಯಲ್ಲಿಯೆ ತಲ್ಲೀನವಾಗಿದೆ ಎಂಬುದನ್ನು ಕಂಡುಕೊಳ್ಳುತ್ತಿದ್ದೆ. ಆಗ ನನಗೆ ಅನಿರ್ವಚನೀಯವಾದ ಆನಂದ ಉಂಟಾಗುತ್ತಿತ್ತು. ಪ್ರಳಯವೇ ಬರಲಿ, ಈ ಆನಂದಕ್ಕೆ ಭಯವಿಲ್ಲ, ಚ್ಯುತಿಯಿಲ್ಲ ಎಂಬ ಭಾವನೆ ನನ್ನ ಹೃದಯವನ್ನು ತುಂಬಿಕೊಳ್ಳುತ್ತಿತ್ತು. ದೀಪಾವಳಿ ಹಬ್ಬಗಳಲ್ಲಿ ಉಳ್ಳವರು ವಿಷ್ಣುಚಕ್ರವೇ ಮೊದಲಾದ ವಿವಿಧ ಮದ್ದಿನ ಸಲಕರಣೆಗಳನ್ನು ಸರಬರನೆ ತಿರುಗಿಸುತ್ತಿದ್ದರು. ಕೆಲ ಕೆಲವು ಸಲಕರಣೆಗಳು ಆಗಸಕ್ಕೆ ಏರಿ ಹೋಗುತ್ತಿದ್ದವು. ಆದರೆ ಅವುಗಳ ವೈಭವ ನನಗೆ ಬುಗುರಿಯಾಟದ ಮುಂದೆ ಸಪ್ಪೆಯಾಗಿಯೇ ಕಾಣುತ್ತಿತ್ತು. ಆ ಮದ್ದಿನ ಸಲಕರಣೆಗಳು ತೂರಾಟ ಏರಾಟಗಳು ನಿಯಮಬದ್ಧವಾಗಿದ್ದು ಯಾರೋ ಕಲಿಸಿದ ಕವಾಯತು ಎಂಬಂತೆ ಭಾಸವಾಗುತ್ತಿತ್ತು. ಅದರಲ್ಲಿ ಹೊಸತನಕ್ಕೆ ಎಡೆ ಇರಲಿಲ್ಲ, ಕನಸುಕಾಣಲು ಎಡೆ ಇರಲಿಲ್ಲ.[೧]

ನಾವು ಹುಣಸೆಯ ಬೀಜವನ್ನು ಸಂಗ್ರಹಿಸಿಕೊಂಡು ಅವುಗಳಲ್ಲಿ ಉತ್ತಮವಾಗಿರುವಂತಹವನ್ನು ಒಡೆದು ದಳಗಳಾಗಿ ಮಾಡಿಕೊಳ್ಳುತ್ತಿದ್ದೆವು. ಆ ದಳಗಳಿಗೆ ಗೊಬ್ಬಳಿಮುಳ್ಳು, ನೆಗ್ಗಿಲು ಮುಳ್ಳುಗಳನ್ನು ಭೇದಿಸಿ ಹೊರಬರುವಂತೆ ಚುಚ್ಚಿ ಭಿಂಗರಿ[೨]ಗಳಾಗಿಸುತ್ತಿದ್ದೆವು. ತರುವಾಯ ಹೆಬ್ಬರಳು ಮತ್ತು ತೋರುಬೆರಳುಗಳಿಂದ ಅವುಗಳನ್ನು ತಿರುಗಿಸಿ ನೆಲದ ಮೇಲೆ ಬಿಡುತ್ತಿದ್ದೆವು. ಅವು ತಿರುಗುವುದನ್ನು ನೋಡಿ ಸಂತೋಷ ಪಡುತ್ತಿದ್ದೆವು. ಆದರೆ ಬೆಳವಲದ ಬುಗುರಿಗಳು[೩] ನಮ್ಮ ಕೈಗೆ ಸಿಕ್ಕಿದ ಮೇಲೆ ಹುಣಸಿಯ ಪಕ್ಕ[೪]ದ ಭಿಂಗರಿಗಿಂತಲೂ ಬಣ್ಣ ಬಣ್ಣದ ಈ ಬುಗುರಿಗಳು ನಮಗೆ ತುಂಬಾ ಆಕರ್ಷಣೆಯನ್ನೊಡ್ಡಿದವು. ಈ ಬಗುರಿಗಳಾದರೊ ದುಂಡಾದ ಮೈ, ತಲೆಯ ಭಾಗ ಎಷ್ಟೋ ಅಷ್ಟೆ. ಕೈಯಿಲ್ಲ, ಕಂಠವಿಲ್ಲ, ಮೊಳೆಯ ರೂಪದಲ್ಲಿ ಇವುಗಳಿಗೆ ಒಂಟಿ ಕಾಲು. ಅವು ತಿರುತಿರುಗಿ ಇನ್ನೇನು ನೆಲಕ್ಕೆ ಉರುಳುತ್ತಿವೆ ಎನ್ನುವಾಗ ಒನೆದಾಡುತ್ತ ತಮ್ಮ ಸೊಂಟದ ಬಿಂಕವನ್ನು ತೋರಿಸುತ್ತಿದ್ದ ಪರಿ ಎಷ್ಟು ವರ್ಣಿಸಿದರೂ ಕಡಿಮೆಯೆ.

ನಾನು ಬಾಲ್ಯದಲ್ಲಿ ಪೊಳ್ಳಾದ ರವದಿ[೫]ಗಳನ್ನೆ ಕೊಳಲಾಗಿ ಮಾಡಿಕೊಂಡು ಊದುತ್ತಿದ್ದೆ. ಶೂನ್ಯದ ಪೊಳ್ಳಿನ ಮೂಲಕ ಸುಳಿದು ಬರುತ್ತಿದ್ದ ಗಾಳಿ ಹೊಮ್ಮಿಸುತ್ತಿದ್ದ ನಾದ ನನ್ನ ಕಿವಿಗೆ ಯಾವುದೋ ಸವಿಯಾದ ಮಂತ್ರವನ್ನು ಓದಿದಂತೆ ಆಗುತ್ತಿತ್ತು. ಅದು ವೇದಮಂತ್ರವೊ ಎಂಬಂತೆ ನಾನು ಪುಳಕಗೊಳ್ಳುತ್ತಿದ್ದೆ. ಆ ನಾದದಲ್ಲಿ ಅಂತಹ ಸಂವೇದನೆ ಇರುತ್ತಿತ್ತು. ಜಡವೂ ಚೈತನ್ಯವಾಗಿ ರವದಿಗೂ ಭವದೀಕ್ಷೆ[೬] ಲಭ್ಯವಾಗುತ್ತಿತ್ತು. ಬುಗುರಿಯು ಕನಸುಕಾಣುತ್ತಿದ್ದಂತೆ ಈ ರವದಿಯೂ ಕನಸು ಕಾಣುತ್ತಿದೆ ಎಂದು ತಿಳಿದುಕೊಳ್ಳುತ್ತಿದ್ದೆ.

ರವಯಿದಿಂದ ಹೊಮ್ಮುತ್ತಿದ್ದ ವೇದ ಸಂಗೀತವು ಇಡೀ ಬ್ರಹ್ಮಾಂಡವನ್ನೇ, ಗ್ರಹಮಾಲೆಗಳನ್ನೇ ವ್ಯಾಪಿಸಿಕೊಂಡ ಸಂಗೀತ ಎಂಬ ಇಂಗಿತವನ್ನು ನಾನು ಅರಿಯುತ್ತಿದ್ದೆ.[೭] ಆ ಸಂಗೀತದ ಬಿನ್ನಾಣವು ಅಭಂಗಿತವಾದುದು, ಸಾರೋದ್ಧಾರವಾದುದು, ಕಡಿವಡೆಯದಿರುವಂತದು ಎಂದೆಲ್ಲಾ ತೋರುತ್ತಿತ್ತು. ಬುಗುರಿಯಾಟದ ಜೊತೆಗೆ, ರವದಿಯೂದುವ ಆಟದ ಜೊತೆಗೆ ನನಗೆ ಕಾವ್ಯಪಾಠದ ಬೋಧನೆಯೂ ಆಗುತ್ತಿತ್ತು. ಅಕ್ಷರ ರೂಪಕ್ಕೆ ತರುವುದು ಮಾತ್ರವೇ ಬಾಕಿಯಿತ್ತು. ಕಾವ್ಯವು ತನ್ನ ಅಭಿವ್ಯಕ್ತಿಗಾಗಿ ಶಬ್ದಮಾಧ್ಯಮವನ್ನು ಆಗಲೇ ಕಂಡುಕೊಳ್ಳತೊಡಗಿತ್ತು.

ರವದಿಯನ್ನು ಸಂಗೀತವನ್ನು ಹೊಮ್ಮಿಸುವ ವಾದ್ಯವಾಗಿ ರೂಪಿಸಿಕೊಳ್ಳುತ್ತಿದ್ದಂತೆಯೆ ಮೊಳಕೆ ಒಡೆದ ಮಾವಿನ ಓಟೆಗಳಿಂದಲೂ ಪೀಪಿಗಳನ್ನು ಮಾಡಿಕೊಳ್ಳುತ್ತಿದ್ದೆವು. ಮಾವಿನ ಓಟೆಗಳು ತಿಪ್ಪೆಯಲ್ಲಿ ಬಿದ್ದಾಗ ಅವು ಮೊಳಕೆಯೊಡೆಯುತ್ತಿದ್ದವು. ಆಗ ನಾವು ಅವುಗಳನ್ನೆತ್ತಿಕೊಂಡು ಅವುಗಳ ಮೇಲಿನ ಗೊರಟೆಯನ್ನು ಕಿತ್ತೆಸೆದು ಒಳಗಿನ ಮೊಳಕೆಯೊಡೆದ ಬೀಜವನ್ನು ತೆಗೆದುಕೊಳ್ಳುತ್ತಿದ್ದೆವು. ಮೊಳಕೆಯೊಡೆದ ತುದಿಯನ್ನು ಬಿಟ್ಟು ಇನ್ನೊಂದು ತುದಿಯ ಮೃದುಭಾಗವನ್ನು ಸ್ವಲ್ಪ ಓರೆಯಾಗಿ ಕಲ್ಲಿಗೆ ತಿಕ್ಕುತ್ತಿದ್ದೆವು. ಹಾಗೆ ತಿಕ್ಕಿದಾಗ ಆ ಬೀಜವು ತುಟಿಗಳನ್ನು ತೆರೆದುಕೊಂಡಂತೆ ಬಿರುಕುಬಿಡುತ್ತಿದ್ದವು. ತುಟಿತೆರೆದುಕೊಂಡ ಭಾಗವನ್ನು ನಾವು ಬಾಯಿಗಿಟ್ಟುಕೊಂಡು ಪೀಪಿಯಂತೆ ಊದಿ ವಿಲಕ್ಷಣವಾದ ನಾದವನ್ನು ಹೊಮ್ಮಿಸಿ ಆನಂದ ರಸದಲ್ಲಿ ಮುಳುಗುತ್ತಿದ್ದೆವು. ನಮ್ಮ ಉಸಿರಿಗೆ ನಾದದ ಸಾಕಾರರೂಪವನ್ನು ಕೊಡುತ್ತಿದ್ದೆವು.

***ಅಡಿಟಿಪ್ಪಣಿಗಳು***

೧. ಕಲಿತ ಕವಾಯತಿನಲ್ಲಿ ಶಿಸ್ತಿರಬಹುದು ಆದರೆ ಸ್ವಯಂಸ್ಫೂರ್ತತೆ (Spontaneity) ಇಲ್ಲ.

೨. ಭಿಂಗರಿ = ಒಡೆದ ಮಣ್ಣಿನ ಕೊಡ ಅಥವಾ ಮಡಕೆಯ ಅಂಚಿಗೆ ಒಂದು ತೂತು ಹಾಕಿ ಅದರೊಳಕ್ಕೆ ಒಂದು ಗಣಿಕೆ (ಗಟ್ಟಿಯಾದ ಕಡ್ಡಿ) ಸಿಕ್ಕಿಸಿ ಮೇಲ್ಭಾಗವನ್ನು ಎರಡು ಅಂಗೈಗಳ ಮಧ್ಯೆ ಸಿಕ್ಕಿಸಿಕೊಂಡು ತಿರುಗಿಸಿ ಬಿಟ್ಟರೆ ಅದರ ತಿರುಗಣೆಯಲ್ಲಿಯೇ ಒಂದು ಸೊಗಸಿದೆ. ಅಂತಹ ಆಟಿಕೆ ಭಿಂಗರಿ. ಅದೇ ತರಹದ್ದು ಹುಣಸಿಯ ಪಕ್ಕದ ಭಿಂಗರಿ.

೩. ಬೆಳವಲದ ಬುಗುರಿಗಳು : ಅ) ಹರಿಹರ - ಹುಬ್ಬಳ್ಳಿ ಪ್ರಾಂತದ ನಾಡಿನಲ್ಲಿ ಮಕ್ಕಳಿಗೆ ಆಕರ್ಷಣೀಯವಾಗುವಂತೆ ಮರದಿಂದ ತಯಾರಿಸಿ, ಬಣ್ಣ ಬಳಿದು ಮಾರಾಟ ಮಾಡುವ ಬುಗುರಿಗಳು. ಆ) ಬೆಳವಲಕಾಯಿಯಿಂದ ಮಾಡಿದ ಬುಗುರಿಯನ್ನೂ ಆ ಕಾಲದಲ್ಲಿ ಆಡುತ್ತಿದ್ದರು. ಬೆಳವಲಕಾಯಿಯೆಂದರೆ ಬೇಲದ ಕಾಯಿ ಎಂದರ್ಥ. ಅದಕ್ಕೆ ಮಧ್ಯದಲ್ಲಿ ರಂಧ್ರಕೊರೆದು ಅಲ್ಲಿಂದ ಬುಡದ ವರೆಗೂ ಬರುವಂತೆ ಸೂಕ್ತವಾದ, ಗಟ್ಟಿಯಾದ ಬಿದಿರ ಕಡ್ಡಿಯನ್ನು ಪೋಣಿಸಬೇಕು. ತಲೆಯ ಭಾಗದಲ್ಲಿ ಎದ್ದು ಕೊಂಡಿರುವ ಬಿದಿರು ಕಡ್ಡಿಯ ಭಾಗಕ್ಕೆ ದಾರವನ್ನು ಸುತ್ತಿ ವಿಶಿಷ್ಟವಾದ ಬಗೆಯಲ್ಲಿ ಎಳೆದು ಬಿಟ್ಟರೆ ಅದು ತನ್ನಿಂದ ತಾನೆ ತಿರುಗುತ್ತದೆ.

೪. ಹುಣಸಿಯ ಪಕ್ಕ = ಹುಣಸೆಯ ಬೀಜ

೫. ಪೊಳ್ಳಾದ ರವದಿ = ಜೋಳದ ದಂಟು

೬. 'ಭೌತ ದ್ರವ್ಯವೂ ಪರಬ್ರಹ್ಮ ಸ್ವರೂಪವನ್ನು ಪ್ರಕಟಿಸುವುದು' - ಶ್ರೀ ಅರವಿಂದರು

೭. 'ಗ್ರಹಮಾನ ಸಂಗೀತ' (music of the spheres) ವು ಸೂಕ್ಷ್ಮ ಸಂವೇದನೆ ಇದ್ದವರಿಗೆ ಮಾತ್ರವೇ ಕೇಳಿಸುತ್ತದೆ ಎಂಬ ಭಾವನೆ ಇದೆ. ನಿಶ್ಶಬ್ದ ಪ್ರಕೃತಿಯಲ್ಲಿ ಮೌನಸಂಗೀತವಿರುತ್ತದೆ. ಅಂತಹ ಗ್ರಹಮಾಲ ಸಂಗೀತದ ಇಂಗಿತವು ಈ ಬುಗುರಿಯಲ್ಲಿದೆ.

## ೬. ಏರು ಏರೆಲೆ ಪಟವೆ

ನನ್ನ ಬಾಲ್ಯಕಾಲದಲ್ಲಿ, ನನ್ನ ಪರಿಸರದಲ್ಲಿ ಬಾಳಿ ಬದುಕುತ್ತಿದ್ದ ಜನರು ಬಹಳ ದೃಢಮನಸ್ಕರಾಗಿದ್ದರು. ಕಷ್ಟಗಳ ಬಿರುಗಾಳಿಗೆ ಬೆನ್ನುಕೊಟ್ಟು, ತಾಳಿದವನು ಬಾಳಿಯಾನು ಎಂಬಂತೆ, ದೀರ್ಘಕಾಲ ಶಾಂತಜೀವನವನ್ನು ನಡೆಸುತ್ತಿದ್ದರು. ಕಷ್ಟಗಳಿಗೆ ಜಗ್ಗಬಾರದು ಎಂಬ ಛಲದ ನಡುವೆಯೆ ಅವರ ಬದುಕು ಅರಳಿಕೊಳ್ಳುತ್ತಿತ್ತು. ಹೀಗೆ ಬಹು ವಿಧದ ಕಷ್ಟಗಳನ್ನು ತಾಳಿಕೊಂಡು ಬದುಕುತ್ತಿದ್ದರೂ ಅವರು ಬದುಕಿನಲ್ಲಿ ಉನ್ನತವಾದುದನ್ನು ಸಾಧಿಸಬೇಕೆಂಬ ಕಾಣ್ಕೆಗಳಲ್ಲಿ ಮಾತ್ರ ಹಿಂದೆ ಬಿದ್ದಿರಲಿಲ್ಲ. ನೆಲದ ಮೇಲೆ ಕಾಲೂರಿನಿಂತು ತಮ್ಮ ಚಿತ್ತವೆಂಬ ಗಾಳಿಪಟವನ್ನು ಬಾನಿನಲ್ಲಿ ಏರಲು, ಹಾರಲು ಬಿಡುತ್ತಿದ್ದರು.

ಗಾಳಿಪಟವೆಂದರೆ ಬಿದುರುಕಡ್ಡಿಯಿಂದ ಬಿಲ್ಲುಮಾಡಿ ಆ ಬಿಲ್ಲಿಗೆ ಕಾಗದವನ್ನು ಅಂಟಿಸಿ ಒಂದು ಬಾಲಂಗೋಚಿಯನ್ನು ಜೋಡಿಸುತ್ತಿದ್ದೆವು. ನಮ್ಮ ಶಕ್ತಿಗೆ ಅನುಸಾರವಾಗಿ ದಾರದ ಉಂಡೆಯನ್ನು ಹೊಂಚಿಕೊಂಡು ಪಟಗಳಿಗೆ ಕಟ್ಟಿ ಏರಿಸುತ್ತಿದ್ದೆವು. ದಾರದ ಉಂಡೆಗಳು ಮಣ್ಣಿನಲ್ಲಿ ಉರುಳುರುಳಿ ದಾರವನ್ನು ಬಿಟ್ಟು ಕೊಡುತ್ತಿದ್ದಂತೆ ಪಟವು ಮೇಲುಮೇಲಕ್ಕೆ ಮುಗಿಲ ವರೆಗೆ ಏರುತ್ತಿತ್ತು. ಆ ಪಟಗಳಂತೂ ಸಂಗೀತವನ್ನೇ ಆಗಸದಲ್ಲಿ ಹೊಮ್ಮಿಸುತ್ತಿದ್ದುವು. ಆಗ ನಮಗೆ ಬಿದಿರಿನ ಆ ಬಿಲ್ಲುಗಳೆ ಸಂಗೀತವನ್ನು[೧] ಹಾಡುತ್ತಿವೆ ಎಂಬಂತೆ ಭಾಸವಾಗುತ್ತಿತ್ತು. ಆ ಬಾಲವಾದರೊ ಸರ್ಪದಂತೆ ನಲಿದಾಡುತ್ತ ನೇತ್ರಾನಂದವನ್ನುಂಟು ಮಾಡುತ್ತಿತ್ತು. ಆ ದೃಶ್ಯವನ್ನು ನೋಡುತ್ತಿದ್ದರೆ, ಆ ಸಂಗೀತವನ್ನು ಕೇಳುತ್ತಿದ್ದರೆ, ನಮ್ಮ ಮನಸ್ಸಿನಲ್ಲಿ ವಿವಿಧ ಭಾವಗಳ ಮೆರುಗು ಮಿಂಚು ಮೂಡುತ್ತಿತ್ತು.

ಪಶ್ಚಿಮದಿಂದ ಬೀಸುವ ಗಾಳಿಯಿಂದ ನಮ್ಮ ಗಾಳಿಪಟವು ಪೂರ್ವಕ್ಕೆ ಏರಿ ಅಲ್ಲಿಂದಲೇ ತನಗೆ ಎದುರಾಗಿರುವ ಪಶ್ಚಿಮದ ಸೂರ್ಯನ ಅಸ್ತಮಾನದ ಸೊಬಗನ್ನು ನೋಡುತ್ತೇನೆಂಬಂತೆ ಹಾರಾಡುತ್ತಿತ್ತು. ಅಷ್ಟು ಮಾತ್ರವಲ್ಲ ; ನಾನು ಅಂತರಿಕ್ಷದಲ್ಲಿದ್ದರೂ ನನ್ನ ಹೃದಯದಲ್ಲಿ ನೆಲದ ಅನುರಾಗವಿದೆ, ತ್ಯಾಗದ ಭಾವಗಳಿವೆ, ಅವುಗಳನ್ನೇ ನಾನು ಗೀತೆಗಳನ್ನಾಗಿಸಿ ಹಾಡುತ್ತೇನೆ ಎಂದು ಆ ಗಾಳಿಪಟವು ನಮಗೆ ಹೇಳುವಂತೆ ಭಾಸವಾಗುತ್ತಿತ್ತು.

ಆ ಗಾಳಿಪಟದ ಸಂಗೀತದಲ್ಲಿ ಎಷ್ಟು ತೋಡಿಕೊಂಡರೂ ತೀರದ ಭಾವಗಳು ತುಂಬಿ ತುಳುಕುತ್ತಿದ್ದವು. ಎಲ್ಲ ಭಾವಗಳಿಗೂ ಮೀರಿದ ಓಂಕಾರವನ್ನೆ ಹೊಮ್ಮಿಸುತ್ತೇನೆ ಎಂಬ ಛಲದಲ್ಲಿ ಆ ಗಾಳಿಪಟವಿದೆಯೊ ಎಂಬಂತೆ ನನಗೆ ತೋರುತ್ತಿತ್ತು. ಸೊಗಸುಗಾರಿಕೆ ಎಂಬುದು, ಕನಸುಗಾರಿಕೆ ಎಂಬುದು ಒಂದೆರಡು ಬೊಗಸೆಗಳಷ್ಟು ವೊಗೆದು ಸುರಿದರೆ ತೀರಿಬಿಡುವಂತದೇನು? ಎಂಬ ಹಿನ್ನೆಲೆಯಲ್ಲಿ ಆ ಗಾಳಿಪಟವು ವಿಸ್ತಾರವಾದ ಆಕಾಶವನ್ನೇ ತನ್ನ ಬಿದಿರು ಕಡ್ಡಿಯ ಕೋಡಿನಿಂದ ತಿವಿತಿವಿದು ಹಿಮ್ಮೆಟ್ಟಿಸುವಂತೆ ಭಾಸವಾಗುತ್ತಿತ್ತು.

ಆಗಸದಲ್ಲಿ ಹಾರಾಡುತ್ತಿದ್ದ ಗಾಳಿಪಟವು ತನ್ನ ಸಂಗೀತದ ಗುಂಗಿಗೆ ತಾನೇ ತಲೆದೂಗುತ್ತಿತ್ತು, ತಾನೆ ತಲೆ ಬಾಗುತ್ತಿತ್ತು, ತಾನೇ ತಲೆಯೆತ್ತಿ ಮೆರೆಯುತ್ತ ಬಹು ಬಗೆಯ ಅಂದಚೆಂದಗಳನ್ನು ಪ್ರದರ್ಶಿಸುತ್ತಿತ್ತು. ಮಾನವನ ಬದುಕು ಸಾಂತವಾದುದು ಅಂದರೆ ಅಂತ್ಯವನ್ನುಳ್ಳದ್ದು. ಬದುಕಿನ ಜಂಜಡಗಳಿಂದ ಮೇಲೇರಿ, ಶರೀರೇಂದ್ರಿಯ ಮನಃ ಪ್ರಾಣಗಳ ಸಂಘಾತದಿಂದ ಮೇಲೇರಿ ಅನಂತವಾದುದನ್ನು ಕಾಣಬೇಕು ಎಂಬುದೇ ಬದುಕಿನ ಯೋಗಸೂತ್ರ ; ಬದುಕಿನ ಮೂಲ ಮಂತ್ರ. ಇದೇ ಸಾಂತಕ್ಕೂ ಅನಂತಕ್ಕೂ ಇರುವ ಅನುಬಂಧ. ಇಂತಹ ದಿವ್ಯಾನುಬಂಧದ ಕಲ್ಪನೆಯನ್ನು ಆ ಗಾಳಿಪಟದ ಹಾರಾಟವು ಮೂಡಿಸುವಂತಿತ್ತು.

ಈ ಗಾಳಿಪಟವು ಸೂತ್ರಕ್ಕೆ, ದಾರಕ್ಕೆ, ಅದನ್ನು ಆಡಿಸುವ ಕೈಗೆ ಬದ್ಧವಾಗಿದೆ. ಈ ಭವದ ಸಂಬಂಧದಲ್ಲಿಯೇ ಇದೆ. ಆದರೂ ಆಗಸದಲ್ಲಿ ಹಾರುವ ಅದರ ಸ್ವಚ್ಛಂದ ವಿಲಾಸವನ್ನು ಕಂಡಾಗ ಅದು ಭವ್ಯಾತ್ಮದಂತೆ ಭವಸಾಗರದಿಂದ ಪಾರಾಗಿದೆಯೊ ಎಂಬಂತೆ ತೋರುತ್ತದೆ. ಅದರ ಸ್ವಚ್ಛಂದ ಲಾಲಿತ್ಯವು ಅಂತಹ ಭಾವನೆಗಳನ್ನು ಮೂಡಿಸುತ್ತದೆ. ನನಗೂ ಆ ಗಾಳಿಪಟದಂತೆಯೆ ಈ ಲೋಕದಲ್ಲಿರುತ್ತಲೆ ಜೀವನ್ಮುಕ್ತನಾಗಬೇಕು ಎಂಬ ಆಕಾಂಕ್ಷೆ ಬಲಗೊಳ್ಳುತ್ತಿದೆ. ಅದಕ್ಕೆಂದೇ ನಾನು 'ಏರು ಏರೆಲೆ ಪಟವೆ ನನಗೂ ನಿನಗೂ ಉಂಟು / ಏಕಸೂತ್ರದ ಬಂಧ ಸಂಬಂಧವು' ಎಂದು ಹಾರೈಸುತ್ತಿದ್ದೇನೆ.

***ಅಡಿ ಟಿಪ್ಪಣಿಗಳು***

೧. 'ಬಿಲ್ಲು ಹಾಡುತ್ತಿತ್ತು' ಎಂಬ ಬೇಂದ್ರೆಯವರ ಕಲ್ಪನೆಯ ಹಿನ್ನಲೆಯಲ್ಲಿ ಪುರಾತನಕಾಲದ ವೀರರು ಬಳಸುತ್ತಿದ್ದ ಬಿಲ್ಲಿನ ಚಿತ್ರವಿದೆ. ಆ ವೀರರು ತಮ್ಮ ಬಿಲ್ಲನ್ನು ಹೆದೆ ಏರಿಸಿ ಅದನ್ನೊಮ್ಮೆ ಝೇ ವೊಡೆಯುತ್ತಿದ್ದರು. ಆಗ ಹೊಮ್ಮುತ್ತಿದ್ದ ನಾದ ಅನುಪಮವಾಗಿರುತ್ತಿತ್ತು.

೨. 'ಗಿಡಗಂಟಿಯ ಕೊರಳೊಳಗಿಂದ ಹಕ್ಕಿಗಳ ಹಾಡು / ಹೊರಟಿತು ಹಕ್ಕಿಗಳ ಹಾಡು', ಯಾವ ರೀತಿ ಅನಾದೃಶ್ಯವಾಗಿ ವರ್ಣಿತವಾಗಿದೆಯೊ ಹಾಗೆಯೇ 'ಬಿಲ್ಲು ಹಾಡುತ್ತಿತ್ತು' ಎಂಬ ನುಡಿಯಲ್ಲಿ ಅನುಪಮವಾದ ಕಾವ್ಯಸೌಂದರ್ಯವಿದೆ.

೭. ಹುರುಡು ಹುಮ್ಮಸವಿತ್ತು ಏಣಾಗಿಯೆ

ನಮ್ಮ ಬಾಲ್ಯದ ಆಟಗಳಲ್ಲಿ ಬುಗುರಿಯಾಟ ಗಾಳಿಪಟದಾಟಗಳಂತೆಯೇ ಗೋಲಿಯಾಟವೂ ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು. ಗೋಲಿಯಾಟವೆಂದ ಮೇಲೆ ಪರಸ್ಪರ ಗೋಲಿಗಳನ್ನು ಹೊಡೆದು ತಾಕಿಸಬೇಕಾಗಿತ್ತು. ಅಲ್ಲಿಯೂ ಸೋಲು ಗೆಲುವುಗಳಿದ್ದುವು. ಆ ಸೋಲು ಗೆಲುವುಗಳ ಫಲವಾಗಿ ತೇಕುವ, ನೂಕುವ, ಡೀಕುವ[೧] ಶ್ರಮಗಳಿಗೆ ಗುರಿಯಾಗಬೇಕಾಗುತ್ತಿತ್ತು. ಗೋಲಿಗಳ ನಡುವಣ ದೂರವನ್ನು ನಾವು ನಾವೇ ಅಳೆಯಬೇಕಾಗುತ್ತಿತ್ತು. ನಾವೇ ಗೇಣುಹಾಕಿ[೨] ಅಳತೆ ಮಾಡುವವರೆಂದ ಮೇಲೆ ಅದರಲ್ಲಿ ಹೆಚ್ಚು ಕಡಿಮೆಯಾಗುವುದು ಹೇಗೆ ಸಾಧ್ಯ? ಈ ಗೋಲಿ ಗುಂಡುಗಳ ಆಟದಲ್ಲಿ ಗುರಿಗಾರಿಕೆಗೆ ತುಂಬಾ ಪ್ರಾಶಸ್ತ್ಯವಿತ್ತು. ಹಾಗೆ ಗುರಿಯಿಟ್ಟು ಹೊಡೆಯುವುದನ್ನು ಬಾಲ್ಯದಲ್ಲಿಯೇ ಪರಿಷ್ಕಾರವಾಗಿ ಕಲಿತುದೇ ಕಾರಣವಾಗಿ ಮುಂದೆ ಯಾವುದೇ ಸಮಸ್ಯೆಯನ್ನಾಗಲಿ, ಯಾವುದೇ ರಹಸ್ಯವನ್ನಾಗಲಿ ಭೇದಿಸಿ ಒಳನುಗ್ಗುವ ಅದ್ವಿತೀಯವಾದ ಪಾಠವನ್ನು ನಿರಾಯಾಸವಾಗಿ ಕಲಿತುದಾಯಿತು.

ಬಾಲ್ಯದ ಕ್ರೀಡೆಗಳಿಂದಾಗಿ ನಮ್ಮ ಅನುಭವ ವಿಸ್ತಾರಗೊಳ್ಳುತ್ತಿತ್ತು. ಜಾಣ್ಮೆ ತಾನೇತಾನಾಗಿ ಮೈಗೂಡಿ ಬರುತ್ತಿತ್ತು. ಆಟಗಳಲ್ಲಿ ಕಣ್ಣುಗಳನ್ನು, ಕೈಗಳನ್ನು, ದೇಹವನ್ನು ತೀವ್ರವಾಗಿ ತೊಡಗಿಸಬೇಕಾಗುತ್ತಿತ್ತು. ಹಾಗೆ ತೊಡಗಿಸುತ್ತಿದ್ದುದರ ಫಲವಾಗಿ ಜಾಣ್ಮೆ ಎಂಬುದು ನನಗೆ ಕಣ್ಣೂಡಿ, ಕೈಗೂಡಿ, ಮೈಗೂಡಿ ಬರುತ್ತಿತ್ತು. ಆಟದಲ್ಲಿ ಹೊಡೆತಗಳು ಬೀಳುತ್ತಿದ್ದವು ; ಸೋಲಿನ ಕಹಿಯನ್ನು ಉಣ್ಣುತ್ತಿದ್ದೆವು ; ಇಷ್ಟೆಲ್ಲ ಆದರೂ ನಾವು ನಿರುತ್ಸಾಹಗೊಳ್ಳುತ್ತಿರಲಿಲ್ಲ. ಮತ್ತೆ ಆಡಬೇಕು, ಗೆಲ್ಲಬೇಕು ಎಂಬ ಸ್ಪರ್ಧೆ ಉತ್ಸಾಹಗಳು ಹರಿತವಾಗಿಯೇ ಇರುತ್ತಿದ್ದುವು.

ನಾವು ಗೋಲಿಯಾಟವಲ್ಲದೆ ಸರಿಮನೆ, ಸರಿಬಡಿಗೆ ಎಂಬ ಆಟಗಳನ್ನು ಆಡುತ್ತಿದ್ದೆವು. ಎಲ್ಲ ಆಟಗಳೂ ನನಗೆ ಸರಿ ಎನಿಸುತ್ತಿದ್ದವು. ಆಯಾ ಆಟಗಳಿಗೆ ತಕ್ಕ ನಿಯಮಗಳೂ ಇರುತ್ತಿದ್ದವು. ಹಾಗಿದ್ದರೂ ನಾನೇ ಸರಿ, ನಿನ್ನದು ಸರಿ ಇಲ್ಲ ಎಂಬ ವಾಗ್ವಾದ ಮಾತ್ರ ತಪ್ಪುತ್ತಿರಲಿಲ್ಲ. ಕುಂಟೆಬಿಲ್ಲೆ[೩]ಯನ್ನು ಚೆಲ್ಲಾಡಿ ಮನೆಯಿಂದ ಮನೆಗೆ ಕುಂಟುತ್ತ ಆಡುವ ಆಟವು ನನಗೆ ಪ್ರಿಯವಾಗಿತ್ತು. 'ಆನೆ ಕಿರ್ರಿಗೆ ಬೆನ್ನ ಹಾರಾಟವು'[೪] ಕೂಡ ಆಗ ನಡೆಯುತ್ತಿತ್ತು.

ಎಲ್ಲಿ ಬೇಕಾದರೂ ಆಡಬಹುದಾದ ಚಾವಂಗ[೫], ಹುಲಿಹಳ್ಳು[೬] ಮುಂತಾದ ಆಟಗಳಲ್ಲೂ ನಾವು ತನ್ಮಯರಾಗುತ್ತಿದ್ದೆವು. ಇವೆಲ್ಲ ಸರಸದ ಆಟಗಳು ಮೈ ಕೈ ಹೆಚ್ಚಿಗೆ ನೋಯಿಸಿಕೊಳ್ಳುವಂತಿರಲಿಲ್ಲ. ಇಲ್ಲಿ ಇಬ್ಬರಿದ್ದರೆ ಸಾಕಾಗುತ್ತಿತ್ತು. ಪ್ರೇಕ್ಷಕರು ಲೀಲಾ ವಿನೋದದಿಂದ ಎಷ್ಟು ಸಂಖ್ಯೆಯಲ್ಲಿ ಬೇಕಾದರೂ ಇರಬಹುದಾಗಿತ್ತು. ಆಟದ ನಿಯಮಗಳಲ್ಲಿ

ಏನಾದರೂ ಹೆಚ್ಚು ಕಡಿಮೆಯಾಗಿ ವಾಗ್ವಾದ ಪ್ರಾರಂಭವಾದರೆ ಲೀಲಾವಿನೋದಕ್ಕೆ ಕುಳಿತಿದ್ದವರೆ ನ್ಯಾಯತೀರ್ಮಾನ ಮಾಡುತ್ತಿದ್ದರು. ಆ ಮುಹೂರ್ತಕ್ಕೆ ಅದು ನ್ಯಾಯದ ಚಾವಡಿಯೆ ಆಗುತ್ತಿತ್ತು. ಹೊರನೋಟಕ್ಕೆ ಅವರು ನ್ಯಾಯಮೂರ್ತಿಗಳೇ ಆಗಿರುತ್ತಿದ್ದರು.

ಕಣ್ಣು ಮುಚ್ಚಾಲೆಯಾಟವೂ ನಮ್ಮ ವ್ಯಾಪ್ತಿಗೆ ಹೊರತಾಗಿರಲಿಲ್ಲ. ಕದ್ದು ಅಡಗಿಕೊಂಡವರನ್ನು ಹುಡುಕುವುದೇನೂ ಸಾಮಾನ್ಯ ಕೆಲಸವಲ್ಲ. ಆ ಆಟದಲ್ಲೆ ಎಲ್ಲ ಕಾಲದಿಂದಲೂ ಒಂದಷ್ಟು ಮೋಸ ವಂಚನೆ ಉಂಟೆ ಉಂಟು. ಕಣ್ಣು ಮುಚ್ಚಾಲೆಗೂ ಮೋಸಗಾರಿಕೆಗೂ ಬಿಡಿಸಲಾಗದ ನಂಟು. ಈ ನಂಟು 'ಬೆರಕಿಮಂದಿಗೂ ಮತ್ತೆ ಚದುರ ಚಮ್ಮಾರರಿಗು / ಹೊಲೆ-ನೆಲೆಗಾಣದ' ನಟಿನಂತಿದೆ.

ಚಿನ್ನಿದಾಂಡು, ಚೆಂಡು ಈ ಮುಂತಾದ ಆಟಗಳನ್ನು ನಾವು ಸಂಭ್ರಮದಿಂದ ಆಡುತ್ತಿದ್ದೆವು. ಆ ಆಟಗಳಲ್ಲಿ ಅನ್ಯಾಯದ ಆಟವನ್ನಾಡಿ ಜಗಳಕ್ಕೆ ಬೀಳುವ ಹುಡುಗರೂ ಇರುತ್ತಿದ್ದರು. ಕಾಲ್ಕೆರೆದು ಜಗಳವಾಡುವವರೂ ಇರುತ್ತಿದ್ದರು. ಮೊಂಡಾಟ ಮಾಡುತ್ತ ಕಾಡುವವರೂ ಇರುತ್ತಿದ್ದರು. ಆಟದ ನಿಯಮಗಳನ್ನು ಹಾಗೂ ಉಂಟು ಹೀಗೂ ಉಂಟು ಎಂದು ತಮ್ಮ ಮೂಗಿನ ನೇರಕ್ಕೆ ಹೇಳಿಕೊಳ್ಳುವವರೂ ಇರುತ್ತಿದ್ದರು. ನಿಯಮಗಳನ್ನು ಮುರಿದು ನುಗ್ಗುವವರಿಗೆ ಎಲ್ಲವೂ ಚೆಲ್ಲಾಟವೇ ತಾನೆ !

***ಅಡಿಟಿಪ್ಪಣಿಗಳು***

೧. ಡೀಕಾಟ : ಗೋಲಿಗುಂಡನ್ನು ಆಡುವಾಗ ಸೋತವನು ಕೈಯನ್ನು ಮುಷ್ಟಿಮಾಡಿ ನೆಲದ ಮೇಲಿದ್ದ ಗುಂಡನ್ನು ಮಡಚಿದ ಬೆರಳುಗಳಿಂದ ನೂಕಿಸುವ ಕ್ರಿಯೆಗೆ 'ಡೀಕುವದು' ಎಂದರ್ಥ. ಈ ಕ್ರಿಯೆ ತೊಂದರೆದಾಯಕ. ಡೀಕುವಾಗ ನೆಲಕ್ಕೆ ಬೆರಳು ಹಚ್ಚಿ ಚರ್ಮಕಿತ್ತು ನೋವಾಗುವುದುಂಟು. 'ನಾನು ಬಿಡ್ತೇನೇನು ಕೊನೆತಕನ ಡೀಕಿಸ್ತೇನೆ' ಎಂದು ಗೆದ್ದವರು ಹಮ್ಮಿನಿಂದ ನುಡಿಯುತ್ತಾರೆ.

೨. ಗೇಣು : ಚಾಚಿದ ಅಂಗೈಯ ಹೆಬ್ಬೆರಳು ಕಿರುಬೆರಳುಗಳ ನಡುವಿನ ಅಂತರ.

೩. ಕುಂಟ್ಟಲಿಪಿ, ಕುಂಟಿಬಿಂದ : ನೆಲದ ಮೇಲೆ ಬರೆದ ಮನೆಯಲ್ಲಿ ಕುಂಟುತ್ತ ಬಿಲ್ಲೆ (ಹೆಂಚಿನ ಚೂರು)ಯನ್ನು ಮನೆಯಿಂದ ಮನೆಗೆ ಸಾಗಿಸುವ ಆಟ.

೪. ಆನೆ ಕಿರ್ರ್ : ಆಟದ ಒಂದು ಪಂಗಡ ಗೋಡೆ ಡುಬ್ಬ ಹಿಡಿದು ಬಗ್ಗಿ ನಿಲ್ಲುವರು. ಮತ್ತೊಂದು ಪಂಗಡದ ಒಬ್ಬ ಓಡುತ್ತ ಬಂದು ಜಿಗಿದು ಬಗ್ಗಿದವರ ಮೇಲೆ ಹಾರಿ ಕುಳಿತುಕೊಳ್ಳುತ್ತಾನೆ. ಹಾಗೆ ಉಳಿದವರೂ ಮಾಡುತ್ತಾರೆ. ಒಂದು ಭಾಗದಲ್ಲಿ ಇಬ್ಬರು ಮೂವರು ಕುಳಿತಾಗ ಬಗ್ಗಿದ ಪಂಗಡದ ಆನೆಯ ಸೊಂಡೆ ಮುರಿದಾಗ ಕಿರ್ರ್ ಎಂಬ ಸಪ್ಪಳವಾಗುತ್ತದೆ.

೫. ಚಾವಂಗ : ಕವಡೆ ದೊರೆಯದಿದ್ದಾಗ ಹುಣಸೆಪಕ್ಕದ ಹೋಳು ಮಾಡಿ ಕವಡೆಯಂತೆ ಆಟ ಆಡುವರು. ೫ ಮನೆಗಳಿದ್ದರೆ ೪ ಚಾವಂಗ ; ೭ ಮನೆಗಳಿದ್ದರೆ ೬ ಚಾವಂಗ ಉಪಯೋಗಿಸಬೇಕು. ಆಡುವವರು ಇಬ್ಬರಿಂದ ನಾಲ್ಕು ಜನ. ಇದನ್ನು ಹಳೆ ಮೈಸೂರಿನಲ್ಲಿ ಚೌಕಾಬಾರ ಆಟವೆನ್ನುವರು.

೬. ಹುಲಿಮನೆ : ಕಲ್ಲಿನ ಮೇಲೆ ಹುಲಿಮನೆಯನ್ನು ಬರೆದು ಕಲ್ಲುಗಳನ್ನು ಚತುರತೆಯಿಂದ ಮನೆಯಿಂದ ಮನೆಗೆ ಸರಿಸುವ ಆಟ. ದೊಡ್ಡ ಹರಳು ಹುಲಿಯಾಗಿರುತ್ತದೆ. ಇವೆಲ್ಲ ಪಗಡೆ ಆಟ, ಚದುರಂಗಗಳಿಗೆ ಸಿದ್ಧತೆ ಮಾಡುವ ಆಟಗಳು. ಇಬ್ಬರೇ ಆಡಿದರೂ ಪ್ರೇಕ್ಷಕರೂ ಸಾಕ್ಷಿಗಳಂತೆ ನ್ಯಾಯ ಬಗೆ ಹರಿಸಲು ಮುಂದಾಗುತ್ತಾರೆ. ಆಟದ ಸ್ಥಳ ಹಳ್ಳಿಯ ಚಾವಡಿಯಾಗುತ್ತದೆ.

೭. ಕಣ್ಣುಮುಚ್ಚಾಟ : ಇದಕ್ಕೆ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳಿವೆ. ಆದರೆ ಎಲ್ಲ ಪ್ರದೇಶದ ಆಟದಲ್ಲಿ ಕವಡು (ಕಪಟ) ಗಂಟುಕತನ ಅಡಗಿರುತ್ತದೆ.

೮. ಚಿಣಿಘಣಿ : ಗಿಲ್ಲಿದಾಂಡು, ಚಿನ್ನಿದಾಂಡು

೯. ಅನ್ನೆರಂಟೆ : ಅನ್ಯಾಯದಿಂದ ರಗಳೆ ಮಾಡುವುದು, ಸುಳ್ಳು ಸುಳ್ಳೇ ಜಗಳ ತೆಗೆಯುವುದು.

## ೮. ಹೋದಂಥ ದಿನಮರಳಿ ಹೋ! ಬಾರವು

ಭವತಿಭಿಕ್ಷಾಂದೇಹಿ ಎಂದು ಯಾರೇ ಮನೆಯ ಮುಂದೆ ನಿಂತು ಬೇಡಿದರೂ ಇಲ್ಲವೆನ್ನದೆ ನೀಡುವುದೇ ಅಂದಿನ ಶಿಕ್ಷಣವಾಗಿತ್ತು ; ಅಂದಿನ ಸಂಸ್ಕೃತಿಯಾಗಿತ್ತು. ಅಂತಹ ಸಂಸ್ಕೃತಿಯ ನಿರ್ವಹಣೆಯ ಕಾರ್ಯವನ್ನು ಮನೆಮನೆಯ ಗೃಹಿಣಿಯರು ನೆರವೇರಿಸುತ್ತಿದ್ದರು. ಆ ಹೊರೆಯನ್ನು ಅವರು ಸಂತೋಷದಿಂದಲೇ ಭರಿಸುತ್ತಿದ್ದರು. ಗತಕಾಲದ ಆ ಸುಂದರ ದಿನಗಳ ವೈಭವವನ್ನು ಅದು ಹೀಗೆ, ಅದು ಹಾಗೆ ಎಂದು ಎಣಿಸೆಣಿಸಿ ವರ್ಣಿಸುವುದು ಸಾಧ್ಯವೇ ಇಲ್ಲ. ಆ ಮನಮೋಹಕ ದಿನಗಳೆಲ್ಲ ಕಳೆದುಹೋಗಿ ಮತ್ತೆ ಆ ವೈಭವ ಹಿಮ್ಮರಳಿ ಬರುವುದು ಸಾಧ್ಯವೇ ಇಲ್ಲ.

ಇಷ್ಟರ ನಡುವೆಯೂ ಪುರುಷರಲ್ಲಿ ಕೆಲವರು ಸ್ವಚ್ಛಂದ ಪ್ರವೃತ್ತಿಯಿಂದ ಅಂಕೆಶಂಕೆಗಳಿಲ್ಲದೆ ಮೆರೆದಾಡುತ್ತಿದ್ದರು. ದ್ಯಾಮವ್ವ ದೇವಿಗೆ ಬಿಟ್ಟ ಮದಿಸಿದ ಕೋಣನ ಹಾಗೆ ಅವರು ಓಡಾಡುತ್ತಿದ್ದರು. ದೇವರಿಗೆಂದು ಬಿಟ್ಟ ಗೂಳಿ ಬಸವನ ಹಾಗೆ ಅವರು ಅಡ್ಡಾಡುತ್ತಿದ್ದರು. ಒಂದಷ್ಟು ದಾಂಧಲೆ ಮಾಡಿದರೂ ಗೂಳಿ ಬಸವನನ್ನು ಲೋಕದ ಜನ ತಿರಸ್ಕರಿಸುವುದಿಲ್ಲ ನೋಡಿ ! ಹಾಗೆ ಕೆಲವರ ಆಚಾರ ವಿಚಾರಗಳು ಹದ್ದು ಮೀರಿದ್ದರೂ ಲೋಕವು ಅದನ್ನು ಹೇಗೋ ಸಹಿಸಿಕೊಳ್ಳುತ್ತಿತ್ತು.

ಇದು ಹಾಡಹಗಲು, ಇದು ಕಗ್ಗತ್ತಲೆ ಎಂಬ ಭೇದವೇನೂ ಇಲ್ಲದೆ ಕೆಲವರು ಹೇಗೋ ಕಾರ್ಯಸಾಧನೆ ಮಾಡಿಕೊಂಡು ಬಿಡುತ್ತಿದ್ದರು. ಅಲ್ಲಿ ಸ್ವಾರ್ಥವೇ ಮುಖ್ಯವಾಗುತ್ತಿತ್ತು. ಒಬ್ಬೊಬ್ಬರದು ಒಂದೊಂದು ಬಗೆಯಾಗಿ, ಲೋಕದ ಬದುಕು ವರ್ಣಮಯವಾಗಿತ್ತು. ಹೀಗೆಲ್ಲ ಹೇಳುವಾಗ ಸಮಾಜವು ಸಂಪೂರ್ಣವಾಗಿ ಕೆಟ್ಟು ಹೋಗಿತ್ತೆಂದಲ್ಲ. ಅದು ಒಂದಷ್ಟು ಒದ್ದೆಯಾಗಿತ್ತೆ ಹೊರತು ಒದ್ದೆಮುದ್ದೆಯಾಗಿರಲಿಲ್ಲ. ಆ ಸ್ವೇಚ್ಛಾಚಾರಿಗಳು ಏನಾದರೂ ವಿವೇಕದ ಮಾತು ಹೇಳಿದರೆ ತಮ್ಮ ನಡವಳಿಕೆಯನ್ನು ತಿದ್ದಿಕೊಳ್ಳುವ, ಹದಗೊಳಿಸಿಕೊಳ್ಳುವ ಪರಿಸ್ಥಿತಿಯಲ್ಲಿದ್ದರು.

ನಾರಾಗಿದ್ದರೂ ಜೋರಾಗಿದ್ದೇನೆ ಎಂಬ ಗಾದೆಯಂತೆ ಅಂದಿನ ದಿನಗಳಲ್ಲಿ ಕೆಲವರು ಒಣಕಲಾಗಿದ್ದರೂ ತಮ್ಮ ಬನಿಯನ್ನೇನೂ ಬಿಟ್ಟುಕೊಟ್ಟಿರಲಿಲ್ಲ. ಸಿರಿವಂತರಾಗಿ ಕೆಲವರು ತಮ್ಮ ಶ್ರೀಮದ್ ಗಾಂಭೀರ್ಯದಿಂದ ತೂಕದ ಮನುಷ್ಯರೆನಿಸಿ ಕೊಂಡಿದ್ದರೂ ಮನಸ್ಸನ್ನು ಮಾತ್ರ ಮಲ್ಲಿಗೆಯಂತೆ ಹಗುರವಾಗಿಯೇ ಇಟ್ಟುಕೊಂಡಿರುತ್ತಿದ್ದರು. ಗೊಂದಲಿಗರ ಗೊಂದಲ ಹಾಕುವಿಕೆಯಲ್ಲಿಯೂ ಏನೋ ವಿಶಿಷ್ಟವಾದ ತೂಕವಿರುತ್ತಿತ್ತು. ಅದೊಂದು ಕುಶಲಕಲೆ ಎಂಬಂತೆ ಭಾಸವಾಗುತ್ತಿತ್ತು. ಧರ್ಮವೇ ಸಮಾಜದ ಎಲ್ಲ ಚಟುವಟಿಕೆಗಳನ್ನು ಒಳಗೊಂಡಿತ್ತು. ಕಷ್ಟನಷ್ಟಗಳನ್ನಾಗಲಿ, ಕುಂದುಕೊರತೆಗಳನ್ನಾಗಲಿ, ಬೇನೆ ಬೇಸರಗಳನ್ನಾಗಲಿ ಸಹಿಸಿಕೊಳ್ಳುವ ಬಲ ಆ ಧರ್ಮದ ಬಲದಿಂದಲೇ ದೊರೆಕೊಳ್ಳುತ್ತಿತ್ತು.

ಪಶುಪ್ರವೃತ್ತಿಯು ಮಾನವೀಯ ಭಾವಗಳೊಡನೆ ಕಲಬೆರಕೆಯಾಗಿ, ಜೀವನವು ಅದೊಂದು ಸರ್ಕಸ್ಸಿನ ಹಾಗೆ, ಹೇಗೋ ಸಾಗುತ್ತಿತ್ತು. ಕೆಲವರು ನಡೆಸುತ್ತಿದ್ದ ಅಂತಹ ಸರ್ಕಸ್ಸಿನ ಬದುಕು ನೋಡುವವರನ್ನು ಮೈ ಮರೆಯುವಂತೆ ಮಾಡುತ್ತಿತ್ತು. ಅವರು ದಂಗು ಬಡಿದು ಹೋಗುತ್ತಿದ್ದರು. ಆದರೆ ಮರುಕ್ಷಣದಲ್ಲಿಯೇ ಬೇರೆ ಬೇರೆ ಭಾವಗಳು ನುಗ್ಗಿ ಬಂದು ಸರ್ಕಸ್ಸಿನ ನಡೆಗೆ ತೆರೆ ಬೀಳುತ್ತಿತ್ತು. ಕೋಡಂಗಿಗಳ ಗೊಡ್ಡಾಟ ನಗೆಗಡಲಲ್ಲಿ ತೇಲಿಸುತ್ತಿತ್ತು. ಮಾನವನ ವಿಚಿತ್ರ ವರ್ತನೆಗಳಲ್ಲಿ ಅಂತಹದೂ ಒಂದು ತಾನೆ ! ಆಗಿನ ನಗೆಯನ್ನು ಯಾರು ತಾನೆ ಹಿಡಿಯಬಲ್ಲರು? ಅದೆಲ್ಲ ಅಡ್ಡಡ್ಡ ನಡಿಗೆಯಲ್ಲವೆ ? ಏನಾದರಾಗಲಿ, ನಾವು ನಾವೇ ಎಂಬ ಭಾವದಲ್ಲಿ ಕೆಲವರು ನಿರ್ಲಿಪ್ತ ಭಾವದಿಂದ ಇದ್ದು ಬಿಡುತ್ತಿದ್ದರು. ನಾನಾರೆಂಬುದನ್ನು ಎಚ್ಚರದಿಂದ ಕಂಡುಕೊಳ್ಳಲು ಪ್ರಯತ್ನಿಸುತ್ತಿದ್ದರು.

ಅಂದಿನ ಸಮಾಜದಲ್ಲಿ ಮೇಲು ನೋಟಕ್ಕೆ ಹಲವಾರು ಏರುಪೇರುಗಳು ನೋಡಲು ಸಿಗುತ್ತಿದ್ದುವು. ನಿಜವಾಗಿ ಕಾಣಿಸಿಕೊಳ್ಳಬೇಕಾದವರು, ಮೆರೆದಾಡಬೇಕಾದವರು ತೆರೆಮರೆಯಲ್ಲಿಯೇ ಇದ್ದು ಬಿಡುತ್ತಿದ್ದರು. ಕೃಷ್ಣನೊಡನೆ ನರ್ತಿಸಬೇಕಾಗಿದ್ದ ರಾಧೆಗೆ ಬದಲಾಗಿ ಸಾಮಾನ್ಯ ಹೆಂಗಸು ಚಿಮಣಾ ಕುಣಿದು ಬಿಡುತ್ತಿದ್ದಳು. ಪಾರಿಜಾತದ ಆಟದಲ್ಲಿ ರುಕ್ಮಿಣಿ ಸತ್ಯಭಾಮೆಯರ ಸವತಿ ಮಾತ್ಸರ್ಯವೇ ಕಾರಣವಾಗಿ ಕೃಷ್ಣನು ತೊಳಲಾಡ ಬೇಕಾಗುತ್ತದೆ. ಹಾಗೆಯೇ ಕೆಲವು ಕುಟುಂಬಗಳಲ್ಲಿ ಇಬ್ಬರ ಹೆಂಡಿರ ಕಾಟಕ್ಕೆ ಸಿಲುಕಿ ಪುರುಷರು ನಲುಗಿ ಹೋಗುತ್ತಿದ್ದರು. ಸವತಿಯರಲ್ಲೂ ಯಾರಾದರೊಬ್ಬಳು ನೋವನ್ನು ಅನುಭವಿಸಬೇಕಾಗುತ್ತಿತ್ತು. ಪಾರಿಜಾತದ ಆಟದಲ್ಲಿ ಅನುಭವಿಸಿದ ಹಾಗೆ ಪದ್ಮಾವತಿಯನ್ನು ಸಮಾಧಾನ ಮಾಡುವ, ಅವಳಿಗೆ ಕಣಿ ಹೇಳುವ ಕೊರವಂಜಿಯರ ಪಾತ್ರವನ್ನು ನಿರ್ವಹಿಸುವ ಸ್ತ್ರೀಯರೂ ಇರುತ್ತಿದ್ದರು. ಅವರು ಗೌರವಾನ್ವಿತ ಮಹಿಳೆಯರಂತೆಯೇ ಇರುತ್ತಿದ್ದು ತಮ್ಮ ಜೋಳಿಗೆಯನ್ನೆ ತುಂಬಿಸಿ ಕೊಳ್ಳುತ್ತಿದ್ದರು.

## ೯. ಇದ್ದರೆ ಕಲ್ಯಾಣ, ಸತ್ತರೆ ಕೈಲಾಸ

ಎಂದಿನಂತೆ ಸಿರಿವಂತರು ಸಮಾಜದಲ್ಲಿ ಪ್ರತಿಷ್ಠಿತ ಪುರುಷರಾಗಿದ್ದರು. ಅವರ ಇರುವಿಕೆ, ಅವರಿಗುಂಟಾಗುತ್ತಿದ್ದ ಸುಖದುಃಖಗಳು, ಅವರ ಮರಣ ಎಲ್ಲವೂ ಭೂಷಣ ಪ್ರಾಯವಾಗಿರುತ್ತಿದ್ದವು. ಅವರು ಬದುಕಿರುವಾಗ ಲೋಕಕಲ್ಯಾಣ ಸಾಧಕರೆಂದು ಇತರರು ಕೊಂಡಾಡುತ್ತಿದ್ದರು. ಅವರು ತೀರಿ ಹೋದಾಗ ಕೈಲಾಸವನ್ನು ಸೇರಿದರು, ವೈಕುಂಠವನ್ನು ಸೇರಿದರು ಎಂದು ಹೊಗಳಲಾಗುತ್ತಿತ್ತು. ಸಿರಿವಂತರ ಎಲ್ಲ ನಡವಳಿಕೆಗಳಿಗೂ ಉತ್ತಮಾರ್ಥವನ್ನೇ ಕಲ್ಪಿಸಲಾಗುತ್ತಿತ್ತು. ಅವರು ಗೋಳಾಡುತ್ತಿದ್ದರೂ ಅದು ಭಜನೆಯ ಮಂಗಳ ಘೋಷವೆಂದೇ ತಿಳಿಯಲಾಗುತ್ತಿತ್ತು.

ಸತ್ತವರನ್ನು ಮಸಣಕ್ಕೆ ಹೊಯ್ಯುವಾಗಿನ ಮೆರವಣಿಗೆಯೂ ತನ್ನದೇ ಆದ ವೈವಿಧ್ಯದಿಂದ ಕೂಡಿರುತ್ತಿತ್ತು. ಮೆರವಣಿಗೆಯ ಮುಂದೆ ಹಾರಿ ಮದ್ದುಗಳನ್ನು ಭಯಂಕರವಾಗಿ ಸಿಡಿಸುತ್ತಿದ್ದರು. ಆ ಸದ್ದಿಗೆ ಎಷ್ಟೇ ಎಚ್ಚರವಾಗಿದ್ದರೂ ಶವವಾಹಕರು ಬೆಚ್ಚಿ ಅದುರುತ್ತಿದ್ದರು. ಅವರು ಅದುರಿದಾಗ ಅಲಂಕರಿಸಿ ಕೂರಿಸಿದ ಶವದ ತಲೆಯೂ ಅದುರುತ್ತಿತ್ತು. ಸಮ್ಮತಿ ಸೂಚಕವೆಂಬಂತೆ ತೂಗುತ್ತಿತ್ತು. ತಮಟೆ ಹಲಗೆಗಳ ನಾದ ಮುಗಿಲು ಮುಟ್ಟುತ್ತಿತ್ತು. ಅದು ಸತ್ತವರ ನೆಪದಲ್ಲಿ ಇದ್ದವರು ಮಾಡಿಕೊಳ್ಳುವ ಮೆರವಣಿಗೆಯಾಗುತ್ತಿತ್ತು. ಹಲಗೆಯ ನಾದವಾದರೊ 'ಸತ್ತರೆ ಸತ್ತಿನೀ, ಸತ್ತರೆ ಸತ್ತಿ ನೀ' ಎಂದು ಹೇಳುತ್ತಿದೆಯೊ ಎಂಬಂತೆ ಭಾಸವಾಗುತ್ತಿತ್ತು. ಆ ಮಾತಿನ ಮೂಲಕವೇ ಅದು ಸತ್ತವನಿಗೆ ಶ್ರದ್ಧಾಂಜಲಿಯನ್ನರ್ಪಿಸುತ್ತಿತ್ತು, 'ಸತ್ತವರ ಮನೆಯಲ್ಲಿ ಯಾರು ಕೆಟ್ಟರು, ಸತ್ತವರೇ ಕೆಟ್ಟರು' ಎಂಬ ಗಾದೆಯಂತೆ ಸತ್ತವರ ವ್ಯವಹಾರ ಅಲ್ಲಿಗೇ ಕೊನೆಗೊಳ್ಳುತ್ತಿತ್ತು. ಇದ್ದವರು ಮೆರೆದಾಡಲು ಮುಂದಕ್ಕೆ ದಾರಿಯಾಗುತ್ತಿತ್ತು.

ಆತ್ಮಕ್ಕೆ ಶರೀರ ಸಂಬಂಧದಿಂದ ಉಂಟಾದ ಬಂಧನವು ಆ ಶರೀರವು ಬಿದ್ದು ಹೋಗುವುದರೊಂದಿಗೆ ತತ್ಕಾಲಕ್ಕೆ ಕೊನೆಗೊಂಡಂತಾಗುತ್ತಿತ್ತು. ಅಯ್ಯೋ ಇನ್ನೂ ಅದೆಷ್ಟೋ ವೈಭವವನ್ನು ಕಾಣಬೇಕಾಗಿತ್ತು ; ಪುಣ್ಯವಿಲ್ಲ, ಸತ್ತೇ ಹೋದನಲ್ಲ ಎಂದು ಕೆಲವೊಮ್ಮೆ ಜನರು ಆಡಿಕೊಳ್ಳುತ್ತಿದ್ದರು. ಹೀಗಾಗಿ ಸತ್ತವನೇ ಪಾಪಿ ಎನಿಸುತ್ತಿದ್ದನು. ಶವದ ಭಾರ ತೋರದಂತೆ ಹೊತ್ತವರಿಗೆ ಸೆರೆಯನ್ನು ಕುಡಿಸಲಾಗುತ್ತಿತ್ತು. ಒಬ್ಬನು ಸೆರೆ ಬಿಡಿಸಿಕೊಂಡರೆ ಮತ್ತಷ್ಟು ಜನ ಸೆರೆಯ ಪ್ರಭಾವಕ್ಕೆ ಒಳಗಾಗುತ್ತಿದ್ದರು. ಮೆರೆವಣಿಗೆಯ ದಾರಿಯಲ್ಲಿ ಬಣ್ಣದ ಗುಲಾಲು ಪುಡಿಯನ್ನು ಶವದ ಮೇಲೆ ಮತ್ತು ಶವವನ್ನು ಹೊರಲು ಬಂದವರ ಮೇಲೆ ಎರಚಾಡುತ್ತಿದ್ದರು, ವಿಳ್ಯದೆಲೆಗಳನ್ನು ಸಿದಿಗೆಯತ್ತ ಎಸೆಯುತ್ತಿದ್ದರು. ಸೆರೆಯ ಪ್ರಭಾವಕ್ಕೆ ಒಳಗಾದವರು ಹಾರಾಡುತ್ತ, ತೂರಾಡುತ್ತ, ಮಸಣ ಭೂಮಿಯತ್ತ ಸಾಗುತ್ತಿದ್ದರು.

ಪೆಂಡಾರಿಸಾಬನು ತೀರಿ ಹೋದಾಗ ಅವನ ಶವವನ್ನು ಸಿಂಗರಿಸಿ ಮಸಣಕ್ಕೆ ಒಯ್ದ ದೃಶ್ಯ ಚಿರಸ್ಮರಣೀಯವಾದುದು. ಪೆಂಡಾರಿಸಾಬನೇನೊ ಎಂದೂ ಸಿಂಗಾರ ಮಾಡಿಕೊಳ್ಳದೆ

ಬಡತನದ ಬೇಗೆಯಲ್ಲಿ ನವೆದು ತನ್ನ ಇಹಲೋಕವ್ಯಾಪಾರವನ್ನು ಮುಗಿಸಿದನು. ಆದರೆ ಅವನ ಕೊನೆಯದಿನ ಮಾತ್ರ ಹಾಗಾಗಲಿಲ್ಲ. ಅದು ಇಂಪು ಕಂಪುಗಳಿಂದ ಮೆರುಗುಗೊಂಡಿತ್ತು. ಶವಯಾತ್ರೆಯಲ್ಲಿ ಬೇಕಾದಷ್ಟು ಜನ ಪಾಲ್ಗೊಂಡಿದ್ದರು. ಊದುಬತ್ತಿಯ ಕಂಪು ಸುತ್ತಲೂ ಹಬ್ಬಿಕೊಂಡಿತ್ತು. ಕುರಾನಿನ ಕಲ್ಮಾಗಳನ್ನು ಅತ್ಯಂತ ಇಂಪಾದ ದನಿಯಲ್ಲಿ ಮೌಲ್ವಿ ಮುಲ್ಲಾಗಳು ಪಠಿಸುತಿದ್ದರು.

ಬ್ರಾಹ್ಮಣರ ಶವಯಾತ್ರೆಯಲ್ಲಿ ಯಾವ ವೈಶಿಷ್ಟ್ಯವೂ ಇರುತ್ತಿರಲಿಲ್ಲ. ಸತ್ತವರಿಗಾಗಿ ಅತಿಯಾಗಿ ಗೋಳಾಡುವ ಪ್ರವೃತ್ತಿಯೂ ಕಾಣುತ್ತಿರಲಿಲ್ಲ. ಶವದ ಹಿಂದೆ ಅಳುತ್ತ ಸಾಗುವವರೂ ಇರುತ್ತಿರಲಿಲ್ಲ. ಅತ್ಯಂತ ಪರಿಮಿತ ಸಂಖ್ಯೆಯಲ್ಲಿ ಜನರು ಶವಸಂಸ್ಕಾರಕ್ಕೆ ಸಾಗುತ್ತಿದ್ದರು. ಶವವಾಹಕರ ಮುಖದಲ್ಲಿ ಪ್ರೇತಕಳೆ ಚೆಲ್ಲಾಡುತ್ತಿತ್ತು.

ಪ್ಲೇಗು ಮುಂತಾದ ಸಾಂಕ್ರಾಮಿಕರೋಗಗಳು ಗ್ರಾಮಗಳನ್ನು ಅಪ್ಪಳಿಸಿದಾಗ ಲೆಕ್ಕವಿಲ್ಲದಷ್ಟು ಜನ ಉರುಳಿ ಹೋಗುತ್ತಿದ್ದರು. ಸಾವಿಗೇ ಸುಗ್ಗಿ ಬಂತೋ ಎನ್ನುವ ಹಾಗೆ ಅಸಂಖ್ಯಾತರು ಮರಣಕ್ಕೆ ತುತ್ತಾಗುತ್ತಿದ್ದರು. ಅವರೆಲ್ಲ ಏಕಕಾಲಕ್ಕೆ ಯಮನ ಪಟ್ಟಣವನ್ನು ಪ್ರವೇಶಿಸಿ ಅಲ್ಲಿ ಕೋಲಾಹಲವನ್ನೇ ಎಬ್ಬಿಸಿ ಬಿಡುತ್ತಿದ್ದರು. ಯಮನವರ ಹಾವಳಿ ಭೂಲೋಕದಲ್ಲಾದರೆ ಭೂಲೋಕದಿಂದ ನಿವೃತ್ತರಾದವರ ಹಾವಳಿ ಯಮನೂರಿನಲ್ಲಿ ಪ್ರತಿಧ್ವನಿಸುತ್ತಿತ್ತು.

ಬದುಕಿದ್ದಾಗ ಸುಖದುಃಖಗಳನ್ನಾಗಲಿ, ಕ್ಷೇಮ ಸಮಾಚಾರಗಳನ್ನಾಗಲಿ ಬಂದು ವಿಚಾರಿಸದ ನಂಟರು ಸತ್ತಾಗ ಮಾತ್ರವೇ ತಲೆ ತೋರಿಸುತ್ತಾರೆ. ಅಂತಹವರದು ಗಂಟು ಮನಸ್ಸು. ಅವರೆಲ್ಲ ಕನಸ್ಸಿನ ನಂಟರೇ ಹೊರತು ನಿಜದ ನಂಟರಲ್ಲ. ಕಾಯಧಾರಿಯಾದ ಆತ್ಮವೊಂದು ತನ್ನ ಕಾಯವನ್ನು ಕಳಚಿಕೊಂಡಾಗ, ಇದ್ದವರು ಆ ಕಾಯವನ್ನು ಮಣ್ಣು ಮಾಡಿಬಿಡುತ್ತಾರೆ. ಹೀಗಾಗಿ ಎಲ್ಲ ಮೈವಂತರೂ ಮಣ್ಣಾಗಲೇ ಬೇಕು. ಕಾಯವಿರುವಾಗ ಮಾಡಿದ ಸತ್ಕಾರ್ಯಗಳನ್ನು ಮಾತ್ರ ಲೋಕವು ಮರೆಯುವುದಿಲ್ಲ. ಅವರ ಕೀರ್ತಿ ಮನೆಮಾತಾಗುತ್ತದೆ. ಅವರು ತಮ್ಮತನವನ್ನು ಉಳಿಸಿಕೊಂಡು ಅಜರಾಮರರಾಗುತ್ತಾರೆ. ಅಂತಹವರೂ ನಮ್ಮ ಸಮಾಜದಲ್ಲಿ ದ್ದುದನ್ನು ನಾನು ಕಂಡಿದ್ದೇನೆ.

## ೧೦. ರಸಿಕರು ಸಂತತ ಉತ್ಸುಕರು

ಜ್ಯೇಷ್ಠ ಮಾಸದ ಹುಣ್ಣಿಮೆಯನ್ನು ನಮ್ಮ ಗ್ರಾಮದ ಜನ ಕಾರ ಹುಣ್ಣಿಮೆ[೧] ಎಂದು ಸಂಭ್ರಮಪೂರ್ಣ ಹಬ್ಬವಾಗಿ ಆಚರಿಸುತ್ತಿದ್ದರು. ಆ ಹೊತ್ತಿನಲ್ಲಿ ಎರಡು ದಿನಗಳ ಕಾಲ ಅದೇನು ಕೋಲಾಹವೋ! ಅದೇನು ಸಂಭ್ರಮವೋ! ಆಗ ಯಾರನ್ನೂ ಹಿಡಿದು ನಿಲ್ಲಿಸುವುದು ಸಾಧ್ಯವೇ ಇರಲಿಲ್ಲ. ಯಾರ ಹಂಗೂ ಇಲ್ಲದೆ ತಮತಮಗೆ ಪ್ರತಿಯೊಬ್ಬರೂ ಅತಿಶಯವಾದ ಮನೋಲ್ಲಾಸವನ್ನು ಅನುಭವಿಸುತ್ತಿದ್ದರು. ಎತ್ತುಗಳನ್ನು ತೊಳೆದು ಅವುಗಳನ್ನು ಸಿಂಗರಿಸಿ ಹೂ ಹಾರಗಳನ್ನು ಕೊರಳಿಗೆ ಹಾಕಿ ಅವುಗಳನ್ನು ಕರಿಹಾಯಲು ಓಡಿಸುತ್ತಿದ್ದರು. ಆ ಹೊತ್ತಿನ

ದನಗಳ ಮೆರೆದಾಟ ಅಪೂರ್ವವಾಗಿರುತ್ತಿತ್ತು. ಎತ್ತೆನ್ನದೆ, ಕುದುರೆ ಎನ್ನದೆ ಮಿಕ್ಕ ಪಶುಗಳನ್ನೆಲ್ಲ ನೋಡುವವರ ಮನಸ್ಸು ಈ ಜೀವಗಳನ್ನು ದನ, ಪಶು ಎಂದು ಎಲ್ಲಿಯಾದರೂ ಹೇಳುವುದುಂಟೆ; ಅವು ಮನುಷ್ಯರಿಗೇನು ಕಡಿಮೆಯಾಗಿವೆ ಎಂಬ ಭಾವನೆ ಉಕ್ಕಿ ಬರುತ್ತಿತ್ತು.

ಫಾಲ್ಗುಣ ಮಾಸದ ಹುಣ್ಣಿಮೆಯಲ್ಲಿ ಕಾಮನ ಹಬ್ಬ ನಡೆಯುತ್ತಿತ್ತು. ಕಾಮಣ್ಣನ ಮೂರ್ತಿಯನ್ನು ತಯಾರಿಸಿ ಪ್ರಮುಖವಾದ ಚೌಕಿಗಳಲ್ಲಿ ಸ್ಥಾಪಿಸಿ ತರುವಾಯ ಸುಡುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಿದ್ದರು. ಕಾಮಣ್ಣನು ಉರಿಯುವಾಗ ಹಿರಿಯರೆನ್ನದೆ, ಕಿರಿಯರೆನ್ನದೆ ಎಲ್ಲರೂ ಬಾಯಿ ಬಡಿದುಕೊಳ್ಳುತ್ತಿದ್ದರು. ಕಾಮನು ಇನ್ನಿಲ್ಲಾದ ಎಂಬ ಶೋಕ ಸೂಚಕವಾದ ಬಾಯಿ ಬಡಿದುಕೊಳ್ಳುವಿಕೆ ಅದಾಗಿತ್ತು. ಆದರೆ ಕಾಮಣ್ಣನು ಭಸ್ಮವಾಗುವವನಲ್ಲ ಎಂಬುದು ಅವರಿಗೇನು ಗೊತ್ತು. ಶಿವನ ಹಣೆಗಣ್ಣಿನ ಕಿಚ್ಚಿಗೆ ಕಾಯವನ್ನೊಡ್ಡಿ ತರುವಾಯ ಮನಸಿಜನಾಗಿ ಎಲ್ಲ ಜೀವಕೋಟಿಗಳ ಮನಸ್ಸನ್ನು ಹೊಕ್ಕು ಕುಳಿತವನಿಗೆ ಸಾವುಂಟೆ! ಭಾದ್ರಪದ ಮಾಸದಲ್ಲಿ ವಿನಾಯಕ ಚೌತಿ ಕೂಡಿಕೊಳ್ಳುತ್ತಿತ್ತು. ಮೋದಕಪ್ರಿಯನಾದ ಗಣಪತಿಯನ್ನು ಮಣ್ಣಿನಿಂದ ಮಾಡಿ ಭಕ್ತಿಯಿಂದ ಪೂಜಿಸುವುದೇ ಅಂದಿನ ವಿಶೇಷ. ಅದೆಲ್ಲಾ ಆದ ಮೇಲೆ ನೀರಿಗೆ ಬಿಡುವ ಕಾರ್ಯಕ್ರಮ. ಬಿಟ್ಟರೆ ತಾನೆ ಏನು, ಅವನು ಮರಳಿ ಬರುವವನೆ, ಎಲ್ಲೆಲ್ಲೂ ಇರುವವನೆ. ಹೀಗಾಗಿ ಭಕ್ತರು ನೀನು ಮರಳಿ ಬರಬೇಕು ಎಂದು ಅವನನ್ನು ನೀರಿಗೆ ಬಿಡುವಾಗ ಬೇಡಿಕೊಳ್ಳುತ್ತಿದ್ದರು. ಗ್ರಾಮೀಣ ಜನರ ಈ ಮುಗ್ಧ ಬೇಡಿಕೆಗಳು ಅದೆಷ್ಟು ಚೆಂದವೋ!

ನಮ್ಮ ಗ್ರಾಮದ ಜನರು ಆಚರಿಸುವ ಹಬ್ಬಗಳನ್ನು ಎಣಿಸಿದವರೇ ಇಲ್ಲ. ನವರಾತ್ರಿ, ಶಿವರಾತ್ರಿಗಳು ದೊಡ್ಡ ಪರ್ವಗಳೆಂದು ಹೇಳಬೇಕಾದ್ದೇ ಇಲ್ಲ. ಆದರೆ ಹಬ್ಬಗಳ ಸಂಭ್ರಮ ಅಷ್ಟಕ್ಕೇ ಸೀಮಿತವಾಗುವುದಿಲ್ಲ. ಸಂತೋಷಪಡಲು ನವರಾತ್ರಿ, ಶಿವರಾತ್ರಿಗಳೇ ಬೇಕೆಂದೇನೂ ಇಲ್ಲ. ಪ್ರತಿ ಹುಣ್ಣಿಮೆ, ಅಮಾವಾಸ್ಯೆಗಳೂ ಹರಿದಿನಗಳೇ, ಹಬ್ಬದ ದಿನಗಳೇ. "ಇದು ಹಬ್ಬದ ದಿನವಲ್ಲ, ಪಿತೃದೇವತೆಗಳಿಗಾಗಿ ಮೀಸಲಾಗಿರುವ ಶ್ರಾದ್ಧದ ದಿನ" ಎಂದು ಹೇಳಿದರೂ ನಮ್ಮವರು ಮೂಗು ಮುರಿಯುತ್ತಿರಲಿಲ್ಲ. ಅದೂ ಒಂದು ಹಬ್ಬವೇ ಎಂಬಂತೆಯೇ ಸ್ವಾಗತಿಸಿ ಸಂಭ್ರಮಿಸುತ್ತಿದ್ದರು.

ಹಬ್ಬಗಳ ಅಂಗವಾಗಿ ರಾತ್ರಿಯ ಹೊತ್ತಿನಲ್ಲಿ ನದಿ ತೀರಗಳಿಗೆ ಮೆರವಣಿಗೆಯಲ್ಲಿ ಹೋಗುತ್ತಿದ್ದುದು ಉಲ್ಲಾಸದಾಯಕವಾದ ಸಂಗತಿಯಾಗಿತ್ತು. ಹಿಲಾಲುಗಳ ಬೆಳಕೇ ಆ ಮೆರವಣಿಗೆಗೆ ಆಶ್ರಯವಾಗಿತ್ತು. ನಮ್ಮ ಓಣಿಯ ಒಂಬತ್ತು ಗೆರಿ ದೇವರುಗಳ ವೈಭವಕ್ಕೆ ಆಗ ಗರಿಮೂಡುತಿತ್ತು. ಆ ಗೆರೆ ದೇವರುಗಳನ್ನು ಪೇಟೆ ಬೀದಿಯ ಮೂಲಕ ಹಾಯಿಸಿ ಪಾಜಾರಗಟ್ಟೆಯನ್ನು ಮುಟ್ಟಿಸುತ್ತಿದ್ದರು. ರಥದ ಕಳಸ ಹೋಯ್ದಾಡುತ್ತಿರುವಲ್ಲಿ ಜನರು ಮುಂದೆ ಸಾಗುತ್ತಿದ್ದರು.

ಶ್ರಾವಣ ಮಾಸದಲ್ಲಿ ಜನ ಸಮುದಾಯವು ವಿಶೇಷಾಗಿ ಕೂಡುವ ದೊಡ್ಡ ದೊಡ್ಡ ಜಾತ್ರೆಗಳು ವಿವಿಧ ದೇವಾಲಯಗಳ ಪರಿಸರದಲ್ಲಿ ನಡೆಯುತ್ತಿದ್ದುವು. ಆ ಜಾತ್ರಾಕಾಲದ ಬೆಳದಿಂಗಳ ರಾತ್ರಿಗಳು ಬಯಲಾಟಗಳಿಗಾಗಿಯೆ ಮೀಸಲಿರುತ್ತಿದ್ದುವು. ಆ ಹೊತ್ತಿನಲ್ಲಿ ಧಾರವಾಡದ ಪೇಟೆಗಳಿಗೆ ಹೊಸ ಹುಮ್ಮಸ್ಸು ತುಂಬಿಕೊಳ್ಳುತ್ತಿತ್ತು. ಕೋಟೆಯ ಬೀದಿಯ ಯುವತಿಯರು ಬಯಲಾಟ ನೋಡಲೆಂದು ಬಂದರೆ, ಆ ಯುವತಿಯರ ಸೌಂದರ್ಯವನ್ನು ತಮ್ಮ ಕಣ್ಣುಗಳಿಂದ ಬೇಟೆಯಾಡಲೆಂದೆ ತರುಣರು ನೆರೆಯುತ್ತಿದ್ದರು.

ಋತುಗಳು ಪರಿವರ್ತನೆಯಾದಂತೆಲ್ಲ ಜನ ಜೀವನದ ಸಂಭ್ರಮೋಲ್ಲಾಸಗಳಲ್ಲಿಯೂ ಪರಿವರ್ತನೆಯುಂಟಾಗುತ್ತಿತ್ತು. ಒಂದೊಂದು ಋತುವಿಗೆ ಒಂದೊಂದು ಬಗೆಯ ಸೌಂದರ್ಯ, ರಸಿಕರಂತೂ ಸೌಂದರ್ಯಾಸ್ವಾದನೆಗೆ ನಿರಂತರವೂ ಉತ್ಸುಕರಾಗಿರುತ್ತಿದ್ದರು. ವರ್ಷದಲ್ಲಿ ಹನ್ನೆರಡೇ ತಿಂಗಳಾಯಿತಲ್ಲ ಹದಿಮೂರು ತಿಂಗಳನ್ನು ದೇವರು ಕೊಡಬಾರದಿತ್ತೆ ಎಂದು ಅವರು ಹಂಬಲಿಸುತ್ತಿದ್ದರು.

**ಅಡಿಟಿಪ್ಪಣಿಗಳು**

೧. ಕಾರಹುಣ್ಣಿಮೆ = ಜ್ಯೇಷ್ಠಮಾಸದಲ್ಲಿ ಬರುವ ಹುಣ್ಣಿಮೆ, ಮಳೆಗಾಲದಲ್ಲಿ ಬರುವ ಪೂರ್ಣಿಮೆ; ಉತ್ತರ ಕರ್ನಾಟಕದಲ್ಲಿ ಕಾರಹುಣ್ಣಿಮೆಯು ದನಗಳ ಹಬ್ಬ. ಕಾರ ಹುಣ್ಣಿಮೆ ಕರಕೊಂಡು ಬಂತು. ಉಗಾದಿ ಉಡುಗಿಕೊಂಡು ಹೋಯಿತು (ಗಾದೆ); ಕಾರಹುಣ್ಣಿಮೆ ಕರಿ ಹರಿದು, ಮಣ್ಣೆತ್ತು ನೀರನ್ನು ಕುಡಿದವು; ಮನೆಯಲ್ಲಿರುವ ಹಸು......... ಇವನ್ನೆಲ್ಲಾ ಶಾಸ್ತ್ರೀಯವಾಗಿ ಪೂಜಿಸುವುದು ಕಾರ ಹುಣ್ಣಿಮೆಯ ದಿನ. (ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು. ಎರಡನೆಯ ಸಂಪುಟ ೧೯೭೬. ಪು-೧೭೨೯).

ಜ್ಯೇಷ್ಠಮಾಸದ ಹುಣ್ಣಿಮೆಯನ್ನು ಕಾರುಹುಣ್ಣಿಮೆ ಎಂದು ಆಚರಿಸುತ್ತಾರೆ. ಕೃಷಿಕರು ಇದನ್ನು ಮಳೆಗಾಲದ ಅರಂಭವೆಂದು ತಮ್ಮ ಊರುಗಳನ್ನು ಸಿಂಗರಿಸುತ್ತಾರೆ. ಎತ್ತುಗಳನ್ನು ಅಲಂಕರಿಸಿ ಮೆರವಣಿಗೆ ಹೊರಡಿಸಿ ಕರಿ ಹಾಯಲು ಓಡಿಸುತ್ತಾರೆ. ಈ ದಿನದಂದೇ ವೈದಿಕರಲ್ಲಿ ಮುತ್ತೈದೆಯರು ತಮ್ಮ ಪತಿಗೆ ದೀರ್ಘ ಆಯಸ್ಸನ್ನು ಕೋರಿ ವಟಸಾವಿತ್ರಿವ್ರತವನ್ನು ಆಚರಿಸುವರು. ಜ್ಯೇಷ್ಠ ಮಾಸದ ಅಮಾವಾಸ್ಯೆಯ ದಿನ ಮಣ್ಣೆತ್ತಿನ ಅಮಾವಾಸ್ಯೆ ಎಂದು ಆಚರಿಸುವರು. ಸಂಪ್ರದಾಯ ಇದ್ದವರು ಈ ದಿನ ಮಣ್ಣಿನ ಒಂದು ಜೊತೆ ಎತ್ತುಗಳನ್ನು ಇಟ್ಟು ಪೂಜಿಸುವರು.

(ಭಾರತದ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ, ಗುಲಬರ್ಗಾ ಜಿಲ್ಲೆ, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು. ೧೯೯೭. ಪು. ೧೭೦)

೨. 'ಆತ್ಮವತ್‌ಸರ್ವಭೂತಾನಿ'-ಸಮಸ್ತ ಭೂತ ಕೋಟಿಗಳನ್ನು ತನ್ನಂತೆ ನೋಡಬೇಕು ಎಂಬುದು ಆಧ್ಯಾತ್ಮಿಕ ಹಿನ್ನಲೆಯಲ್ಲಿ ಹೇಳುವ ಮಾತು. ಅದನ್ನು ಹೃತ್ಪೂರ್ವಕವಾಗಿ ಸ್ವೀಕರಿಸಿದ ವ್ಯಕ್ತಿಗೆ ಎತ್ತು, ಕುದುರೆ ಮೊದಲಾದ ಪ್ರಾಣಿಗಳಲ್ಲೂ ತನ್ನ ಸ್ವರೂಪವೇ ಪ್ರತಿಬಿಂಬಿಸುತ್ತದೆ.

೩. ಫಾಲ್ಗುಣಮಾಸದ ಹುಣ್ಣಿಮೆಯ ದಿನ ಹೋಳಿ ಅಥವಾ ಕಾಮನ ಹಬ್ಬವನ್ನು ಆಚರಿಸುತ್ತಾರೆ. ಸದರಿ ದಿನ ದಹನ ಮಾಡಲು ಸುಲಭವಾದ ಸಾಮಗ್ರಿಯಿಂದ ಕಾಮನ ಪ್ರತಿಮೆ ತಯಾರಿಸಿ, ಊರಿನ ಪ್ರಮುಖಕೇಂದ್ರಗಳಲ್ಲಿ ಸ್ಥಾಪಿಸಿ, ಸಂಜೆಯಲ್ಲಿ ದಹನ ಮಾಡುವರು. ಆ ದಿವಸ ಬಣ್ಣದ ನೀರಿನಿಂದ ಓಕುಳಿ ಆಡುವರು.

(ಭಾರತದ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ ಗುಲಬರ್ಗಾ ಜಿಲ್ಲೆ, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು ೧೯೯೭, ಪು. ೧೭೨).

ಹೋಳಿಹಬ್ಬದ ಹಾಡು : ಇದು ಪ್ರಾಧಾನವಾಗಿ ಗಂಡು ಮಕ್ಕಳ ಹಬ್ಬ. ಈ ಹಬ್ಬವನ್ನು ಕಾಮನ ಹಬ್ಬ ಎಂದೂ ಕರೆಯುವುದುಂಟು. ಹಬ್ಬವು ಹೋಳಿ ಹುಣ್ಣಿಮೆಯಿಂದ ಆರಂಭಗೊಂಡು ರಂಗ ಪಂಚಮಿಯ ವರೆಗೆ ನಡೆಯುವುದು. ಚಪ್ಪರದಲ್ಲಿ ಕಾಮನನ್ನಿಟ್ಟು ಗಂಡು, ಹೆಣ್ಣು ಮಕ್ಕಳು ಕೈ ಕೈ ಹಿಡಿದು ಹಾಡಿ ಆಡುತ್ತಾರೆ. ಈ ಹೋಳಿಯ ಆಟದಲ್ಲಿ ಅಶ್ಲೀಲ, ಅಸಭ್ಯ ಮಾತುಗಳು ಬರುತ್ತವೆ. ವಿಕಾರ ರೂಪತಾಳಿ ಒಬ್ಬರನ್ನೊಬ್ಬರು ಬೈದಾಡುವುದೂ ಅಣಕಿಸಿ ಗೇಲಿ ಮಾಡುವುದೂ ಆ ದಿನಗಳಲ್ಲಿ ಸರ್ವೇಸಾಮಾನ್ಯವಾಗಿ ಕಾಣುವ ದೃಶ್ಯ. ಆ ಸಂದರ್ಭ ಮೋಜಿನದಾಗಿರುತ್ತದೆ. ಹುಡುಗರು-ಹೋಳಿ ಹುಣ್ಣಿಮೆ ಬಂತು ಹೊಯ್ಕೊಳ್ಳೋದು ಬಂತು, ಹೋಳಿಗಿ ತುಪ್ಪಣ್ಣಾದು ಬಂತೋ, ಎಂದು ಹಾಡಿ ಪ್ರತಿಯೊಂದು ಮನೆಯ ಬಾಗಿಲಲ್ಲಿ ನಿಂತು ಹೋಳಿಗೆ ತಿನ್ನುವರು. ಕೆಲವೆಡೆ ಕದ್ದು ತಿನ್ನುವ ಪದ್ಧತಿ ಇದೆ. ಆ ಸಂದರ್ಭದಲ್ಲಿ-ಕಾಮಣ್ಣ ಕಟ್ಟುತಲಿ ಗೊನೆಮುಳ್ಳ ಸುರಿಯುತಲಿ/ಸೀತಾಳ ಬಾಂವಿ ತೆಗೆಸುತಲಿ/ ನಮ ಕಾಮ/ ಜೀತ ಹೋಗ್ಯಾನ ಶಿವನಲ್ಲಿ - ಎಂದು ಕಾಮನು ಶಿವನ ಸೇವೆಗೆ ಹೋದನೆಂದು ಹಾಡುವುದು ವಿಶೇಷ. ಕೆಲವು ಭಾಗಗಳಲ್ಲಿ ಹಬ್ಬದ ದಿನಗಳಲ್ಲಿ ಸೋಗುಗಳನ್ನು ಕಟ್ಟಿಕೊಂಡು ಲಿಂಗಭೇದವಿಲ್ಲದೆ ಎಲ್ಲರೂ ಹಾಡಿ ಕುಣಿದು ದಣಿಯುತ್ತಾರೆ. ಹೀಗೆ ಕನ್ನಡ ಜನಪದ ಗೀತ ಪ್ರಕಾರಗಳು ವೈವಿಧ್ಯಮಯವಾಗಿದ್ದು, ಸಮೃದ್ಧವಾಗಿವೆ.

(ಜಾನಪದ ಕೈಪಿಡಿ, ಪುಸ್ತಕ ಪ್ರಾಧಿಕಾರ, ಬೆಂಗಳೂರು. ಪ್ರಧಾನ ಸಂಪಾದಕ : ಡಾ॥ ಎಚ್.ಜೆ. ಲಕ್ಕಪ್ಪಗೌಡ, ೧೯೯೭, ಪು.೬೨)

೪. ಇದು ಮುಸಲ್ಮಾನರ ಬಾಬಯ್ಯನ ಹಬ್ಬದ ಸನ್ನಿವೇಶವನ್ನು ಚಿತ್ರಿಸುತ್ತಿದೆ ಎಂಬುದು ಎಸ್.ಜಿ. ನಾಡಿಗೇರ ಮಾಸ್ತರರ ಅಭಿಪ್ರಾಯ. ಸಾಮಾನ್ಯವಾಗಿ ಆ ಹೊತ್ತಿನಲ್ಲಿ ಮುಸಲ್ಮಾನರು ಮೆರವಣಿಗೆಯಲ್ಲಿ ಒಯ್ಯುವ ದೇವರ ಪ್ರತೀಕವು ಒಂದು ಹಸ್ತ. ಅಂದರೆ ಐದುಗೆರೆಗಳ ದೇವರು. ಲಕ್ಷ್ಮೀನಾರಾಯಣ ಗುಡಿಯ ಹತ್ತಿರ ಧಾರವಾಡದ ಕರ್ನಾಟಕ ಹೈಸ್ಕೂಲಿನ ಸಮೀಪದ ಮಸೀದಿ ಅತ್ಯಂತ ದೊಡ್ಡದು. ಒಂಬತ್ತು ಗೆರೆಗಳ ಪಂಜಾ ಇತ್ತು. ಹಾಗೆಯೇ ಅಲ್ಲಿ ರಥದಂತೆ ಕಾಣುವ - ಕಳಸ ಸಹ ಇರುವ ಡೋಲಿ ಇತ್ತು. ಅದನ್ನು ಒಯ್ಯುವಾಗ 'ಏ ಹುಸೇನಿ ಬಲಿದಲಿಯೋ ಯಾರೆಸುಲ್ತಾನ ಅಲ್ಬಿದಾ' ಎಂದು ಹಾಡುತ್ತಿದ್ದರು.

ಪಂಜಾ : ಮೊಹರಂ ಸಂದರ್ಭದಲ್ಲಿ ಮುಸಲ್ಮಾನರು ಪೂಜಿಸುವ ಐದು ಬೆರಳುಗಳಿಂದ ಕೂಡಿದ ಲೋಹದ ಹಸ್ತ. (ಕನ್ನಡ ನಿಘಂಟು, ಐದನೆಯ ಸಂಪುಟ, ಕನ್ನಡ ಸಾಹಿತ್ಯ ಪರಿಷತ್ತು, ೧೯೮೮ ಪು. ೫೦೫೭)

ಇದೇ ಭಾಗವನ್ನು ಹಿಂದೂಗಳು ಆಚರಿಸುವ ಉತ್ಸವ ವಿಧಾನಗಳ ಹಿನ್ನೆಲೆಯಲ್ಲಿ ಹೀಗೆ ಅರ್ಥೈಸಬಹುದು : ಹತ್ತಾರು ಊರುಕೇರಿಗಳ ದೇವರುಗಳನ್ನು ದೊಡ್ಡ ಹಬ್ಬಗಳಲ್ಲಿ ಎಷ್ಟೇ ದೂರವಿದ್ದರೂ ಹರಿಯುವ ನದಿಗಳ ತೀರಕ್ಕೆ ಮೆರವಣಿಗೆಯಲ್ಲಿ ಒಯ್ದು, ತೊಳೆದು, ಪೂಜಿಸಿಕೊಂಡು ಬರುವುದೊಂದು ವಿಶೇಷ ಸಂಪ್ರದಾಯ.

ಇಲ್ಲಿಯ ಕೊನೆಯ ಎರಡು ಪಾದಗಳಲ್ಲಿ ದೇವಾಲಯಗಳಲ್ಲಿ ನಡೆಯುವ ರಥೋತ್ಸವದ ಚಿತ್ರವಿದೆ.

## ೧೧. ಒಂದು ಜನ್ಮದ್ದಲ್ಲಾ ಗೆಳೆತನದ ಸಾಧನೆ

ನಾನು ನನ್ನ ಜೀವದ ಗೆಳೆಯರನ್ನು ಒಟ್ಟು ಗೂಡಿಸಿಕೊಂಡು 'ಗೆಳೆಯರ ಗುಂಪು' ಎಂಬ ಒಂದು ಸಂಘಟನೆಯನ್ನೇ ರೂಪುಗೊಳಿಸಿದೆ. ಗೆಳೆಯರೇ ನನ್ನ ಜೀವದ್ರವ್ಯವಾಗಿದ್ದರು. ಆ ಗುಂಪಿನಲ್ಲಿ ಶ್ರೀಧರನಿದ್ದನು, ರಾಮನಿದ್ದನು, ನರಸಿಂಹನು ಇದ್ದನು. ಒಬ್ಬೊಬ್ಬರದು ಒಂದೊಂದು ಮನಸ್ಸು, ಒಬ್ಬೊಬ್ಬರದು ಒಂದೊಂದು ಲೀಲೆ; ಶ್ರೀಧರನಾದರೋ ಹೆಂಗರುಳಿನ ಸುಕುಮಾರಸ್ವಾಮಿ, ರಾಮನದು ತುಂಟಾಟದ ಸ್ವಭಾವ, ವಿಷ್ಣುವು ದಶಾವತಾರವೆತ್ತಿದಂತೆ ನರಸಿಂಹನು ಹತ್ತಾರು ಬಗೆಯ ಆಟಗಳನ್ನಾಡಿ ಎಲ್ಲರನ್ನೂ ಮೋಹಗೊಳಿಸುತ್ತಿದ್ದನು. ಈ ಗೆಳೆಯರ ಸಹವಾಸದಲ್ಲಿ ನನಗೆ ಪುನರ್ಜನ್ಮ ತತ್ವದ ದರ್ಶನವೇ ಆಯಿತು. ಶ್ರೀಧರ, ರಾಮ, ನರಸಿಂಹ ನನಗೆ ಇಂದು ನೆನ್ನೆಯ ಗೆಳೆಯರಲ್ಲ. ಈ ಗೆಳೆತನದ ಸಾಧನೆ ಜನ್ಮ ಜನ್ಮಾಂತರದಿಂದ ಬಂದದ್ದು ಎಂದು ನನಗೆ ಮನವರಿಕೆಯಾಗುತ್ತಿತ್ತು. ಈ ಜನ್ಮಕ್ಕೆ ಈ ಗೆಳತನದ ಸೌರಭ ಮುಕ್ತಾಯವಾಗುವಂಥದಲ್ಲ. ಇವರೆಲ್ಲ ನವನವದೇಹಧಾರಿಗಳಾಗಿ ಮುಂದಿನ ಜನ್ಮಗಳಿಗೂ ನನ್ನ ಗೆಳೆಯರಾಗುತ್ತಾರೆ ಎಂದು ನಾನು ಚಿಂತನೆ ಮಾಡುತ್ತಿದ್ದೆ.

ಈ ಸ್ನೇಹದ ಕರುಳಿನ ಹೆಳಲಿಗೆ ಮೂರು ಕಾಲಾಗಿ ಶ್ರೀಧರ, ರಾಮ ಮತ್ತು ನರಸಿಂಹರು ನಿಂತರು. 'ಹೆಣೆಗೆ ಗೋಪಿಗೇ[೧] ಎಲ್ಲಾ ತುದಿಯ ಅನು'[೨] ಗೋಪಿನ ಹೆಣೆಗೆಯ, ಸ್ನೇಹದ ಈ ಹೆಣೆಗೆಯ ಸೌಂದರ್ಯಕ್ಕೆ ತುದಿಮೊದಲೆಂಬುದೇ ಇಲ್ಲ. ಸ್ನೇಹದ ಈ ಮತ್ಸ್ಯಯಂತ್ರವನ್ನು ಭೇದಿಸುವುದಾದರೂ ಹೇಗೆ ? ಅರ್ಜುನನು ಎಣ್ಣೆಯಲ್ಲಿ ಪ್ರತಿಬಿಂಬವನ್ನು ಕಂಡು ಅದನ್ನು ಭೇದಿಸಿದನು. ಆಗ ಸಿಕ್ಕಿದ್ದು ಅವನಿಗೆ ಹೆಣ್ಣು. ಗೆಳೆತನವೆಂಬುದು ದಕ್ಕುವುದು ಹಾಗಲ್ಲ. ಈ ಸ್ನೇಹಮತ್ಸ್ಯಯಂತ್ರವನ್ನು ಕಣ್ಮುಚ್ಚಿಕೊಂಡೇ ಭೇದಿಸಬೇಕು. ಕಣ್ಮುಚ್ಚಿಕೊಂಡೇ ಗುರಿ ಕಾಣಬೇಕು. ಅದಕ್ಕಾಗಿ ಮೈತ್ರಿಯಧನುವನ್ನು ಸದಾಕಾಲ ಹೆದೆ ಏರಿಸಿಕೊಂಡೇ ಇರಬೇಕು. ಗೆಳೆತನವೆಂಬುದು ಬಹಿರಂಗ ವ್ಯಾಪಾರವಲ್ಲ; ಹೃದಯದ ವ್ಯಾಪಾರ, ಅಂತರಂಗದ ವ್ಯಾಪಾರ.

ನನ್ನ ಗೆಳೆಯರ ಸಮುದಾಯದಲ್ಲಿ ನಾನು 'ನಾನಾ' ನನ್ನು ಮರೆಯುವಂತಿಲ್ಲ. ಆ ಗೆಳೆತನ ಬಹುಮುಖವಾಗಿ ನನ್ನನ್ನು ಪುಷ್ಟಿಗೊಳಿಸಿತು. ತರುವಾಯ ನಾನು ಪುಣೆಯ 'ಶಾರದಾಮಂಡಲದ ಗ್ರಂಥಾಲಯ'ವನ್ನು ಕಂಡು ಆಕರ್ಷಿತನಾದೆ. ಅದನ್ನು ಮಾರುತ್ತಾರೆಂದು ತಿಳಿದಾಗ ಇಡೀ ಭಂಡಾರವನ್ನೇ ಮನೆಗೆ ಬಿಜಯಂಗೈಸಿಕೊಂಡೆ. ಆಗಲೇ ಕವಿಯಾಗಿ ಬಿಡಬೇಕೆಂಬ ಹಂಬಲ

ಮೊಳಕೆಯೊಡೆಯ ತೊಡಗಿತು. ಅದನ್ನು ನನ್ನ ತಾಯಿ ಪೋಷಿಸಿದಳು, ಬೆಳೆಸಿದಳು. ಅವಳ ಸದ್ಬೋಧ ಚಂದ್ರಿಕೆ ನನ್ನನ್ನು ಕವಿಯಾಗಿಸಿತು; ನನ್ನಲ್ಲಿ ಕವಿವಾಣಿಯನ್ನು ಮೂಡಿಸಿತು. ಅವಳ ಎಚ್ಚರದ ದನಿ ಸದಾಕಾಲ ನನ್ನಲ್ಲಿ ಅನುರಣಿಸುತ್ತಿತ್ತು.

ಕವಿತೆ ಬರೆಯುವುದು ಕ್ರಮ ಕ್ರಮವಾಗಿ ನನಗೆ ಹುಚ್ಚಾಗಿ ಪರಿಣಮಿಸಿತು. ನಿರಂತರ ಹೃದಯ ಸಂವಾದ ನಡೆಯುತ್ತಲೇ ಇತ್ತು. ಅದು ಕ್ರಮ ಕ್ರಮವಾಗಿ ಕವಿತೆಯ ರೂಪವನ್ನು ತಾಳಿ, ಕೆಚ್ಚಾಗಿ ಮೆಚ್ಚಾಗಿ ಮೂಡಿಕೊಳ್ಳುತ್ತಿತ್ತು. ನನ್ನ ಮುಂದಿನ ದಿಕ್ಕು ಯಾವುದು, ನನ್ನ ಗುರಿಯಾವುದು, ನನ್ನ ಜೀವನದ ಆದರ್ಶಗಳೇನು ಎಂಬುದೆಲ್ಲಾ ಆ ಕವಿತೆಗಳ ಮೂಲಕವೇ ಹುರಿಗೊಳ್ಳುತ್ತಿದ್ದವು. ಉನ್ನತ ಜೀವನದ ಮೌಲ್ಯಗಳನ್ನು ಅಳವಡಿಸಿಕೊಂಡ ಅನೇಕ ಮಹಾನುಭಾವರು ನನ್ನ ಕಣ್ಣ ಮುಂದೆ ನಡೆದಾಡುತ್ತಿದ್ದರು. ಅವರಿಂದ ನಾನು ಪ್ರಭಾವಿತನಾದೆ. ನನ್ನ ಕಾವ್ಯಯಜ್ಞಕ್ಕೆ ಅವರ ನಡೆನುಡಿಗಳು ಜ್ವಲತೆಯನ್ನುಂಟುಮಾಡಿದವು.

ಕಾವ್ಯಾಗ್ನಿಕುಂಡದ ಜ್ವಾಲೆಯು ತನ್ನ ಏಳೂ ನಾಲಗೆಗಳನ್ನು ಚಾಚಿ ನನ್ನನ್ನು ಮೇಲಿಂದ ಮೇಲೆ ಎಚ್ಚರಿಸಿತು. ಏಳು ಏಳು ಎಂದು ಪದೇ ಪದೆ ಹೇಳಿತು. ಹೀಗೆಯೇ ಕುಳಿತರಾಗದು, ನಿಂತರಾಗದು ಕಾವ್ಯ ಪರ್ವತ ಶ್ರೇಣಿಗಳನ್ನು ಹತ್ತುಹತ್ತು ಎಂದು ಪ್ರೇರೇಪಿಸಿತು. 'ಹತ್ತು[1] ಪರ್ವತ ಶ್ರೇಣಿ ಹತ್ತೆಂದಿತು' ಅದಕ್ಕೆ ಪೋಷಕವಾಗುವಂತೆ ಮಹರ್ಷಿ ಅರವಿಂದರವಾಣಿ ನನ್ನ ಅಂತರಂಗವನ್ನು ತುಂಬಿಕೊಂಡಿತು. 'ಆರ್ಯ' ಪತ್ರಿಕೆಯ ಮೂಲಕ ಅವರ ದಿವ್ಯವಾಣಿ ಪ್ರಕಟಗೊಳ್ಳುತ್ತಿತ್ತು. ಅದರ ಶ್ರುತಿಯನ್ನೇ ನೀನು ಅನುಸರಿಸು ನಿನ್ನ ಹೃದಯ ವೀಣೆಯನ್ನು ಅದಕ್ಕೆ ತಕ್ಕಂತೆ ಶ್ರುತಿಗೊಳಿಸಿಕೊ ಎಂದು ನನಗೆ ಉಪದೇಶಿಸಿತು.

ನಾನು ಪುಣೆಯಲ್ಲಿದ್ದ ಕಾಲದಲ್ಲಿ ಸಮರ್ಥ ರಾಮದಾಸರ 'ದಾಸಬೋಧ'ದ ಗೀತೆಗಳು ನನ್ನ ಕವಿತೆಯನ್ನು ಮತ್ತಷ್ಟು ನಿಶಿತಗೊಳಿಸಿದವು. ಅಲ್ಲಿನ ವಿಚಾರಧಾರೆಯಿಂದ ನನ್ನ ಬುದ್ಧಿಗೆ ಸಾಣೆ ಹಿಡಿದ ಹಾಗಾಯಿತು. ಅಷ್ಟು ಮಾತ್ರವಲ್ಲದೆ ಎಮರ್ಸನ್ ಕವಿಯ ಮಾತುಗಳು ಅಂತರಾಳವನ್ನು ಹೊಕ್ಕು ದಿವ್ಯಪ್ರತಿಮೆಗಳನ್ನು ಕಡೆಯುತ್ತಿದ್ದುವು. ಇವುಗಳ ಜೊತೆಗೆ ಕೀಟ್ಸ್ ಕವಿಯ ಸೌಂದರ್ಯಸೂತ್ರವು ನನಗೆ ಮಾರ್ಗದರ್ಶನ ಮಾಡಿತು. ಎಲ್ಲಕ್ಕಿತ ಮಿಗಿಲಾಗಿ ಮಹಾಕವಿ ಕಾಳಿದಾಸನ ಕಾವ್ಯ ನಾಟಕಗಳ ಅಧ್ಯಯನವು ನವರಸಗಳ ಸಂಸ್ಕಾರದಲ್ಲಿ ನನ್ನನ್ನು ಅದ್ದಿ ತೆಗೆಯಿತು

**ಅಡಿ ಟಿಪ್ಪಣಿಗಳು**

೧. ಗೋಪು : ಹಲವು ಎಳೆಗಳನ್ನು ಕೂಡಿಸಿ ಹೆಣೆದ ದಾರ.

೨. ಅನು : ಸೊಗಸು, ಹದ, ಮನೋಹರತೆ.

ಅರವಿಂದರು ತಮ್ಮ ಆರ್ಯಪತ್ರಿಕೆಯಲ್ಲಿ ಸೌಂದರ್ಯಮೀಮಾಂಸೆಗೆ ಸಂಬಂಧಿಸಿದಂತೆ ಚತುರ್ಮುಖ ಸೌಂದರ್ಯದ ಕಲ್ಪನೆಯನ್ನು ಮಂಡಿಸಿದ್ದರು. ಬೇಂದ್ರೆಯವರು ಅದನ್ನೇ ಸ್ವೀಕರಿಸಿ ಪ್ರಾಯೋಗಿಕವಾಗಿ ತಮ್ಮ 'ಗರಿ' ಸಂಕಲನದ ಕವಿತೆಗಳಲ್ಲಿ ಪಡಿಮೂಡುವಂತೆ ಮಾಡಿದ್ದರು.

೩. ಹತ್ತು : ಈ ಸಂದರ್ಭದಲ್ಲಿ ಷಡಕ್ಷರದೇವನ ಪದ್ಯವೊಂದು ನೆನಪಿಗೆ ಬರುತ್ತದೆ.

'ಆರಾರೇರರ್ ಶಾಸ್ತ್ರ
ಶ್ರೀರೋಹಣ ಗಿರಿಯನಲ್ಲಿ ಕವಿತಾ ಚಿಂ ।
ತಾರತ್ನಂ ದೊರೆಗುಮೆ ಮಾ
ರಾರಿಯ ಕೃಪೆಯಿಲ್ಲದಂಗೆ ಧರಣೀ ತಳದೊಳ್' ॥

ಕಾವ್ಯರಚನೆ ಎಂಬುದು ಕಾವ್ಯಪರ್ವತವನ್ನು ಏರಿ ಚಿಂತಾಮಣಿ ಪಡೆದಂತೆ ಎಂಬ ಕಲ್ಪನೆ ವಿಶಿಷ್ಟವಾದುದು.

## ೧೨. ಹಗಲಿರುಳು ಕೋಗಿಲದನಿಯಾಗಿ ಕೂಗಿತ್ತೊ

ನಾನು ಬಿ.ಎ., ವಿದ್ಯಾಭ್ಯಾಸ ಮಾಡಲು ಪುಣ್ಯನಗರಿ ಪೂನಾದಲ್ಲಿದ್ದಾಗ ಅಲ್ಲಿ ಕಂಡ ವಿಸ್ಮಯಗಳು, ವೈಚಿತ್ರ್ಯಗಳು ಹೊಸ ಅನುಭವವಾಗಿ ಕುಣಿಯುವಂತೆ ಮಾಡಿದ್ದವು. ಓಹೋ, ಆಹಾ ಎನ್ನುವಷ್ಟರಲ್ಲೆ ವಿದ್ಯಾಭ್ಯಾಸವು ಮುಗಿದು ಪೂನಾನಗರಿಯ ವಾಸ, ಸಹವಾಸ ಮುಗಿದೇ ಹೋಯಿತು. ಧಾರವಾಡಕ್ಕೆ ಬಂದ ಮೇಲೆ ಇಲ್ಲಿಯದೇ ಧ್ಯಾನ, ಕನ್ನಡದ್ದೇ ಧ್ಯಾನ. ಕನ್ನಡ ಭಾಷೆಯ ಸೊಗಸು ವೈವಿಧ್ಯಗಳನ್ನು ಕ್ರಮಕ್ರಮವಾಗಿ ಅಧ್ಯಯನ ಮಾಡಿದೆ. ಪ್ರಾಚೀನ ಕವಿವಾಣಿಯಲ್ಲಿ ಅದೆಲ್ಲವೂ ತೆರೆದುಕೊಂಡಿತು. ಆ ಅಧ್ಯಯನವು ನನ್ನ ದಿನನಿತ್ಯದ ಮನೆಮಾತಿಗೂ ಹೊಸ ಕಾಂತಿಯನ್ನು ತಂದುಕೊಟ್ಟಿತು.

ಕಾವ್ಯಾಧ್ಯಯನದ ಈ ಅವಧಿಯಲ್ಲಿಯೇ ಬದುಕಿಗೊಂದು ಆಸರೆ ಬೇಕಾಯಿತು. ವೃತ್ತಿಯಾವುದು? ಎಂದು ಚಿಂತಿಸುತ್ತಿರುವಾಗ ಅದು ನನ್ನ ಪ್ರವೃತ್ತಿಗೆ ಹೊಂದಿಕೆಯಾಗುವಂತೆ ಇರಬೇಕಾಗಿತ್ತು. ಶಾಲೆಯಲ್ಲಿ ಉಪಾಧ್ಯಾಯನಾಗಬೇಕು, ವಿದ್ಯಾರ್ಥಿಗಳ ಗುಂಪಿನ ಮಧ್ಯೆ ನಾನಿರಬೇಕು. ವಿದ್ಯಾರ್ಥಿ ಮಾಲೆಯ ಕುಸುಮದಲ್ಲಿ ನಾನು ಒಂದಾಗಬೇಕು. ಆ ಎಳೆಯ ಜೀವಗಳ ಸಮುದಾಯದಲ್ಲಿ ಸುಳಿದಾಡಬೇಕು ಎಂಬೆಲ್ಲ ಅಶೋತ್ತರಗಳು ನನ್ನಲ್ಲಿ ಹುಟ್ಟಿಕೊಂಡವು. ಈ ಆಸೆ, ಈ ಬಯಕೆ ಈ ಜನ್ಮದ್ದಲ್ಲ ಜನ್ಮ ಜನ್ಮದಿಂದ ಅಂಟಿಕೊಂಡು ಬಂದ ಭಾವ, ಬದುಕಿನ ಜೀವಸ್ವರ ಎಂದೆನಿಸಿತು ನನಗೆ.

ಕಾವ್ಯರಚನೆಯ ತವಕ ಸದಾಕಾಲ ನನ್ನನ್ನು ಕಾಡುತಿತ್ತು. ನನ್ನ ಕಾವ್ಯ ಕೋಗಿಲೆ[೧] ಹಗಲೆನ್ನದೆ ಇರುಳೆನ್ನದೆ ಕುಹೂ, ಕುಹೂ ಎಂಬ ಮಂತ್ರವೊಂದನ್ನು ಹಾಡುತ್ತಲೇ ಇತ್ತು. ಅದು ನನ್ನ ಕಾವ್ಯರಚನೆಯ ಮಂತ್ರವೇ ಆಗಿತ್ತು. ಧಾರವಾಡದ ಹಳ್ಳಕೊಳ್ಳಗಳ ನೆನಪು ಮನೋಮಂದಿರದಲ್ಲಿ ಸುಳಿದು ಹೋಗುತ್ತಿತ್ತು. ಧಾರವಾಡದ ಹಳ್ಳಕೊಳ್ಳ ನೆನಪಾದ[೨] ಸೋಮೇಶ್ವರದೇವರ ಗುಡಿಗೆ

ಹೋಗುವ ಮಾರ್ಗದ ನೆನಪಾದರೆ ಸಾಕು, ಅದು ನನ್ನಲ್ಲಿ ದಿವ್ಯಾನುಭಾವಗಳನ್ನು ಜಾಗೃತಗೊಳಿಸುತ್ತಿತ್ತು. ನನಗೆ ಯಾವುದೋ ಭ್ರಮೆ ಹಿಡಿದಿದೆಯೆ? ಎಂದು ನನ್ನನ್ನೇ ನಾನು ಪ್ರಶ್ನಿಸಿಕೊಳ್ಳುವಾಗ ಮರುಕ್ಷಣವೆ ಹೌದು ಕಾವ್ಯದ ಭ್ರಮೆ, ಕವಿತೆಯ ಭ್ರಮೆ ಎಂಬ ಉತ್ತರ ಸಿಕ್ಕುತ್ತಿತ್ತು.

ದತ್ತಾತ್ರೇಯ ದೇವರೆಂದರೆ ನನಗೆ ಪರಮ ಪ್ರೀತಿ. ಧಾರವಾಡದ ಹಾಲಗೇರಿಯಲ್ಲಿದ್ದ ದತ್ತ ದೇವಾಲಯವನ್ನು ನಾನು ಸದಾಕಾಲ ಸಂದರ್ಶಿಸುತ್ತಿದ್ದೆ. ಆ ದೇವನಿಗೆ ಮಾಡಿದ ಪ್ರದಕ್ಷಿಣೆಗಳು ಲೆಕ್ಕವಿಲ್ಲ. ಆ ಹೊತ್ತಿನಲ್ಲಿ ನನ್ನ ಚಿತ್ತವು ದಿವ್ಯಭಾವಗಳಲ್ಲಿ ಮುಳುಗಿ ಹೋಗುತ್ತಿತ್ತು. ದಿವ್ಯಭಾವಗಳೇ ನೆನಪಿಗೆ ಬರುತ್ತಿದ್ದವು. ಅಲ್ಲಿಂದ ಬಂದ ಮೇಲೆ ಮತ್ತೆ ಲೌಕಿಕ ಭಾವಗಳತ್ತ ಮನಸ್ಸು ಸಹಜವಾಗಿಯೇ ಹರಿಯುತ್ತಿತ್ತು. ಕಾಮನಕಟ್ಟೆಯ ದೃಶ್ಯಾವಳಿಗಳು ಸುಳಿದು ಹೋಗುತ್ತಿದ್ದವು. ಆ ಪರಿಸರದ ಹುಣಸೆಮರಗಳನ್ನು ಏರುತ್ತ ಇಳಿಯುತ್ತ ಈ ಮರ್ಕಟ ಚಿತ್ತ ಏನೇನೋ ಭಾವನೆಗಳ ಸುಳಿಯಲ್ಲಿ ಸಿಲುಕಿಕೊಳ್ಳುತ್ತಿತ್ತು. ಅವೆಲ್ಲ ಈ ಜನ್ಮದ ಸಂಗತಿಗಳೊ, ಜನ್ಮಜನ್ಮಾಂತರದ ಸಂಗತಿಗಳೊ ಎನ್ನುವ ಭ್ರಾಂತಿ ಮೂಡುತ್ತಿತ್ತು.

ಪುಣೆಯಿಂದ ನಾನು ಧಾರವಾಡಕ್ಕೆ ಬಂದದ್ದು ಹೆಣ್ಣು ಮಗಳೊಬ್ಬಳು ತನ್ನ ತವರು ಮನೆಗೆ ಬಂದರೆ ಹೇಗೋ ಹಾಗೆ; ಆ ಬಗೆಯ ಆನಂದವನ್ನು ತಂದು ಕೊಟ್ಟಿತು. 'ವಿದ್ಯಾರ್ಥಿ ವೃಂದದ ಮಾಲೆಯಲ್ಲಿರಬೇಕು' ಎಂದು ನಾನು ಆಸೆಪಟ್ಟಂತೆಯೇ ಆಯಿತು. ಸಿಗುತ್ತಿದ್ದ ಸಂಬಳವೇನೂ ಹೆಚ್ಚಾಗಿರಲಿಲ್ಲ. ಯಾವುದೋ ಚಳುವಳಿಗೆ ಧುಮುಕಿದಂತೆ ಲಾಭ ನಷ್ಟಗಳನ್ನು ಲೆಕ್ಕಿಸದೆ ನಾನು ಶಾಲಾ ಮಾಸ್ತರಿಕೆಗೆ ಧುಮುಕಿದೆ. ಆದರೆ ನಾನೆಂದೂ ಬಡತನದ ನೋವನ್ನು ಅನುಭವಿಸಲಿಲ್ಲ. ನಾನು ರಚಿಸುತ್ತಿದ್ದ ಕವನಗಳ ಕಂಪು ಆ ಬಡತನದ ಮೇಲೆ ವಿಜಯ ಸಾಧಿಸಿತು. ಹೊಸ ಕವನಗಳನ್ನು ಕಟ್ಟುತ್ತಲೇ ಹೋದೆ. ಅವುಗಳನ್ನು ನಾನೇ ಹೊಸ ಹೊಸ ರಾಗ ಭಾವಗಳಲ್ಲಿ ಹಾಡುತ್ತಾ ಹೋದೆ. ತನ್ಮೂಲಕ ನವೋದಯ ಕಾವ್ಯಸೌಧಕ್ಕೆ ತಕ್ಕ ತಳಪಾಯವನ್ನು ಹಾಕಿದವರಲ್ಲಿ ನಾನೂ ಒಬ್ಬನಾದೆ.

ಕವಿಯಾಗಿ ಬೆಳೆಯುತ್ತಿದ್ದಾಗಲೇ ನನ್ನ ಕಾವ್ಯಮಾರ್ಗವನ್ನು ಪ್ರಶಸ್ತಗೊಳಿಸಿಕೊಳ್ಳಬೇಕಾಗಿತ್ತು. ಅದಕ್ಕಾಗಿ ಸಾಕಷ್ಟು ಕಾವ್ಯಾಧ್ಯಯನ ಮಾಡಿದೆ. ಶಾಂತಕವಿ ಸಕ್ಕರಿ ಯುವರ ಕವಿತೆಗಳನ್ನು ಓದಿದೆ; ಕಾವ್ಯಾನಂದರ ಕಾವ್ಯರಸಧಾರೆಯಲ್ಲಿ ಮಿಂದು ಮುಳುಗಿದೆ. ನನ್ನ ಮಾರ್ಗ ಎಲ್ಲಿರಬಹುದು ಎಂದು ಲಾವಣಿಗಳ ಲೋಕದಲ್ಲಿ ಹರಿದಾಡಿದೆ. ಸಾಂಗತ್ಯಕಾವ್ಯಗಳ ಸಾಗರದಲ್ಲಿ ತೇಲಾಡಿದೆ. ಅಷ್ಟಕ್ಕೇ ತೃಪ್ತನಾಗದೆ ಜನಪದ ಕೋಲು ಪದಗಳನ್ನು ಹಾಡಿಸಿ ಸಂತೋಷಪಟ್ಟೆ. ನಾನು ಏನೆಲ್ಲ ಮಾಡಿದರೂ ಅದು ನನ್ನ ತಾಯಿಗೆ ಪ್ರಿಯವಾಗಬೇಕು, ನಾನು ಅವಳ ನಂಬಿಕೆಗೆ ಪಾತ್ರನಾಗಬೇಕು ಎಂದು ಹಂಬಲಿಸಿದೆ. ಅವಳು ನನ್ನ ಕವಿತೆಗಳನ್ನು ಮೆಚ್ಚಿದರೆ ಮುಂದೆ ಲೋಕವೂ ಖಂಡಿತವಾಗಿ ಮೆಚ್ಚುತ್ತದೆ-ಎಂಬ ವಿಶ್ವಾಸಕ್ಕೆ ನಾನು ಬದ್ಧನಾದೆ. ಅದಕ್ಕಾಗಿ

ನಾನು ಬರೆದ ಕವಿತೆಗಳನ್ನು ಅವಳ ಮುಂದೆ ಓದಿ; ಅದು ಸರಿಯಾಗಿ ಮೂಡಿ ಬಂದಿತೆ ಎಂದು ಮೇಲಿಂದ ಮೇಲೆ ಕೇಳಿ ಕೇಳಿ ಅವಳ ಅನುಮೋದನೆ ಪಡೆದುಕೊಳ್ಳುತ್ತಿದ್ದೆ.

**ಅಡಿ ಟಿಪ್ಪಣಿಗಳು**

೧. 'ಕೋಗಿಲೆ' ಎಂಬುದು ಬೇಂದ್ರೆಯವರ ಕಾವ್ಯರಚನೆಯ ರೂಪಕಗಳಲ್ಲೊಂದು. ಜೋಗಿ ಕವಿತೆಯಲ್ಲಿಯೂ ಅವರು ಕೋಗಿಲೆಯನ್ನು ಉಲ್ಲೇಖಿಸುತ್ತ ಅದು ನನಗೆ ಆಧ್ಯಾತ್ಮದ ದಾರಿ ತೋರಿಸಿದೆ ಎಂದಿದ್ದಾರೆ. ನಿಜಗುಣ ಶಿವಯೋಗಿಗಳ ಗೀತೆಯಲ್ಲಿಯೂ, ಕೋಗಿಲೆಯ ರೂಪಕ ಬಂದಿದೆ. ಬೇಂದ್ರೆಯವರೇ 'ಕೋಗಿಲೆ' ಎಂಬ ತಮ್ಮ ಕವಿತೆಯ ಆದಿಯಲ್ಲಿ 'ಕೋಗಿಲೇ, ಚೆಲ್ವಕೋಗಿಲೇ / ಮುದ್ದು ಕೋಗಿಲೇ ಜಾಣಕೋಗಿಲೇ' ಎಂಬ ಪಾದಗಳನ್ನು ಉದ್ಧರಿಸಿ ತಮ್ಮ ರಚನೆಗೆ ತೊಡಗಿದ್ದಾರೆ. ನಿಜಗುಣರ ಆ ಭಾವಕ್ಕೆ ಬೇಂದ್ರೆಯವರು ಸ್ಪಂದಿಸಿರುವುದು ಇಲ್ಲಿ ಎದ್ದುಕಾಣುತ್ತದೆ.

೨. ನೆನಪು + ಅದ = ನೆನಪದ > ನೆನಪಾದ.

೩. ಶಾಂತಕವಿ ಸಕ್ಕರಿ (೧೮೫೬ - ೧೯೨೦) ಎಂದರೆ ಬಾಳಾಚಾರ್ಯ ಗೋಪಾಳಾಚಾರ್ಯ ಸಕ್ಕರಿಯವರು. ಅವರು ಮೂಲತಃ ಅಧ್ಯಾಪಕರು. ಅವರು ಅಂದಿನ ಸುಪ್ರಸಿದ್ಧ ಕೀರ್ತನಕಾರರು, ಕವಿಗಳು, ನಾಟಕಕಾರರು ಆಗಿದ್ದರು. ಮರಾಠಿ ಪರಿಸರವಿದ್ದಲ್ಲಿ ಕನ್ನಡದ ಜಾಗೃತಿಯನ್ನುಂಟು ಮಾಡಿದ ಮಹಾಪುರುಷರಲ್ಲಿ ಅವರೊಬ್ಬರು. ರಾಷ್ಟ್ರೀಯತ್ವವೇ ಯುಗಧರ್ಮ ಎಂದು ಸಾರಿದ್ದು, ಆ ದಿಶೆಯಲ್ಲಿ ದುಡಿದಿದ್ದು ಶಾಂತಕವಿಗಳ ಹಿರಿಮೆ.

೪. ಕಾವ್ಯಾನಂದ ಪುಣೇಕರ (೧೮೭೦ - ೧೯೨೦) ಎಂದರೆ ನರಸಿಂಹಾಚಾರ್ಯ ಭೀಮಾಚಾರ್ಯ ಕಿತ್ತೂರ. ಅವರು ಶ್ರೇಷ್ಠ ಅಧ್ಯಾಪಕರು, ಕವಿಗಳು, ರಾಷ್ಟ್ರೀಯ ಭಾವಗಳಿಂದ ತುಂಬಿ ತುಳುಕುತ್ತಿದ್ದ ಪುಣ್ಯಪುರುಷರೂ ಆಗಿದ್ದರು. ಧಾರವಾಡದ ವಿಕ್ಟೋರಿಯಾ ಪ್ರೌಢಶಾಲೆ ಮತ್ತು ರಾಷ್ಟ್ರೀಯ ಶಾಲೆಗಳಲ್ಲಿ ಅಧ್ಯಾಪಕರಾಗಿ ಹಲವು ವರ್ಷಗಳ ಕಾಲ ಕೆಲಸ ಮಾಡಿದ್ದರು.

(ಆಧಾರ : ಕರ್ನಾಟಕ - ಕನ್ನಡ ವಿಷಯಕೋಶ. ಮೈಸೂರು ವಿ.ವಿ. ೧೯೭೯)

## ೧೩. ಮಾತಾ-ಸೂತ್ರವು ನನ್ನ ಪೋಣಿಸಿತು

ಕವಿತೆಯ ರಚನೆಯಲ್ಲಿ ನನ್ನ ತಾಯಿ ಮಾರ್ಗದರ್ಶನ ಮಾಡುತ್ತಲೇ ಇದ್ದಳು. ಕವಿತೆಯೆಂದರೆ ಅದು ದೈವಿಭಾವನೆಗಳಿಂದ ತುಂಬಿ ತುಳುಕುತ್ತಿರಬೇಕು, ಲೋಕದ ಕ್ಷುಲ್ಲಕ ವಸ್ತುಗಳನ್ನು ಕೈಗೆತ್ತಿಕೊಂಡು ಕವಿತೆ ಬರೆದರೆ ಅದೆಲ್ಲ ಗುಬ್ಬಿ ಕಾಗೆಯ ಪದ್ಯವಾಗುತ್ತದೆ ಎಂದು ಅವಳು ಹೇಳುತ್ತಿದ್ದಳು. ಆಗ ನಾನು 'ಈ ಕವಿತೆಯನ್ನು ಕೇಳು, ಹೇಗಿದೆ ಹೇಳು' ಎಂದು ಅವಳ ಮುಂದೆ ವಾಚಿಸಿದರೆ ಅವಳು ಸಂಭ್ರಮ ಭರಿತಳಾಗುತ್ತಿದ್ದಳು; ಉತ್ಸಾಹಶೀಲೆಯಾಗುತ್ತಿದ್ದಳು. ನಿನ್ನ ಕವಿತೆಗಳನ್ನು ನಾನು ಮೆಚ್ಚಿಕೊಂಡಿದ್ದೇನೆ ಎಂದು ಅವಳು ಹೇಳುತ್ತಿದ್ದಾಳೊ ಎಂಬಂತೆ ಅವಳ ಮುಖಭಾವನೆಗಳು ತೋರುತಿದ್ದವು.

ನಾನೊಮ್ಮೆ ನನ್ನ ತಾಯಿಗೆ ರಾಜಕುಮಾರಿ ಕೃಷ್ಣಾಕುಮಾರಿಯ ಕರುಣಕಥೆಯನ್ನು ಹೇಳಿದೆ. ಅದನ್ನು ಕೇಳಿ ಅವಳ ಮನಸ್ಸು ಮರುಗಿತು. ಈ ವಸ್ತು ತಾಯಿಗೆ ಹಿಡಿಸಿದೆ ಎಂದೆನಿಸಿದೊಡನೆಯೆ

ಅದನ್ನೊಂದು ಕವನವಾಗಿ ಕಟ್ಟಿದೆ. ಅದನ್ನು ಕೇಳಿದ ಮೇಲಂತೂ ತಾಯಿಯ ಸಂತೋಷಕ್ಕೆ ಪಾರವಿಲ್ಲದಂತಾಯಿತು. ದಿನ ದಿನವೂ ಹೀಗೆ ಕವನ ಕಟ್ಟುವುದು, ಅದನ್ನು ಹಾಡುವುದು ನಡದೇ ಇತ್ತು. ಅವಳ ಅನುಮೋದನೆ ಪಡೆಯುವುದು ನಡದೇ ಇತ್ತು. ಈಗ ಅದನ್ನೆಲ್ಲಾ ನೆನೆದರೆ ಏನು ಅಂದಿನ ಹುಡುಗಾಟ ಎಂದೆನಿಸದೆ ಇರುವುದಿಲ್ಲ.

ನನ್ನ ತಾಯಿ ಭಕ್ತಿಮಾರ್ಗದ ಸಾಧಕಿಯಾಗಿದ್ದಳು ; ಆಧ್ಯಾತ್ಮಮಾರ್ಗದ ಅನ್ವೇಷಕಿಯಾಗಿದ್ದಳು. ಅದಕ್ಕೆಂದೇ ದಾಸವರೇಣ್ಯರ ಕೀರ್ತನೆಗಳನ್ನು ಭಕ್ತಿ ಭಾವದಿಂದ ಹಾಡುತ್ತಿದ್ದಳು. ಬಹುಬಗೆಯ ಪುರಾಣಗಳನ್ನು ಓದುತ್ತಿದ್ದಳು. ಶ್ರೀ ಕೃಷ್ಣ ಪಾರಿಜಾತ ಹಾಡುಗಳನ್ನಂತೂ ಹಗಲಿರುಳು ಹಾಡುತ್ತಿದ್ದಳು. ಅವಳ ಜಪ ತಪಗಳೇನು, ಭಜನೆ ಕೀರ್ತನೆಗಳೇನು, ಸಾಧುಸಂತರ ಕಥೆಗಳನ್ನು ಆಸ್ವಾದಿಸುವುದೇನು - ಅವಳ ಈ ಸಾಧನಾಮಾರ್ಗ ನನ್ನ ಕಾವ್ಯಮಾರ್ಗವನ್ನು ಪ್ರಶಸ್ತಗೊಳಿಸಿತು.

ನಮ್ಮ ಪರಿಸರದಲ್ಲಿ ನಡೆಯುತ್ತಿದ್ದ ಗ್ರಾಮೀಣ ಜಾತ್ರೆಗಳಿಗೆ ನಾನು ಆಗಾಗ ಹೋಗುತ್ತಿದ್ದೆ. ಅಂತೆಯೇ ಪುಣ್ಯಕ್ಷೇತ್ರಗಳ ದರ್ಶನವನ್ನೂ ಮಾಡುತ್ತಿದ್ದೆ. ಇವುಗಳ ನಡುವೆ ನನ್ನ ತಾಯಿ ಮಾಡುತ್ತಿದ್ದ ಸಾಧನಾಮಾರ್ಗದಲ್ಲೂ ಆಸಕ್ತನಾಗಿರುತ್ತಿದ್ದೆ. ಈ ಮೂರು ಸಂಗತಿಗಳು ನನ್ನನ್ನು ಏಕಸೂತ್ರದಲ್ಲಿ ಪೋಣಿಸಿದವು. ರವೀಂದ್ರನಾಥ ಠಾಕೂರರ ಶಿಶುಗೀತೆಗಳನ್ನು ಮೇಲಿಂದ ಮೇಲೆ ಓದಿದೆ. ಅವರು ಬರೆದ ಕಥೆಗಳು ನನಗೆ ಕುತೂಹಲ ಹುಟ್ಟಿಸಿದುವು. ಅವೆಲ್ಲವೂ ಮಂತ್ರವೆಂಬಂತೆ ನನ್ನಲ್ಲಿ ನೆಲೆಗೊಂಡವು. ಮಂತ್ರ ಹೇಳಿ ಮುಗಿಸುವಷ್ಟರಲ್ಲಿ ನಾನು ಕವಿಯಾಗಿ ಬಿಟ್ಟೆ ಎಂಬಂತೆ ನನ್ನಲ್ಲಿ ಆತ್ಮವಿಶ್ವಾಸದ ಉದಯವಾಯಿತು. ಇದೆಲ್ಲ ಇಂದ್ರ ಜಾಲವೊ, ಮಹೇಂದ್ರ ಜಾಲವೊ ಎಂಬಂತೆ ನಡೆದು ಹೋಯಿತು.

ಕಾವ್ಯರಚನೆಯಲ್ಲಿ ತೊಡಗಿರುವಾಗಲೇ ಕವಿನಾಮವೊಂದು ನಾಲಗೆಯ ಚಕ್ರವನ್ನೇರಿತು; ಏನೋ ಕಾಣಿಸಿದಂತಾಯಿತು,. ಏನೋ ಕೇಳಿಸಿದಂತಾಯಿತು. ಒಳ ಗಿವಿಗೆ ಯಾವುದೊ ಮಂತ್ರೋಪದೇಶವಾದಂತಾಯಿತು. ಇದಾವ ಕವಿನಾಮ ಎಂದು ಹುಡುಕಾಡುವಷ್ಟರಲ್ಲಿಯೆ ಓಹೋ ಇದು 'ಅಂಬಿಕಾತನಯ'ನೆಂಬ ಕವಿನಾಮ, ಕಾವ್ಯನಾಮ ಎಂಬುದು ಹೊಳೆಯಿತು. ಅದರ ಮೇಲೆ ಮುಚ್ಚಿರುವ ಮುಸುಕನ್ನು ಸರಿಸಿದರೆ ಸಾಕು ಎಂದು ಬೋಧವಾಯಿತು. ಆಗ ಒಳಕವಿಯು 'ಅಂಬಿಕಾತನಯ'ನಾಗಿ ಜಾಗೃತಗೊಂಡನು. ಕಾವ್ಯರಚನಯೇ ಅವನ ಕರ್ಮವಾಯಿತು.

ನನ್ನ ತಾಯಿಯ ವಾತ್ಸಲ್ಯಪಾಕದಲ್ಲಿ ನಾನು ಮೇಲೆ ಬಂದೆ. ಅದರೊಂದಿಗೆ ಗೆಳೆಯರ ಗುಂಪಿನ ಸ್ನೇಹಶಕ್ತಿಯೂ ಕೂಡಿಕೊಂಡಿತು. ಆ ಪಾಕ ಈ ಶಾಕಗಳ ಅನ್ಯೋನ್ಯತೆಯಿಂದ ಬದುಕಿಗೆ ವಿಶೇಷವಾದ ರುಚಿ ಕೂಡಿಕೊಂಡಿತು. ಸಂಬಳ ಚಿಕ್ಕದಾದರೇನು ಉದಾರಿಯಾದ ಚಿಕ್ಕಪ್ಪನ ಆಸರೆ ನನಗಷ್ಟು ಲಭಿಸಿತು. ತತ್ಫಲವಾಗಿ ಕೌಟುಂಬಿಕ ವ್ಯವಹಾರಗಳು ಸಾಮಾನ್ಯವೇ ಆದರೂ ನಿರ್ವಿಘ್ನವಾಗಿ ಸಾಗಿದುವು.

## ೧೪. ಗೀತಗೋವಿಂದವ ಹಾಡಿ ಹುಚ್ಚಾದೆನು

ಕವಿತೆಗಳನ್ನು ಬರೆಯುವುದು, ಅವುಗಳನ್ನು ವಿವಿಧ ರಾಗಭಾವಗಳಲ್ಲಿ ಹಾಡುವುದು ನನ್ನ ಜೀವನದ ಉಸಿರಾಯಿತು. ಹಾಡದೆ ಇರಲಾರೆ ಎನ್ನುವಂತಹ ತೀವ್ರತೆ ನನಗುಂಟಾಯಿತು. ಹಡಗಿಗೆ ಹಾಯಿ ಹೇಗೋ, ಆಗಸದ ಗಾಳಿಗೆ ಗಾಳಿಪಟ ಹೇಗೊ ಹಾಗೆಯೇ ನಾನು ನನ್ನ ಕವಿತೆಗಳ ಮೂಲಕ ಕನ್ನಡಾಂಬೆಯ ವಿಜಯ ಪತಾಕೆಯನ್ನು ಏರಿಸಿದೆ. ದತ್ತೂರಿ ಶಿವನಿಗೆ ಪ್ರಿಯವಾದ ಕುಸುಮ. ಅಂತೆಯೆ ಕನ್ನಡದ ಹಿರಿಮೆಯನ್ನು ಮೊಳಗಿಸಲು ನನ್ನ ಕವಿತೆಗಳೇ ವಿಜಯ ದುಂದುಭಿಯಾಯಿತು. ಆ ಕವಿತೆಗಳಲ್ಲಿ ನಾನು ಅಚ್ಚಗನ್ನಡ ಕಸ್ತೂರಿಯ ಕಂಪನ್ನು ಬೆರೆಸಿಬಿಟ್ಟೆ.

ನನ್ನ ಕವಿತಾರಚನೆಯ ಹಿನ್ನೆಲೆಯಲ್ಲಿ ಸದಾಕಾಲ ನನ್ನ ತಾಯಿ ಇದ್ದೇ ಇರುತ್ತಿದ್ದಳು. ನಾನು ಕವಿತೆಯನ್ನು ರಚಿಸಬೇಕು; ಅದರ ಮೂಲಕವೇ ನನ್ನ ತಾಯಿಯನ್ನು ಮೆಚ್ಚಿಸಬೇಕು, ಅವಳಿಗೆ ಸಂತೋಷವನ್ನುಂಟು ಮಾಡಬೇಕು ಎಂಬ ದ್ವಿಮುಖ ಉದ್ದೇಶ ನನ್ನದಾಗಿತ್ತು. ಸಂಸ್ಕೃತಕವಿ ಜಯದೇವನ ಗೀತಗೋವಿಂದವನ್ನು ಹಾಡಿ ಅದರ ನಾದಮಾಧುರ್ಯಕ್ಕೆ, ಕಾವ್ಯಸೌಂದರ್ಯಕ್ಕೆ ನಾನು ಹುಚ್ಚನೇ ಆಗಿ ಬಿಟ್ಟೆ. ವಿವಿಧ ದೇವತೆಗಳನ್ನು ಕುರಿತ ಶಂಕರಾಚಾರ್ಯರ ಭಕ್ತಿಮಯವಾದ ಸ್ತೋತ್ರಗಳು ಕೂಡ ನನ್ನನ್ನು ಮರುಳು ಮಾಡಿದವು, ಜಗನ್ನಾಥಪಂಡಿತನ ಗಂಗಾಲಹರಿ ಕೂಡ ನನಗೆ ಮೆಚ್ಚಿಗೆಯಾಯಿತು. ಅವುಗಳಿಗೆ ನನ್ನದೇ ರಾಗಗಳನ್ನು ಜೋಡಿಸಿ, ಹಾಡಿ ಪಾಡಿ ತಾಯಿಗೆ ಸಂತೋಷವನ್ನುಂಟು ಮಾಡುತ್ತಿದ್ದೆ. ಈ ಮಹಾಕವಿಗಳ ಕಾವ್ಯಗಳಿಂದ ಪ್ರಭಾವಿತನಾಗಿ ನಾನು ರಚಿಸಬೇಕಾದ ಕವಿತೆಗಳ ಚಿಂತನಾಂಶಗಳನ್ನು ಪರಿಷ್ಕರಿಸಿಕೊಂಡೆ.

ನಾನು ನನ್ನ ಕಾವ್ಯಜಗತ್ತನ್ನು ಸಮೃದ್ಧಗೊಳಿಸಿಕೊಳ್ಳಲು ಬಹುಮುಖವಾಗಿ ಓದಿದೆ. ಸಮಕಾಲೀನವಾಗಿ ಆಕರ್ಷಣೆಯನ್ನೊಡ್ಡುತ್ತಿದ್ದ ರಸಮಯ ಕಥಾಲೋಕವನ್ನು ಸೂರೆಮಾಡಿದೆ. ಮೂಕ ಪಂಚಾಶತಿಯನ್ನು ಓದಿದೆ. ಕ್ಷೇಮೇಂದ್ರನ ಕಥೆಯನ್ನು ಮನನ ಮಾಡಿಕೊಂಡೆ. ಆಗತಾನೆ ಬಳ್ಳಾರಿಯ ಮುದ್ರಣಾಲಯದಿಂದ ಪ್ರಕಟವಾಗಿದ್ದ ಶುಕಸಪ್ತತಿ ಕಥೆಯನ್ನು ಕುತೂಹಲದಿಂದ ಓದಿದೆ. ಅಂತೆಯೆ ಬತ್ತೀಸ ಪುತ್ಥಳಿ ಕಥೆಗಳು, ಅಕ್ಬರ್ ಬೀರಬಲರ ಜಾಣಕಥೆಗಳು ನನ್ನನ್ನು ಆಕರ್ಷಿಸಿದುವು. ಬರ್ತೊಲ್ಡನ ಬಾಲೋಪಯೋಗಿಯಾದ ಸರಸಕವಿತೆಗಳೂ ನನ್ನನ್ನು ಆಕರ್ಷಿಸದಿರಲಿಲ್ಲ.

ಕಥಾಸಾಹಿತ್ಯದ ಜಗತ್ತು ಬಹಳ ವಿಸ್ತಾರವಾಗಿತ್ತು. ರಾಜ ಮಹಾರಾಜರ ಕಥೆಗಳೇನು, ಕಳ್ಳಸುಳ್ಳರ ಕಥೆಗಳೇನು, ಸತ್ಪುರುಷರ ನೀತಿ ಕಥೆಗಳೇನು, ಅಚ್ಚಗನ್ನಡದ ಸೊಗಸನ್ನು ಬೀರುತ್ತಿದ್ದ ಅವುಗಳ ಭಾಷೆ ಶೈಲಿಗಳೇನು-ಅದೆಲ್ಲವನ್ನು ನಾನು ಓದಿ ಮುಗಿಸಿದೆ. ಡೊಳ್ಳಿನ ಪದಗಳ ಕಥೆಯನ್ನೂ ನಾನು ಬಿಡಲಿಲ್ಲ. ಅವುಗಳಲ್ಲಿ ಪ್ರತಿಪಾದಿತವಾಗಿದ್ದ ಜಗತ್ತಿನ ಅಶಾಶ್ವತತೆಯ

ಚಿತ್ರವೂ ನನ್ನ ಮನಸ್ಸನ್ನು ಹೊಕ್ಕಿತು. ಯಲ್ಲಮ್ಮನ ಭಕ್ತರಾದ ಚೌಡಿಕೆಯವರು ಅರಿಷಿನವನ್ನು ಚಿಮ್ಮುತ್ತ ವಿಶೇಷವಾದ ಗತ್ತಿನಲ್ಲಿ ಮೈಮರೆತು ಕುಣಿಯುತ್ತ ಹಾಡುವಾಗ ನಾನಾದರೋ ಕುಣಿಯದಿರುವುದು ಹೇಗೆ ಸಾಧ್ಯ. ಇವೆಲ್ಲವೂ ನನ್ನ ಕವಿತೆಗೆ ವಿವಿಧತೆಯನ್ನು ವಿಶೇಷವಾದ ವ್ಯಾಪ್ತಿಯನ್ನು ತಂದುಕೊಟ್ಟವು.

ಗೊಂದಲಿಗರೆಂಬ ವೃತ್ತಿ ಗಾಯಕರು ಸಂಬಾಳವೆಂಬ ವಾದ್ಯವನ್ನು ಮಿಡಿಯುತ್ತ ಜಗದಂಬೆಯ ವಿಶೇಷಗಳನ್ನು ಕೊಂಡಾಡಿ ಹಾಡುತ್ತಿದ್ದರು. ಅವರು ನನ್ನೆದುರು ಬಂದರೆಂದರೆ ನಾನು ಸಿಡಿಮಿಡಿಗೊಳ್ಳುತ್ತಿರಲಿಲ್ಲ. ಪ್ರೀತಿಯಿಂದ ಬರಮಾಡಿಕೊಳ್ಳುತ್ತಿದ್ದೆ. ಅವರೂ ನನ್ನ ಹಾಗೆಯೇ ಎಂದು ಅವರನ್ನು ಅಂತಃಕರಣ ಪೂರ್ವಕವಾಗಿ ಪ್ರೀತಿಸುತ್ತಿದ್ದೆ. ಕಾವ್ಯಜಗತ್ತಿನಲ್ಲಿ ನಾನು ಹುಚ್ಚನಾಗಿದ್ದೇನೆ; ನನ್ನ ಹಾಗೆಯೇ ಅವರು ಭಕ್ತಿ ಲೋಕದ ಹುಚ್ಚರಾಗಿದ್ದಾರೆ ಎಂದು ಭಾವಿಸುತ್ತಿದ್ದೆ. ಕಾವ್ಯಬರೆಯುವಾಗ ನಾನು ಮೈದುಂಬಿಕೊಂಡರೆ ಅವರು ಹಾಡಿಕುಣಿಯುವಾಗ ಮೈದುಂಬುತ್ತಿದ್ದರು. ಈ ಮೂಲಕ ಮೈದುಂಬುವುದರಲ್ಲಿಯೂ, ಆವೇಶಗೊಳ್ಳುವುದರಲ್ಲಿಯೂ ಒಂದು ಸಾರ್ಥಕತೆಯಿದೆ ಎಂಬ ನಂಬಿಕೆ ನನಗೆ ಉಂಟಾಯಿತು.

ಜಯದೇವನ ಗೀತಗೋವಿಂದಾದಿ ಕಾವ್ಯಗಳು, ರಾಜಕಥೆಗಳು, ಗೊಂದಲಿಗರ ಗೀತೆಗಳು, ಈ ಮುಂತಾದ ಎಲ್ಲವೂ ನನ್ನ ರಕ್ತದ ಕಣಕಣಗಳಲ್ಲಿ ಬೆರೆತು ಹೋದವು. ಅವೆಲ್ಲವುಗಳ ಮಿಶ್ರಣದಿಂದ ನನಗುಂಟಾದ ಆತ್ಮಸಂಸ್ಕಾರ ಹದವಾದ ಪರಿಪಾಕವಾಯಿತು. ಅದರ ಪ್ರಭಾವ ಎಷ್ಟು, ಇದರ ಪ್ರಭಾವ ಎಷ್ಟು ಎಂದು ನಾನು ಅದನ್ನೆಲ್ಲ ಅಳೆದು ತೂಗಿ ಹೇಳಲಾರೆ. ಒಟ್ಟು ಪರಿಣಾಮ ಮಾತ್ರ ಅಗಾಧವಾದುದು ಎಂದಷ್ಟೇ ಹೇಳಬಲ್ಲೆ. ಅಂತರಂಗದಲ್ಲಿಯೇ ಸುಪ್ತವಾಗಿ ವರ್ಣಗಳು ಜೋಡಣೆಗೊಳ್ಳುತ್ತ, ವರ್ಣಮಯ ಕವಿತೆಗಳನ್ನು ಕಟ್ಟುತ್ತಿದ್ದುವು. ಕಾಮನಬಿಲ್ಲಿನ ಕಾಂತಿ ಹರಡಿದಂತೆ ಸಪ್ತವರ್ಣಗಳ ಒಕ್ಕೂಟ ಆ ಕವಿತೆಗಳಲ್ಲಿ ತೋರುತ್ತಿತ್ತು. ಆಮೇಲೆ ಅವೆಲ್ಲವೂ ಕಾವ್ಯದ ನವರಂಗವನ್ನು ಹೊಕ್ಕು ಸಹೃದಯರನ್ನು ಎಚ್ಚರಿಸುತ್ತಿದ್ದವು.

### ೧೫. ಸೂತ್ರದಾರನಗೊಂಬೆ ಓ ಅಂಬೆ, ನಾನೆಂಬೆ

ನಾನು ನನ್ನ ತಾಯಿಯನ್ನು ಗಾಢವಾಗಿ ಪ್ರೀತಿಸಿದೆ. ಅವಳ ಆಸೆ ಆಕಾಂಕ್ಷೆಗಳಿಗೆ ತಕ್ಕವನಾಗಿ ಬೆಳೆಯಬೇಕು ಎಂಬುದನ್ನು ನಾನೆಂದೂ ಮರೆಯಲಿಲ್ಲ. ಇದರ ಜೊತೆಗೆ ನಮ್ಮ ಕನ್ನಡನಾಡು ಸಮೃದ್ಧವಾಗಬೇಕು, ಕನ್ನಡಿಗರು ಸುಸಂಪನ್ನರಾಗಬೇಕು, ಇಲ್ಲಿನ ಕಾವ್ಯಲೋಕ ವಿಶಾಲಗೊಳ್ಳಬೇಕು ಎಂಬೆಲ್ಲ ಆಸೆಗಳು ನನ್ನಲ್ಲಿ ಪ್ರವೇಶಿಸಿದುವು. ಇವುಗಳಿಗೆ ಕಿರೀಟವಿಟ್ಟಂತೆ ಭವ್ಯಭಾರತದ ಸ್ವತಂತ್ರ ಚಿತ್ರವೊಂದು ನನ್ನನ್ನು ಮುತ್ತಿಕೊಂಡಿತು. ದಾಸ್ಯ ಸಂಕೋಲೆಗಳನ್ನು ಕಳಚಿ ಹಾಕಿ ನಾವು ನಾವಾಗಬೇಡವೆ? ಎಂದು ಮನಸ್ಸು ಕಾತರಿಸುತ್ತಿತ್ತು. ಈ ಹಿನ್ನೆಲೆಯಲ್ಲಿ ಚಿಂತನೆ ಮಾಡುತ್ತಿದ್ದ ನನಗೆ ಭೂಮಂಡಲವನ್ನೇ ಸುತ್ತಾಡಿದಂತಾಯಿತು. ಮಾನವನ ಅಂತರಾಳವನ್ನು ಹೊಕ್ಕು ಅವನ ಆಸೆ ಆಕಾಂಕ್ಷೆಗಳನ್ನು ಅವನ ನೋವು ನಲಿವುಗಳನ್ನು ಎತ್ತಿ ಹಿಡಿಯುವ ಸಾಮರ್ಥ್ಯಕಂಡುಕೊಂಡಿತು.

ಪಗಡೆಯಾಟದಲ್ಲಿ ಗಾಳಗಳನ್ನು ಉರುಳಿಸಿದಾಗ ಅವು ಹೇಗೆ ಬಿದ್ದರೂ ಅಷ್ಟೊ ಇಷ್ಟೊ ಸಂಖ್ಯೆಯನ್ನು ಸೂಚಿಸಿಯೆ ತೀರುತ್ತವೆ. 'ಲೆತ್ತದ ಆಟದಲಿ ಎತ್ತ ಬಿದ್ದರು ದಾಯ'[೨] ಹಾಗೆಯೇ ನಾನು ಎತ್ತ ಹೋದರೂ ನನ್ನ ಕಾವ್ಯಯಾತ್ರೆಗೆ ಭಂಗ ಉಂಟಾಗುತ್ತಿರಲಿಲ್ಲ. ಎತ್ತರೆತ್ತರಕ್ಕೆ ಏರುವ ಭಾಗ್ಯವೇ ನನ್ನದಾಗುತ್ತಿತ್ತು. ವಿವಿಧ ಸ್ವಭಾವಗಳ ಅಧಮ, ಮಧ್ಯಮ, ಉತ್ತಮ ಪುರುಷರ ಸಂಪರ್ಕ ನನಗೆ ಉಂಟಾಗುತ್ತಿತ್ತಾದರೂ ನನ್ನ ಮನಸ್ಸು ಮಾತ್ರ ಉತ್ತಮಿಕೆಗೆ ತೆರೆದುಕೊಳ್ಳುತ್ತಿತ್ತು. ದಿಕ್ಸೂಚಿಯು ಯಾವ ದಿಕ್ಕಿಗೆ ತಿರುಗಿಸಿ ಬಿಟ್ಟರೂ ದಕ್ಷಿಣೋತ್ತರವಾಗಿಯೇ ಇರುವಂತೆ ನನ್ನ ಮನಸ್ಸು ಉತ್ತಮಿಕೆಯ ದಿಕ್ಕಿಗೆ ಮುಖ ಮಾಡಿಕೊಂಡಿರುತ್ತಿತ್ತು.

ಅಧ್ಯಾತ್ಮದ ಕ್ಷೇತ್ರದಲ್ಲಿ ಪರಮಾತ್ಮನೊಬ್ಬನೇ ಪುರುಷ. ಅವನೇ ಜೀವಾತ್ಮಗಳೆಲ್ಲರ ಪತಿ. ಅಂತಹ ಪತಿಸತಿತತ್ವ ನನ್ನ ಹೃದಯದಲ್ಲಿ ನೆಲೆಗೊಂಡಿತ್ತು. ಇದರಿಂದಾಗಿ ನಾನು ಪತಿತನಾಗುವುದು ಸಾಧ್ಯವಿರಲಿಲ್ಲ. ಎಲ್ಲವೂ ಆ ಪತಿಯ ಕೃಪೆಯಿಂದ ನೆರವೇರುತ್ತದೆ ಎಂದು ದೃಢವಾಗಿ ನಂಬಿದ ಮೇಲೆ ಏಳುಬೀಳು, ಲಾಭನಷ್ಟ, ಸುಖದುಃಖ, ಎಂಬ ದ್ವಂದ್ವಗಳು ನನಗೆ ಸಮಾನವಾಗಿ ಕಂಡವು. ಲೋಕವ್ಯವಹಾರದಲ್ಲಿ ಎಲ್ಲಿ ಹೋದರೂ ದ್ವಂದ್ವವೇ, ಎಲ್ಲಿ ಹೋದರೂ ವೈಷಮ್ಯವೇ, ಹಾಗೆ ಬಿಡಿಬಿಡಿಯಾಗಿ ತೋರುವ ವೈಷಮ್ಯಗಳನ್ನೆಲ್ಲ ಬುದ್ಧಿಯೋಗದಿಂದ ಸಾಮ್ಯವಾಗಿಸಿಕೊಳ್ಳುವ ಕಲೆಯನ್ನು ನಾನು ಕಲಿತುಕೊಂಡೆ.

ಜೀವಾತ್ಮನೆಂಬ ಈ ಸತಿಗೆ ಪರಮಾತ್ಮನೆಂಬ ಆ ಪತಿಯಲ್ಲಿ ಏನನ್ನು ಬೇಕಾದರೂ ಬೇಡುವ ಒಂದು ಸಲಿಗೆಯುಂಟು. 'ಸತಿಗುಂಟು ಸಥಿ[೩]ಯೊಂದು' ಅವನನ್ನು ಬೇಡಿದ್ದರ ಫಲವಾಗಿ ಪಂಚಭೂತಗಳಿಂದಾದ ಈ ಶರೀರಕ್ಕೆ, ಈ ಅನ್ನಮಯಕೋಶಕ್ಕೆ ಒಂದಿಷ್ಟು ಅನ್ನವನ್ನು ಪ್ರಸಾದವಾಗಿ ಕರುಣಿಸಿದ್ದಾನೆ. ಅದು ಬದುಕಿನ ಯಾತ್ರೆಯಲ್ಲಿ ಸಾಗುವ ಪಥಿಕನಿಗೆ ದೊರೆಯುವ ಬುತ್ತಿಯಾಯಿತು. ಇನ್ನು ಚಿತ್ತ ಬುದ್ಧಿಗಳಿಗಷ್ಟು ಆಹಾರ ಬೇಡವೆ. ನಾದ ಬಿಂದುಕಳಾತೀತನಾದ ಆ ಪತಿಯೇ ನಾದಬಿಂದುಗಳು ಚಲಿಸುವಂತೆ ಮಾಡಿ ಕಾವ್ಯಯೋಗವು ಕಳೆಗಟ್ಟುವಂತೆ ಮಾಡಿದನು. ಕವಿತೆಗಳು ಮೂರ್ತಿಗೊಂಡು ಮಾತಾಡಿದುವು. ಈ ಆತ್ಮ ಸಂವಾದವಾದ ಬಳಿಕ ಬೇರೆ ಸಂವಾದಕ್ಕೆ ಎಡೆ ಎಲ್ಲಿ !

ಭೂತಾಯಿಯೇ ನನಗೆ ಆಸರೆ. ಅವಳ ನೆತ್ತಿಯ ಮೇಲೆ ನಾನು ಪಾದ ಊರಿದ್ದೇನೆ. ಪಾದಗಳನ್ನು ಬಿಟ್ಟು ಮಿಕ್ಕ ನನ್ನ ದೇಹವೆಲ್ಲವೂ ಅಂತರಿಕ್ಷದಲ್ಲಿದೆ. ನಾನು ಭೂಮ್ಯಾಕಾಶಗಳನ್ನು ವ್ಯಾಪಿಸಿಕೊಂಡಿದ್ದೇನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಶ್ರದ್ಧೆಯ ಸೂತ್ರ, ಭಕ್ತಿಯ ಸೂತ್ರ ನನ್ನನ್ನು ದ್ಯಾವಾ ಪೃಥ್ವಿಗಳಲ್ಲಿ ತುಂಬಿಸಿದೆ. ನನ್ನ ಕಾವ್ಯಬಲದಿಂದ ನಾನು ಭೂಮ್ಯಾಂತರಿಕ್ಷಗಳನ್ನೆಲ್ಲ ವ್ಯಾಪಿಸಿಕೊಂಡಿದ್ದೇನೆ. ಪರಮಾತ್ಮನ ಸುಸ್ನೇಹದಿಂದಾಗಿ ಇದು ಮಂತ್ರಮಯವಾದ ದೇಹವಾಗಿದೆ; ರಾಮಮಯವಾದ ದೇಹವಾಗಿದೆ. ಈಶ ಪತಿ, ಭಕ್ತ ಸತಿ ಎಂಬುದೇ ಇಲ್ಲಿ ಶ್ರದ್ಧೆಯ ಸೂತ್ರ.

ಪರಮಾತ್ಮನಾದ ನೀನು ಸೂತ್ರಧಾರ. ನಾನು ನಿನ್ನ ಕೈಲಾಡುವ ಗೊಂಬೆ. ನೀನು ಕರೆದರೆ ಓ ಎನ್ನುತ್ತೇನೆ. ನಾನು, ನಾನು ಎಂದು ಹೇಳಿಕೊಳ್ಳುತ್ತೇನೆ. ಕುಣಿಸುವವನು ನೀನು. ಧಾರವಾಡದ ನೆಲವೇ ಈಗ ನಾನು ಕುಣಿಯಬೇಕಾಗಿರುವ ಮಂಗಳ ರಂಗಸ್ಥಳ; ನೀನು ನೀಡಿರುವ ಈ ದೇಹವು ಶಾಶ್ವತವಲ್ಲ; ಅದು ಭಂಗಗೊಳ್ಳುತ್ತದೆ. ಆದರೆ ನಮ್ಮೀರ್ವರ ನಡುವಣ ಸ್ನೇಹಮಾತ್ರ ಎಂದಿಗೂ ಭಂಗಗೊಳ್ಳುವಂತಹದ್ದಲ್ಲ. ಭಂಗವಾಗುವ ದೇಹದ ಮೂಲಕ ಅಭಂಗವೆನಿಸುವ ಕವಿತೆಯನ್ನು ನೀನು ನುಡಿಸಿದ್ದೀಯೆ. ಜೀವಭೃಂಗದ ಮೂಲಕ ನೀನೇ ನುಡಿದಿದ್ದೀಯೆ. ಅದೇ ಶೃಂಗಪ್ರಾಯವಾಗಿ ಲೋಕವನ್ನು ತುಂಬಿಕೊಂಡಿದೆ.

**ಅಡಿ ಟಿಪ್ಪಣಿಗಳು**

೧. ಮೂವತ್ತು ಮೂರು ಕೋಟಿ ಎಂಬ ಕವಿತೆ ಈ ಸಂದರ್ಭದಲ್ಲಿ ನೆನಪಿಗೆ ಬರುತ್ತದೆ.

೨. ದಾಯ : ಪಗಡೆಯಾಟದಲ್ಲಿ ಬೀಳುವ ಗರ ಅಥವಾ ಸಂಖ್ಯೆಯ ಗರ.

ಗರ : ಪಗಡೆಯಾಟದಲ್ಲಿ ದಾಳಗಳನ್ನು ಉರುಳಿಸಿದಾಗ ಅವುಗಳಿಂದ ಸೂಚಿತವಾಗುವ ಸಂಖ್ಯೆ.

೩. ಸಥಿ : ಸಲಿಗೆ, ಆತ್ಮೀಯತೆ, ಅಧಿಕಾರ.

**೧೬. ಉತ್ಸಾಹ ತಿನುವುದು ಬೇಸರದ ಕಸಕಡ್ಡಿ**

ದೃಷ್ಟ ಜಗತ್ತಿನಲ್ಲಿ ಮೂಡುವ ಬೆಳಕಿನಲ್ಲಿ ಏರಿಳಿತಗಳುಂಟು. ಈಗ ಬೆಳಕಾಗಿದ್ದುದು ಆ ಮೇಲೆ ಕತ್ತಲೆಯಾಗಿ ಬಿಡುತ್ತದೆ. ಕೋಟಿ ಕೋಟಿ ನಕ್ಷತ್ರಗಳು ಉದಿಸಿದರೂ ಆ ಕತ್ತಲೆಯನ್ನು ಅಳಿಸಲಾರವು. ಆದರೆ ನನ್ನ ಅಂತರಂಗದ ಬೆಳಕಿಗೆ ಮಾತ್ರ ಏರಿಳಿತಗಳಿಲ್ಲ. ಕಣ್ಣು ಮುಚ್ಚಿದರೆ ಸಾಕು ಒಳಗೆಲ್ಲ ಬೆಳಕು, ಬೆಳ್ಳಂಬೆಳಕು. ಒಳಗೆ ಎಲ್ಲವೂ ಹೊಳೆ ಹೊಳೆದು ತೋರುತ್ತಿದೆ. ಕವಿತೆ ಕಟ್ಟುವ ಕನಸು ತಾನೇ ತಾನಾಗಿ ಮೂಡಿಕೊಳ್ಳುತ್ತದೆ. ಕವಿತೆಯೊಂದು ಸ್ಫುಟವಾಗಿ ರೂಪತಾಳಿದ ಮೇಲೆ ಆ ಕನಸು ನನಸಾಗುತ್ತದೆ.

ಪಂಚಭೂತಗಳಿಂದಾದ ಈ ದೇಹವೆಂಬುದೊಂದು ಅನ್ನಛತ್ರವಿದ್ದಂತೆ. ಹಸಿವಾದಾಗ ಅದಕ್ಕೆ ಅನ್ನ ತುಂಬಿಸಬೇಕು, ಬಾಯಾರಿಕೆಯಾದಾಗ ನೀರು ತುಂಬಿಸಬೇಕು. ದೇಹಪಾತವಾಗುವ ವರೆಗೂ ಅದು ತಪ್ಪುವಂಥದಲ್ಲ. ಈ ನಡುವೆ ಮನಸ್ಸೆಂಬುದು ಚೈತನ್ಯ ಪೂರ್ಣವಾದುದು. ಅದು ಕೆಲಸ ಮಾಡಲು ಅನ್ನಛತ್ರದಲ್ಲಿ ನಡೆಯುವ ಕಾರ್ಯ ನಡೆಯುತ್ತಲೇ ಇರಬೇಕು. ಈ ಮನಸ್ಸು ಕೂಡ ಆಗಾಗ ಇಳಿಮುಖವಾಗಿ ಬಿಡುತ್ತದೆ. ಆಗ ಉತ್ಸಾಹವನ್ನು ತಂದು ಕೊಂಡರೆ ಅದು ಬೇಸರದ ಕಸಕಡ್ಡಿಗಳನ್ನೆಲ್ಲ ನುಂಗಿ ಬಿಡುತ್ತದೆ. ಮಣ್ಣು ನೆಲವು ಬೆಳೆ ಕಳೆಗಳೆಲ್ಲವನ್ನೂ ನುಂಗಿಕೊಳ್ಳುವ ಹಾಗೆ ಬೇಸರ ಗೀಸರವನ್ನೆಲ್ಲ ನುಂಗಿಕೊಳ್ಳುವ ಶಕ್ತಿ, ಉತ್ಸಾಹದಿಂದ ತುಂಬಿದ ಮನಸ್ಸಿಗಿದೆ. ನಾನು ಅನ್ನಮಯ ಕೋಶವನ್ನು ಪೋಷಿಸುತ್ತ ಮನೋಮಯ ಕೋಶದ ಕಸಕಡ್ಡಿಗಳನ್ನು ನುಂಗುತ್ತ, ಕಾವ್ಯರಚನೆಯ ದಿಕ್ಕಿನಲ್ಲಿ ಕಾರ್ಯೋನ್ಮುಖನಾಗುತ್ತಿದ್ದೆ.

ಹಗಲಿರುಳೆಂಬುದು, ನಿದ್ರೆ ಎಚ್ಚರವೆಂಬುದು ಒಂದರ ಬೆನ್ನಿಗೊಂದು ಬರುವಂಥವು. ಅವೆಲ್ಲವೂ ಆ ಸೂತ್ರಧಾರನ ಮೋಜಿನ ಜೂಜಾಟಗಳೆ. ದಾಯಾದಿಯೊ, ಮಾಯಾವಿಯೊ, ಎದುರಾಳಿಯೊ, ಜೊತೆಗಾರನೋ-ಯಾರಾದರೂ ಸರಿಯೆ ಒಬ್ಬೊಬ್ಬರೂ ತಮ್ಮ ತಮ್ಮ ತಿಳಿವಳಿಕೆಗೆ ತಕ್ಕಂತೆ ವ್ಯವಹರಿಸುತ್ತಾರೆ. ಆದರೆ ಆ ವ್ಯವಹಾರವೆಲ್ಲವೂ ಆ ಸೂತ್ರಧಾರನು ಮಿಡಿಯುವ ದಾರಗಳನ್ನೇ ಅವಲಂಭಿಸಿರುತ್ತದೆ. ಅವನ ಕೈಸನ್ನೆ ಇಲ್ಲದೆ ಯಾವುದೂ ಇಲ್ಲ.

ಕಾಲ ಚಕ್ರ ಉರುಳುತ್ತಲೇ ಇದೆ. ದಿವಸವೆಂಬುದು ಬೆಳೆದು ವಾರವಾಗುತ್ತಿದೆ; ದಿವಸವೆಂಬುದು ಬೆಳೆದು ಮಾಸವಾಗುತ್ತಿದೆ; ದಿವಸವೆಂಬುದು ಬೆಳೆದು ವರ್ಷವಾಗುತ್ತಿದೆ. ಹೀಗೆಯೇ ಕಾಲದ ಬುಗುರಿ ತಿರುಗುತ್ತಿದೆ. ದಿನ ಎಂಬುದು ಹುಟ್ಟಿದಂದಿನಿಂದ ತಾನು ಬೆಳೆದ ದಿನಗಳ ಜೊತೆಗೂಡಿ ಇನ್ನೂ ಪೂರ್ಣವಾಗಿ ಬೆಳೆಯದೆ ಪಿಂಡಾವಸ್ಥೆಯಲ್ಲಿಯೇ ಏನೇನೋ ಪುಂಡಾಟಮಾಡಿಸುತ್ತಿದೆ. ದಿನದ ಪಿಂಡದಲ್ಲಿಯೇ ಎಲ್ಲ ಹೋರಾಟಗಳೂ ನಡೆಯುತ್ತಿವೆ.

ಇಂತಹ ಹೋರಾಟದ ಅಂಗವಾಗಿ ಈ ಕನ್ನಡನಾಡಿನಲ್ಲಿ ಕನ್ನಡ ಭಾಷೆಯು ತಾನುಳಿಸಿಕೊಳ್ಳಬೇಕಾದ ಸ್ಥಾನವನ್ನು ಗಳಿಸಿಕೊಳ್ಳಲಾರದೆ ಹಿಂದೆ ಬಿದ್ದಿದೆ. ಇಂಗ್ಲೀಷು ಬೇಡ ಬೇಡವೆಂದರೂ ಮುಂದು ಮುಂದಕ್ಕೆ ಬರುತ್ತಿದೆ. ಮರಾಠಿ ಮತ್ತು ಸಂಸ್ಕೃತ ಭಾಷೆಗಳು ಅದರ ಜೊತೆ ಜೊತೆಗೇ ಬಂದು ಕೂಡಿಕೊಂಡಿವೆ. ಜಗನ್ನಾಥನ ಗಂಗೆ ಅಂತರಂಗದಲ್ಲಿ ಹರಿಯುತ್ತಿದ್ದರೂ, ಆಂಗ್ಲದಿಂದ ಏನೇನೋ ವಿವರಗಳು ಕನ್ನಡಕ್ಕೆ ಅನುವಾದಗೊಂಡು ಬಂದುವು. ಬಂದುದೆಲ್ಲವನ್ನೂ ನಾನು ಹೀರಿಕೊಂಡೆ. ಹಿಂದಾಗಿರುವ ಕನ್ನಡವನ್ನು ಮುಂದಕ್ಕೆ ತರಬಲ್ಲೆನೆ ಎಂದು ಆಲೋಚಿಸಿದ್ದೆ.

ದಿವಸ ದಿವಸ ನುಂಗಿ, ಮಾಸಮಾಸದೊಳಿಂಗಿ ಕಾಲಚಕ್ರ ಹೇಗೆ ಉರುಳಿತೊ ಏನೊಂದು ತಿಳಿಯದು. ಹೀಗೆ ಉರುಳುತ್ತ ಒಂದಲ್ಲ ಎರಡಲ್ಲ ಇಪ್ಪತ್ತೆರಡು ವರ್ಷಗಳೇ ತುಂಬಿ ಹೋದವು. ಹೀಗಿರುವಲ್ಲಿ ಎಂದೋ ಒಂದು ದಿನ ಭಾರತಭಾಗ್ಯ ವಿಧಾತನು ಹೀಗೆಯೇ ಕುಳಿತಿರುವೆಯಾ ಎದ್ದೆಳು, ಎದ್ದೇಳು ಎಂದು ಆಜ್ಞೆ ಮಾಡಿದನು. ಭಾರತಾಂಬೆಯ ಬಿಡುಗಡೆಗಾಗಿ ನಾನು ಕೊಡವಿಕೊಂಡು ಮೇಲೆದ್ದೆ.

## ೧೭. ಕನ್ನಡಿ ಒಡೆದರೆ ಕಲ್ಲಿಗೆ ಯಾ ದುಃಖ

ಬಡವರ ಮನೆಗೆ ಗಂಗಾನದಿಯು ಹರಿದುಬಂದಹಾಗೆ ಅಂತೂ ಇಂತೂ ಸ್ವಾತಂತ್ರ್ಯ ಚಳುವಳಿ ಕನ್ನಡ ನಾಡಿಗೂ ಬಂತು. ಅದೇ ಸಮಯಕ್ಕೆ ಕನ್ನಡ ಜಾಗೃತಿಗೂ ಗರಿ ಮೂಡಿತು. ಕಾಂಗ್ರೆಸ್ ರಾಷ್ಟ್ರೀಯ ಸಭೆಯು ಬೆಳಗಾವಿಯಲ್ಲಿ ನಡೆದು ಕರ್ನಾಟಕದ ಮುನ್ನಡೆಗೆ ಎಡೆ ಮಾಡಿತು.

ಕಲ್ಲಿನಿಂದ ಕನ್ನಡಿಗೊಂದು ಏಟುಕೊಟ್ಟರೆ ಅದು ಚೂರುಚೂರಾಗಿ ಒಡೆದು ಹೋಗುತ್ತದೆ. ಅದು ಕನ್ನಡಿಯ ದುಃಖ. ಹಾಗೆ ಚೂರಾಗುವಂತೆ ಒಡೆದ ಕಲ್ಲಿಗೆ ಮಾತ್ರ ಯಾವ ದುಃಖವೂ

ಇಲ್ಲ. ಒಡೆಯುವುದು ಕಲ್ಲಿಗೆ ಒಂದು ಲೀಲೆಯೇ ಸರಿ; ಒಂದು ಅಪಹಾಸ್ಯದ ಆಟವೇಸರಿ. 'ಚುನ್ನಾಟ[೧] ಚಿನ್ನಾಟ ಎನಿಸುವದು'. ಬ್ರಿಟೀಷರು ನಮ್ಮನ್ನು ತಮ್ಮ ಒಡೆದು ಆಳುವ ನೀತಿಯ ಮೂಲಕ ವಶಕ್ಕೆ ತೆಗೆದುಕೊಂಡರು. ಆದರೆ ನಾವಾದರೂ ತರುವಾಯದಲ್ಲಿ ಎಚ್ಚೆತ್ತು ಪ್ರೀತಿಯಿಂದ ಒಂದಾಗಿ ಅವರನ್ನು ಎದುರಿಸಿದೆವು.

ಈ ಸ್ವಾತಂತ್ರ್ಯ ಚಳುವಳಿಯ ಜೊತೆ ಜೊತೆಯಲ್ಲಿಯೇ ಮಹಾರಾಷ್ಟ್ರ ಮತ್ತು ಕರ್ನಾಟಕಗಳ ನಡುವಣ ಭಿನ್ನಾಭಿಪ್ರಾಯವು ಬೆಳೆಯುವಂತಾಯಿತು. ಈ ಹಿಂದೆ ಕೊಂಕಣ ತೆಂಕಣಗಳಿಗೆ ಯಾವ ವಿರಸವೂ ಇರಲಿಲ್ಲ. ಅವೆಲ್ಲವೂ ಸಂಲಗ್ನವಾಗಿಯೇ ಇದ್ದವು. ಪರಸ್ಪರ ಸ್ನೇಹದ ಸೌಹಾರ್ದದ ಜೀವಗುಣ ನಾಶವಾಗಿರಲಿಲ್ಲ. ಸಣ್ಣ ಪುಟ್ಟ ಘರ್ಷಣೆಗಳು ನಡೆಯುತ್ತಿರಬಹುದುದಾದರೂ ಅವುಗಳನ್ನು ಮರೆತು ಜನ ಮತ್ತೆ ಒಂದಾಗುತ್ತಿದ್ದರು. ವೈಷಮ್ಯದ ಬೀಜಗಳನ್ನು ಯಾರೂ ಬಿತ್ತಿರಲಿಲ್ಲ.

ಆದರೆ ಸದ್ವಿದ್ಯೆಯ ಜೊತೆಗೆ ಕ್ರಮಕ್ರಮವಾಗಿ ದುರ್ವಿದ್ಯೆಯೂ ಬೆಸೆದುಕೊಂಡಿತು. ಸ್ನೇಹವು ಮರೆಯಾಗಿ ದ್ವೇಷವು ಹೊಗೆಯಾಡತೊಡಗಿತು. ವ್ಯಕ್ತಿಗಳ ನೀಚತನಕ್ಕೆ ಕೋಡು ಬೆಳೆಯುತ್ತಾ, ಹೋಯಿತು. ಅದು ಕಿಡಿಗೇಡಿತನಕ್ಕೂ ಹೇಸದೆ ಮೆಲ್ಲ ಮೆಲ್ಲನೆ ಹೆಜ್ಜೆ ಇಡುತ್ತಿತ್ತು. ವಂಚನೆಯ ಮಾತುಗಳನ್ನಾಡುವ ಮೂಲಕ ಎರಡೂ ನಾಡಿನ ಮನಗಳು ಮುದುಡಿ ಹೋದುವು. 'ತೊದಲಾಡಿ[೨] ಅಡಗಿತ್ತು ಎರಡುಮನ'.

ಮಹಾರಾಷ್ಟ್ರ-ಕರ್ನಾಟಕ ಗಡಿ ಪ್ರದೇಶದಲ್ಲಿರುವ ಜನರು ಎರಡೆರಡು ಭಾಷೆಗಳನ್ನಾಡುವುದೊಂದು ಭೂಷಣವೇ ಸರಿ. ಆದರೆ ವಂಚನೆಯ, ಸುಳ್ಳು ಮಾತಿನ ಎರಡು ನಾಲಗೆಯವರಾಗುವುದರಿಂದ ಹಾನಿಯೇ ಸರಿ. ಗಡಿ ವಿವಾದದ ಈ ಹಿನ್ನೆಲೆಯಲ್ಲಿ ಹಿರಿಯ ನಾಯಕರೆನಿಸಿಕೊಂಡ ಕೆಲವರು ದ್ವಿಜಿಪ್ವರಾಗಿಬಿಟ್ಟರು. ಶಿವಲಿಂಗಕ್ಷೇತ್ರವೆನಿಸಿದ ಸೊಲ್ಲಾಪುರದ ವರೆಗೆ ಕನ್ನಡನಾಡೇ ಹಬ್ಬಿಕೊಂಡಿತ್ತು. ಪ್ರೀತಿಯಿಂದ ವಿವಾದವನ್ನು ಬಗೆ ಹರಿಸಿಕೊಳ್ಳುವ ಸಾಧ್ಯತೆಗಳಿದ್ದುವು. ಆದರೆ ಹಿರಿಯ ನಾಯಕರು ಮೇರೆಮೀರಿ ವರ್ತಿಸಿದ್ದರಿಂದ ಭೂತಗಣಗಳು ಹುಟ್ಟಿಕೊಂಡುಬಿಟ್ಟವು.

ಹೀಗೆ ಭೂತಗಣಗಳನ್ನು ಎಬ್ಬಿಸಿದವರು ರುದ್ರಭೂಮಿಯ ಒಕ್ಕಲಿನ ಜನರೇ ಸರಿ. ಅವರು ಶಾಂತಿಗೆ ಬದಲಾಗಿ ವಿಕಟ ಅಟ್ಟಹಾಸವನ್ನೇ ಹಬ್ಬಿಸಿ ಬಿಟ್ಟರು. ಆ ಭೂತಗಣಗಳಾದರೂ ನಡುಹಗಲಿನಲ್ಲಿ ಕುಣಿಯತೊಡಗಿದವು. ಅವುಗಳಿಗೆ ಯಾರೂ ತಿಳಿವಳಿಕೆ ಹೇಳುವುದು ಸಾಧ್ಯವಾಗಲಿಲ್ಲ. 'ಬೈಚಣ್ಣ[೩] ನಾಡಿದ ರಾಜಕಾರಣದಲ್ಲಿ / ಬೇಲಗಾಮಿ ಮನದ ಜಾಣತನ' ಹೀಗೆ ರಾಜಕಾರಣದಲ್ಲಿದ್ದವರು ತೆರೆದ ಮನಸ್ಸಿನವರಾಗದೆ, ಮುಚ್ಚಿದ ಭಾವನೆಗಳ ಅಣ್ಣರಾಗಿ ಒಳಗೊಂದು ಹೊರಗೊಂದು ಆಡುತ್ತ ತಾವೇ ಜಾಣರೆಂದು ಭಾವಿಸಿಕೊಂಡಿದ್ದರು, ಅವರ ಮನಸ್ಸಿನ ಜಾಣತನಕ್ಕೆ ಕಡಿವಾಣವೇ ಇಲ್ಲದಂತಾಯಿತು.

**ಅಡಿಟಿಪ್ಪಣಿಗಳು**

೧. ಚುನ್ನ + ಆಟ = ಚುನ್ನಾಟ = ಅಣಕ, ಅಪಹಾಸ್ಯ

ಚುನ್ನ = ಹೀನವಾದ, ಅಲ್ಪವಾದ, ಅಣಕ, ಕೊಂಕುನುಡಿ, ವ್ಯಂಗ್ಯ.

೨. ತೊದಲಾಡು - ತೊದಲು, ಸುಳ್ಳು ಹೇಳು, ಅನುಮಾನ, ಶಂಕೆ.

೩. ಬೈಚು - ಮುಚ್ಚಿಡು

ಬೈಚಣ್ಣ - ಮುಚ್ಚಿದ ಭಾವನೆಗಳ ಅಣ್ಣ.

## ೧೮. ಮೈಗೊಟ್ಟ ತಾಯಿಯು ಮೈಬಿಟ್ಟು ಹೋಗುವಳೆ?

ಹೊರ ಜಗತ್ತಿನ ವ್ಯವಹಾರಗಳು ಹೀಗೆ ನಡೆಯುತ್ತಿರುವಾಗ ನನ್ನ ಮನೆಯೊಳಗೆ ನನ್ನ ತಾಯಿ ಅಂಬವ್ವ ತೀರಿಕೊಂಡಳು. ನನಗೆ ದೇಹಕೊಟ್ಟ ಆ ತಾಯಿ ತಾನು ದೇಹವನ್ನು ಬಿಟ್ಟು ಹೋದಳೇ ಎಂದು ನಾನು ಚಿಂತಿಸಿದೆ. ಆ ಮೇಲೆ ಮೈಗೊಟ್ಟ ತಾಯಿ ಮೈಬಿಟ್ಟು ಹೋಗುವವಳಲ್ಲ ನನ್ನೊಳಗೆ ಇದ್ದಾಳೆ ಎಂದು ನಾನು ಭಾವಿಸಿಕೊಂಡೆ. ಅವಳ ಮರಣವು ನನ್ನ ಮೇಲೆ ದಟ್ಟವಾದ ದುಃಖವನ್ನೇ ತಳ್ಳಿತು. ಅವಳನ್ನು ನೆನೆಯುತ್ತ ಮೈಮರೆತು ಬಿಡುತ್ತಿದ್ದೆ; ಮತ್ತೆ ಪ್ರಜ್ಞೆಗೆ ಬಂದಾಗಲೂ ಅವಳ ನೆನಪೆ ತುಂಬಿಕೊಳ್ಳುತ್ತಿತ್ತು. ಅತಿಯಾದ ದುಃಖ ಉಮ್ಮಳಿಸಿದಾಗ ಮೈಬೆವರುವುದೇನು ಮನವೂ ಬೆವೆತು ಬಿಡುತ್ತಿತ್ತು. ತಾಯಿಯ ಮರಣಕ್ಕಾಗಿ ಬೇಕಾದಷ್ಟು ಕಣ್ಣೀರು ಸುರಿಸಿದೆ. ಆ ಕಣ್ಣೀರ ಧಾರೆಯೇ ಅವಳಿಗೆ ತರ್ಪಣವಾಯಿತು.

ತಾಯಿಯ ಮರಣದ ದುಃಖ ಬೇಗ ಮಾಯಲಿಲ್ಲ. ಅವಳ ಪಾದಗಳನ್ನು ನೆನೆಯುತ್ತ ನಾನು ಉರುಳಾಡಿದೆ, ಹೊರಳಾಡಿದೆ ಅದರ ಮೇಲೆ ತಲೆಯಿಟ್ಟು, ಕೈಯಿಟ್ಟು ಮುದ್ದಾಡಿದೆ. ಆ ಹೊತ್ತಿನಲ್ಲಿ ಯಾರೊ ನನ್ನನ್ನು ಸಮಾಧಾನ ಪಡಿಸುವ ಹಾಗೆ ಬೆನ್ನು ಸವರಿದಂತಾಯಿತು. ಆ ಮುಹೂರ್ತದಲ್ಲಿ ನಾನು ರೋಮಾಂಚಿತನಾದೆ. ಇದು ನನ್ನ ಪುಣ್ಯ ಮಾತೆಯ ದಿವ್ಯ ಹಸ್ತದ ಸ್ಪರ್ಶವೇ ಸರಿ ಎಂದು ಕೊಂಡೆ. ತಾಯಿಯ ಕರುಳಿನ ಪ್ರೀತಿ ಎಂಥದು, ಅವಳ ಮೋಹ ಎಂಥದು ಎಂಬುದನ್ನೆಲ್ಲ ನಾನು ಕೊಂಡಾಡಿಕೊಂಡೆ.

ತಾಯಿಯ ಕರುಳಿನ ಸ್ನೇಹವಿಲಾಸಗಳು ಹೃದಯಕ್ಕೆ ಮಾತ್ರವೇ ನಿಲುಕುವಂಥವು. ಅವು ಬುದ್ಧಿಗೆ ನಿಲುಕುವಂಥವಲ್ಲ, ಬುದ್ದಿಗೆ ಅವುಗಳ ತಲೆ ಬುಡವೇ ತಿಳಿಯುವುದಿಲ್ಲ. ಆದರೂ ಈ ಪಂಚ ಭೂತಾತ್ಮಕವಾದ ದೇಹವನ್ನು ಬಳಸಿಕೊಂಡೇ ಆ ಸ್ನೇಹದ ನೆಲೆ ಏನೆಂಬುದನ್ನು ತಿಳಿಯಬೇಕು.

ತಂದೆ ತಾಯಿ, ಗಂಡ ಹೆಂಡತಿ ಈ ಮೊದಲಾದ ಸಂಬಂಧಗಳು ಯಾವ ಜನ್ಮದ ಮೈತ್ರಿಯೋ ಯಾರು ಕಂಡಿದ್ದಾರೆ. ಆ ಸಂಬಂಧ ಪ್ರವಾಹವು ಕಂಡೂ ಕಾಣದಂತೆ ಜೀವನದ ಕಣಿವೆಯಲ್ಲಿ ಹರಿಯುತ್ತಾ ಸಾಗುತ್ತದೆ. ತಾಯಿಯ ಮರಣದಿಂದ ಬೇಸಗೆಯೇ ಬಂದಂತಾಯಿತು.

ಆದರೆ ಜೀವನ ಪ್ರವಾಹ ಬತ್ತುವಂಥದಲ್ಲ. ದುಃಖದ ನಡುವೆಯೆ ಅದರಲ್ಲಿ ಪ್ರವಾಹ ಉಕ್ಕಿ ಹರಿಯುವುದುಂಟು. ತಾಯಿಯನ್ನು ಕಳೆದುಕೊಂಡ ದುಃಖ ಕ್ರಮಕ್ರಮವಾಗಿ ಮಾಯುತ್ತ ಹೋಯಿತು. ನಮ್ಮ ಕೌಟುಂಬಿಕ ಜೀವನ ಗಂಡ ಹೆಂಡಿರ ಗೆಳೆತನ ಸಾಗಲೇ ಬೇಕಲ್ಲ; ಅದಕ್ಕೆ ಯಾವ ಕೊರತೆಯೂ ಉಂಟಾಗಲಿಲ್ಲ.

ತಾಯಿ ಗತಿಸಿದ ಮೇಲೆ ನಾನು ಮಾನಸಿಕವಾಗಿ ಪ್ರೌಢನಾದೆ, ಹೊಣೆಗಾರಿಕೆಗಳನ್ನು ನಾನೇ ನಿರ್ವಹಿಸಬೇಕು, ಈ ಮನೆಗೆ ನಾನೇ ತಂದೆ. ನನ್ನ ಮೇಲೆ ಬಿದ್ದಿರುವ ಹೊಸ ಹೊಣೆ ಬಹಳ ವಿಸ್ತಾರವಾದುದು, ಕ್ಷಿತಿಜದ ವರೆಗೆ ಹಬ್ಬಿಕೊಂಡಿದೆ ಎಂದು ಭಾವಿಸಿಕೊಂಡೆ. ಕಾಣದ ಸಮಸ್ಯೆಗಳನ್ನು ಕೆಣಕಾಡಿದೆ. ಅಲ್ಲೇನು, ಇಲ್ಲೇನು, ಅದು ಹೇಗೆ, ಇದು ಹೇಗೆ ಎಂದೆಲ್ಲಾ ಚಿಂತನೆ ಮಾಡಿದೆ. ಮುಂದೆ ಎದುರಿಸಬೇಕಾದ ಸಮಸ್ಯೆ ಯಾವುದು? ಎಂಬುದು ಕೂಡ ಅಗಲೇ ನಿರ್ಧಾರವಾಯಿತು.

ನನ್ನಾಕೆ ತಾಯಿಯಾಗುವವಳಿದ್ದಳು, ಮನಸ್ಸು ಅತ್ತ ಹರಿಯಿತು. ಮೊರೆ ತೊಳಲಾಟಗಳೆಲ್ಲ ಸ್ತಿಮಿತಕ್ಕೆ ಬಂದುವು. ಗಿಡಕ್ಕೊಂದು ಬಳ್ಳಿ ಹಬ್ಬಿದರೆ ನಿಜಕ್ಕೂ ಅದು ಅಲಂಕಾರವೆ; ಗಂಡಿಗೆ ಹೆಣ್ಣಿನ ಸ್ನೇಹವು ಹಾಗೆ. ಆ ಬಳ್ಳಿಗೆ ಹೂ ಬಿಟ್ಟರೆ ಆ ಸೌಂದರ್ಯಕ್ಕೆ ಪಾರವೇ ಇಲ್ಲ. ಬಳ್ಳಿಗೆ ಹೂ ಎಂದೂ ಭಾರ ಹೊರೆ ಎಂದೆನಿಸುವುದಿಲ್ಲ. ಹಾಗೆಯೇ ಸಂತಾನದ ಪರಿ.

### ೧೯. ಯಾರು ಹಾಡಿದರೂನು ಚೆಂದಾಗಿದೆ

ಒಬ್ಬ ತಾಯಿಯ ಪಾತ್ರ ಮುಕ್ತಾಯವಾಗುವ ಹೊತ್ತಿಗೆ ಮತ್ತೊಬ್ಬ ತಾಯಿ ಆ ಸ್ಥಾನದ ಹೊಣೆಗಾರಿಕೆಯನ್ನು ದಿವ್ಯಮೌನದಲ್ಲಿ ಹೊತ್ತು ನಿಂತಳು. ಮತ್ತೆ ನನಗೆ ಮನೆಯ ವ್ಯವಹಾರಗಳಿಂದ ಕೊಂಚ ಮುಕ್ತಿ ಸಿಕ್ಕಿತು. ಮುಂದೇನು ಎನ್ನುವಾಗ 'ಗೆಳೆಯರ ಗುಂಪು'ನನ್ನ ಮುಂದೆ ಪ್ರತ್ಯಕ್ಷವಾಯಿತು. ಅಂಜನವನ್ನು ಹಚ್ಚಿಕೊಂಡವರು ನವನಿಧಿಯನ್ನೇ ಕಾಣುವಂತೆ ಗೆಳೆಯರ ಗುಂಪಿನ ರೂಪದಲ್ಲಿ ನಾನು ಬತ್ತಲಾರದ ನಿಧಿಯನ್ನೇ ಕಂಡೆ.

ಗೆಳೆಯರ ಗುಂಪಿನ ಸ್ನೇಹದ ದಾರದಲ್ಲಿ ನಾನು ಹೊಸಮಣಿಗಳನ್ನು ಪೋಣಿಸುತ್ತ; ಅದನ್ನೇ ಜಪಮಾಲೆಯಾಗಿಸಿಕೊಂಡು ಗೆಳೆತನದ ಜಪಮಾಡುವುದರಲ್ಲಿಯೇ ಮಗ್ನನಾಗಿಬಿಟ್ಟೆ. ಅದು ಅತಿಯಾಗಿ ನನ್ನ ಕೌಟುಂಬಿಕ ಜೀವನದಲ್ಲಿ ಬಿರುಕು ಮಾಡಿತು. ಯಾವ ದುರ್ವಾಸ ಶಾಪ ಕೊಟ್ಟನೊ ; ಯಾವ ಜನ್ಮಜನ್ಮಾಂತರದ ಕೆಟ್ಟ ಸಂಸ್ಕಾರವೊ ನಮ್ಮ ದಾಂಪತ್ಯದ ಸಂಯೋಜನೆಯು ಅನಿಶ್ಚಯವಾಗಿಬಿಟ್ಟಿತು. 'ನೆನೆಗುದಿಗೆ' ಬಿದ್ದಿತ್ತು ನಿನ್ನ ಬೆದೆ' ಶೃಂಗಾರ ಜೀವನವು ನೆನೆಗುದಿಗೆ ಬಿದ್ದಿತು.

ಇಷ್ಟೆಲ್ಲ ಆದರೂ ಕೌಟುಂಬಿಕ ವಿರಸ ಬದುಕನ್ನು ಮಣ್ಣುಗೂಡಿಸುವ ಮಟ್ಟಕ್ಕೆ ಹೋಗಲಿಲ್ಲ. ನನ್ನವಳು ಕೊಂಚ ಮೆಲುದನಿಯನ್ನು ಬಿಟ್ಟು ಗಡಸುದನಿಯಲ್ಲಿ ಮಾತನಾಡುತ್ತಿದ್ದಳಾದರೂ

ಅದು ಸ್ತ್ರೀಧರ್ಮವನ್ನು ಮೀರುವ ಮಟ್ಟದಲ್ಲಿರಲಿಲ್ಲ. ಹೆಣ್ಣಿನ ಘನತೆ ಗಾಂಭೀರ್ಯಗಳ ಉಜ್ವಲತೆಯೇ ಅದರಲ್ಲಿ ಕಾಣುತ್ತಿತ್ತು. ಎಂದೂ ಅವಳು ಚಂಡಿಯಂತೆ ಕೋಪದಿಂದ ಕೆರಳಿ ಉದ್ರಿಕ್ತಗೊಳ್ಳಲಿಲ್ಲ. 'ಚಂಡಿ ಸಂದೀಪನ[2]ದಂತಾಗಲಿಲ್ಲವು'. ಅಂತಹ ಕೋಪಾತಿಶಯತೆ ಏನಾದರೂ ಅಂತಃಕರಣ ಪೂರ್ವಕವಾಗಿ ಇದ್ದಲ್ಲಿ ಅವಳ ಸಂತಾನಕ್ಕೆ ನಯವಿನಯ ಮಾಧುರ್ಯಗಳು ಹರಿದು ಬರುತ್ತಿರಲಿಲ್ಲ.

ನನ್ನ ಸಾಂಸಾರಿಕ ಸರಸವಿರಸಗಳನ್ನೆಲ್ಲ ನಾನು ನನ್ನ 'ಸಖಿಗೀತ'ದಲ್ಲಿ ಹಾಡಿದ್ದೇನೆ. ಈ ಇಳಿ ವಯಸ್ಸಿನಲ್ಲಿ ನನ್ನ ಬಾಲಮನವು 'ಬಾಲ್ಯಕಾಂಡ'ವನ್ನು ಹಾಡುತ್ತಿದೆ. ತಾಯಿ ಬದುಕಿದ್ದ ವರೆಗೂ ನಾನು ಬಾಲ್ಯವನ್ನೇ ಅನುಭವಿಸುತ್ತಿದೆ; ನನ್ನನ್ನು ಬಾಲಕನೆಂದೇ ತಿಳಿದುಕೊಂಡಿದ್ದೆ. ಈ ಇಳಿವಯಸ್ಸಿನಲ್ಲಿ ಆ ಬಾಲ್ಯದ ನೆನಪುಗಳನ್ನೆಲ್ಲ ಮತ್ತೆ ಮೆಲುಕು ಹಾಕುತ್ತಿದ್ದೇನೆ.

ಕವಿತೆಗಳ ರಚನೆ ಸಾಗುತ್ತಲೇ ಇತ್ತು. ನನ್ನ ಅಂತರಂಗದ ಅನುಭವಗಳ ಗಂಗೆ ನಿರಂತರವಾಗಿ ಹರಿಯುತ್ತಲೇ ಇದ್ದಳು. ಅವಳು ಲೋಕಕಾರುಣ್ಯದ ಯಮನೆಯೊಂದಿಗೆ ಕೂಡಿಕೊಂಡಾಗ ಹೊಮ್ಮಿದ ಕವಿತೆಗಳು ಈ ಕನ್ನಡ ನಾಡನ್ನು ಪರಿಮಳಿಸಿದುವು. ಅದೇ ಸಂದರ್ಭದಲ್ಲಿ ಮಧುರಚೆನ್ನರು ಮಧುರಗೀತೆಗಳನ್ನು ಹಾಡಿದರು. ಅದು ರಸಾತಳದಿಂದ ದಿವ್ಯರಸದ ಊಟೆಯನ್ನೇ ಹೊರ ಚಿಮ್ಮುವಂತೆ ಮಾಡಿತು. ನಾನು ಅದರಿಂದ ಪ್ರಭಾವಿತನಾದೆ.

ಇದೆಲ್ಲವೂ ನನ್ನ ಹಳೆಯ ಹಾಡು, ಈ ಹಳೆಯ ಹಾಡನ್ನೇ ನಾನು ನನ್ನ ಸಖಿಯ ಮುಂದೆ ಹೊಸ ಹೊಸದಾಗಿ ಹಾಡುತ್ತೇನೆ; ಆಗ ಇದು ಹೊಸ ಹೊಸದಾಗಿಯೇ ಕಂಗೊಳಿಸುತ್ತದೆ. ಸವಿಯ ಊಟೆ ಈ ಹಾಡುಗಳಲ್ಲಿದೆ. ಆದ್ದರಿಂದ ನನ್ನ ಹಾಡುಗಳಿಗೆ ಮುಪ್ಪೆಂಬುದೇ ಇಲ್ಲ. ನಾನು ಹಾಡಿದರೂ ಸರಿಯೆ, ನನ್ನನ್ನು ಮೆಚ್ಚುವ ಸಹೃದಯರು ಹಾಡಿದರೂ ಸರಿಯೆ, ಅದರ ಚೆಂದಕ್ಕೆ ಕೊರತೆಯೆಂಬುದೇ ಉಂಟಾಗುವುದಿಲ್ಲ.

***ಅಡಿ ಟಿಪ್ಪಣಿಗಳು***

೧. ನೆನೆಗುದಿ = ಅರ್ಥ ಬೇಯುವುದು, ಅನಿಶ್ಚಿತವಾಗಿರು, ಬಗೆ ಹರಿಯದಿರು (ನನಗುದಿ)

೨. ಸಂದೀಪನ = ಜ್ವಲಿಸುವ, ದಹಿಸುವ (ಕೋಪದಿಂದ) ಕೆರಳಿ, ಉದ್ರಿಕ್ತವಾದ.

# ಅನುಬಂಧ ೨

## ದ.ರಾ.ಬೇಂದ್ರೆಯವರ ಕೃತಿಗಳು

| ೧. ಕಾವ್ಯ | ಪ್ರಥಮ ಮುದ್ರಣ |
|---|---|
| ೧. ಕೃಷ್ಣಾಕುಮಾರಿ | ೧೯೨೨ |
| ೨. ಗರಿ | ೧೯೩೨ |
| ೩. ಮೂರ್ತಿ ಮತ್ತು ಕಾಮಕಸ್ತೂರಿ | ೧೯೩೪ |
| ೪. ಸಖೀಗೀತ | ೧೯೩೭ |
| ೫. ಉಯ್ಯಾಲೆ | ೧೯೩೮ |
| ೬. ನಾದಲೀಲೆ | ೧೯೩೮ |
| ೭. ಕನ್ನಡ ಮೇಘದೂತ | ೧೯೪೩ |
| ೮. ಹಾಡು-ಪಾಡು | ೧೯೪೬ |
| ೯. ಗಂಗಾವತರಣ | ೧೯೫೧ |
| ೧೦.ಮುಕ್ತಕಂಠ | ೧೯೫೬ |
| ೧೧.ಸೂರ್ಯಪಾನ | ೧೯೫೬ |
| ೧೨.ಹೃದಯ ಸಮುದ್ರ | ೧೯೫೬ |
| ೧೩.ಚೈತ್ಯಾಲಯ | ೧೯೫೭ |
| ೧೪.ಜೀವಲಹರಿ | ೧೯೫೭ |
| ೧೫.ನಮನ | ೧೯೫೮ |
| ೧೬.ಸಂಚಯ | ೧೯೫೯ |
| ೧೭.ಉತ್ತರಾಯಣ | ೧೯೬೦ |
| ೧೮.ಮುಗಿಲ ಮಲ್ಲಿಗೆ | ೧೯೬೧ |
| ೧೯.ಯಕ್ಷ-ಯಕ್ಷಿ | ೧೯೬೨ |
| ೨೦.ನಾಕುತಂತಿ | ೧೯೬೪ |
| ೨೧.ಮರ್ಯಾದೆ | ೧೯೬೬ |
| ೨೨.ಶ್ರೀಮಾತಾ | ೧೯೬೮ |
| ೨೩.ಇದು ನಭೋವಾಣಿ | ೧೯೭೦ |
| ೨೪.ಮತ್ತೆ ಶ್ರಾವಣಾ ಬಂತು | ೧೯೭೩ |
| ೨೫.ಚತುರೋಕ್ತಿ ಮತ್ತು ಇತರ ಕವನಗಳು | ೧೯೭೮ |
| ೨೬.ಪರಾಕಿ | ೧೯೮೨ |
| ೨೭.ಕಾವ್ಯ ವೈಖರಿ | ೧೯೮೩ |
| ೨೮.ತಾ ಲೆಕ್ಕಣಕೆ ತಾ ದೌತಿ | ೧೯೮೩ |

೬. ನಾಟಕಗಳು

೧. ಗೋಲ್ ೧೯೨೦
೨. ತಿರುಕರ ಪಿಡುಗು ೧೯೨೪
೩. ಸಾಯೋ ಆಟ ೧೯೨೫
೪. ನಗೆಯ ಹೊಗೆ ೧೯೩೧
೫. ಜಾತ್ರೆ ೧೯೩೪
೬. ಹಳೆಯ ಗೆಣೆಯರು ೧೯೩೬
೭. ದೆವ್ವನ ಮನೆ ೧೯೩೬
೮. ಉದ್ಧಾರ ೧೯೪೭
೯. ಮಂದೀ ಮದಿವಿ ೧೯೫೦
೧೦. ಮಂದೀ ಮಕ್ಕಳು ೧೯೫೦
೧೧. ಶೋಭನಾ ೧೯೫೮
೧೨. ಮಕ್ಕಳು ಅಡಿಗಿಮನಿ ಹೊಕ್ಕರೆ ೧೯೭೬
೧೩. ಮಂದೀ ಮನಿ ೧೯೮೦
೧೪. ಆ ಥರಾ ಈ ಥರಾ ೧೯೬೮

೭. ಸಂಪಾದನೆ

೧. ನನ್ನದು ಈ ಕನ್ನಡನಾಡು ೧೯೨೮
೨. ಹಕ್ಕಿ ಹಾರುತಿದೆ ೧೯೩೦
೩. ಚಂದ್ರಹಾಸ ೧೯೪೮
೪. ಹೊಸಗನ್ನಡ ಕಾವ್ಯಶ್ರೀ ೧೯೫೭
(ಎಂ. ಮರಿಯಪ್ಪಭಟ್ಟ ಅವರ ಜೊತೆಗೆ)
೫. ರವೀಂದ್ರ ಪ್ರಶಸ್ತಿ ೧೯೬೨
೬. ಕನಕದಾಸ ಚತುಶ್ಶತಮಾನೋತ್ಸವ ಸಂಸ್ಕರಣ ಸಂಪುಟ ೧೯೬೫

೮. ಪತ್ರಿಕೆಗಳು, ಸಂಪಾದನೆ

೧. ಸ್ವಧರ್ಮ ೧೯೨೬
೨. ಜಯ ಕರ್ನಾಟಕ ೧೯೨೯
೩. ಜೀವನ ೧೯೩೮

೯. ಅನುವಾದ

೧. ಉಪನಿಷದ್ರಹಸ್ಯ ಅಥವಾ ಭಾರತೀಯ ಅಧ್ಯಾತ್ಮ ೧೯೨೮
ಶಾಸ್ತ್ರಪೀಠಿಕೆಯು (ರಂ. ರಾ. ದಿವಾಕರ ಮತ್ತು
ಶಂ.ಬಾ ಜೋಶಿ ಅವರ ಜೊತೆ)

೨. ಭಾರತೀಯ ನವಜನ್ಮ ೧೯೩೬

೩. ಶ್ರೀ ಅರವಿಂದ ಯೋಗ ಆಶ್ರಮ ಮತ್ತು ತತ್ಪೋಪದೇಶ ೧೯೪೭

೪. ಚೀನದ ಬಾಳು ಬದುಕು ೧೯೫೦

೫. ನೂರೊಂದು ಕವನಗಳು ೧೯೬೭
(ನಾರಾಯಣಸಂಗಮ ಅವರ ಜೊತೆ)

೬. ಕಬೀರ ವಚನಾವಲಿ ೧೯೬೮
(ಜೋಶಿ ಗುರುನಾಥ ಅವರ ಜೊತೆ)

೭. ಭಗ್ನಮೂರ್ತಿ ೧೯೭೨

೮. ಗುರುಗೋವಿಂದ ಸಿಂಗ್ ೧೯೭೬
(ವಾಮನ ಬೇಂದ್ರೆ ಮತ್ತು
ಕೆ.ಎಸ್. ಶರ್ಮಾ ಅವರ ಜೊತೆ)

೧೦. ಇಂಗ್ಲೀಷ್ ಗ್ರಂಥ

೧. A Theory of Immortality ೧೯೭೭

೧೧. ಮರಾಠಿ ಕೃತಿಗಳು

೧. ಸಂತ ಮಹಂತಾಂಚಾ ಪೂರ್ಣಶಂಭೋವಿಟ್ಠಲ ೧೯೬೩

೨. ಸಂವಾದ : ಕವನ ಮತ್ತು ವಿಮರ್ಶೆ, ಲೇಖನ
ಇವುಗಳ ಸಂಗ್ರಹ ೧೯೬೫

೩. ವಿಟ್ಠಲ ಸಂಪ್ರದಾಯ, ಒಂದು ಭಾಷಣ ೧೯೬೫

೪. ಶಾಂತಲಾ, (ಕನ್ನಡ ಮೂಲ : ಕೆ.ವಿ. ಅಯ್ಯರ್) ೧೯೭೨

೫. ಉಮಾಳ (ಕವನ ಸಂಗ್ರಹ) ೧೯೮೧

೧೨. ವರಕವಿ ದ.ರಾ. ಬೇಂದ್ರೆಯವರ ಜೀವನ ಮಹಾಕಾವ್ಯ
"ಔದುಂಬರ ಗಾಥೆ" ಅಂಬಿಕಾತನಯದತ್ತರ ಸಮಗ್ರಕಾವ್ಯ
ಸಂಪಾದಕರು - ಡಾ॥ ವಾಮನಬೇಂದ್ರೆ. ೨೦೦೩

ಸಂಪುಟ ೧. ನಮನ
ಸಂಪುಟ ೨. ದರ್ಶನ
ಸಂಪುಟ ೩. ವಿಕಾಸ
ಸಂಪುಟ ೪. ವಿನ್ಯಾಸ
ಸಂಪುಟ ೫. ತತ್ವ
ಸಂಪುಟ ೬. ಸಿದ್ಧಾಂತ
ಸಂಪುಟ ೭. ಶ್ರೀಮಾತಾರವಿಂದ ಜ್ಞಾನಪ್ರಕಾಶ
ಸಂಪುಟ ೮. ಸಮಗ್ರ 'ಸಖೀಗೀತ'

# ಅನುಬಂಧ ೩

## ದ.ರಾ.ಬೇಂದ್ರೆಯವರ ಜೀವನದ ಪ್ರಮುಖ ಘಟ್ಟಗಳು

| | |
|---|---|
| ೩೧-೧-೧೮೯೬ | ಜನನ. ಮಾಘವದ್ಯ ಪ್ರತಿಪದೆ, ಗುರು ಪ್ರತಿಪದೆ, ಮನ್ಮಥನಾಮ ಸಂವತ್ಸರ. ಧಾರವಾಡದ ಪೋತ್ನೀಸ ಓಣಿ, ಗುಣಾರಿಯವರ ಮನೆಯಲ್ಲಿ. |
| ೧೮೯೮ | ತಮ್ಮ ಚಿದಂಬರ ಹುಟ್ಟಿದ, ತೀರಿಕೊಂಡ. |
| ೧೯೦೨ | ಕನ್ನಡ ಶಾಲೆ ಬಿನ್ ಇಯತ್ತೆ, ೧ನೆಯ ಇಯತ್ತೆ ೩ ತಿಂಗಳಲ್ಲಿ ಪಾಸು. ಶ್ರೀಧರ ಖಾನೋಳಕರ ಗೆಳೆತನ. ಶ್ರೀ ಗೊಂದವಲೇಕರ ದರ್ಶನ, ತಮ್ಮ ರಾಘೂನ ಜನನ ಕಾಮನ ಕಟ್ಟೆಯ ಗೋಖಲೆಯವರ ಮನೆಯಲ್ಲಿ. |
| ೧೯೦೩ | ೨ನೆ ಇಯತ್ತೆ ಮುಗಿಯಿತು. ತಮ್ಮ ಕೃಷ್ಣನ ಜನನ. |
| ೧೯೦೭ | ಇಂಗ್ಲಿಷ್ ೨ನೆ ಇಯತ್ತೆ, ನವಂಬರದಲ್ಲಿ ತಂದೆ ರಾಮಚಂದ್ರ ಬೇಂದ್ರೆ ತೀರಿಕೊಂಡರು. |
| ೧೯೧೦ | ರಾಘೂ ತೀರಿಕೊಂಡ. |
| ೧೯೧೩ | ಮ್ಯಾಟ್ರಿಕ್ ಪಾಸಾಯಿತು. ಅಜ್ಜಿ ಗೋದೂಬಾಯಿಯ ಮರಣ. |
| ೧೯೧೪ | ಪುಣೆಯ ಫರ್ಗ್ಯುಸನ್ ಕಾಲೇಜಿಗೆ ಸೇರಿದ್ದು. |
| ೧೯೧೮ | ಬಿ.ಎ., ಪಾಸಾಯಿತು, 'ತುತ್ತೂರಿ', 'ಕೋಗಿಲೆ ಕೋಗಿಲೆ ಎಂದು ಬಂದೆ ನೀ ಹೇಳೆ ಹೇಳೆ ಗೆಳತಿ' ಕವನಗಳ ರಚನೆ. ನಾಲ್ಕನೆಯ ಕನ್ನಡ ಸಾಹಿತ್ಯಸಮ್ಮೇಳನ ಪ್ರಸಂಗದಲ್ಲಿ ಕವಿತಾ ವಾಚನ. ಜೂನ್ ೪ರಿಂದ ವಿಕ್ಟೋರಿಯಾ ಹೈಸ್ಕೂಲು-ಧಾರವಾಡದಲ್ಲಿ ಶಿಕ್ಷಕ ವೃತ್ತಿಯ ಪ್ರಾರಂಭ. |
| ೧೯೧೯ | ಲಕ್ಷ್ಮೀಬಾಯಿ (ರಂಗೂತಾಯಿ) ಇವರೊಂದಿಗೆ ವಿವಾಹ, ಹುಬ್ಬಳ್ಳಿಯಲ್ಲಿ. |
| ೧೯೨೧ | ರಾಷ್ಟ್ರೀಯ ಶಾಲೆಯಲ್ಲಿ ಶಿಕ್ಷಕ. |
| ೧೯೨೨ | 'ಕೃಷ್ಣಾಕುಮಾರಿ' ಕಥನ ಕವನದ ಪ್ರಕಟಣೆ. ಗೆಳೆಯರ ಗುಂಪಿನ ಕನಸು. ಮೊದಲ ಮಗ ಕ್ಷೇಮೇಂದ್ರನ ಜನನ. ದಾವಣಗೇರಿ ಸಾಹಿತ್ಯ ಸಮ್ಮೇಳನಕ್ಕೆ ಹೋದದ್ದು. |
| ೧೯೨೩ | ಮೇದಲ್ಲಿ ಕ್ಷೇಮೇಂದ್ರ ತೀರಿಕೊಂಡ. 'ಜಯಕರ್ನಾಟಕ' ಪತ್ರಿಕೆಯೊಂದಿಗೆ ಸಂಬಂಧ. ವಿಜಾಪುರ ಸಾಹಿತ್ಯಸಮ್ಮೇಳನಕ್ಕೆ ಹೋದದ್ದು. |

೧೯೨೪ ತಾಯಿ ತೀರಿದಳು. ಎರಡನೆಯ ಮಗ-ರಾಮನ ಜನನ.

೧೯೨೫ ಮತ್ತೆ ನ್ಯೂ ಇಂಗ್ಲೀಷ್ ಸ್ಕೂಲಿನಲ್ಲಿ (ಮೊದಲಿನ ವಿಕ್ಟೋರಿಯಾ ಹೈಸ್ಕೂಲೇ ಇದು) ಶಿಕ್ಷಕ.

೧೯೨೬ ನಾಡಹಬ್ಬ ಪ್ರಾರಂಭಿಸಿದ್ದು. 'ಸ್ವಧರ್ಮ' ಪತ್ರಿಕೆ ಕೈಕೊಂಡದ್ದು.

೧೯೨೭ ಮೂರನೆಯ ಮಗ-ಭಾಸ್ಕರ ಹುಟ್ಟಿದ್ದು; ತೀರಿದ್ದು.

೧೯೨೮ ನಾಲ್ಕನೆಯ ಮಗ - ಪಾಂಡುರಂಗನ ಜನನ. ಉಪನಿಷದ್ ರಹಸ್ಯ ಪ್ರಕಟಣೆ. 'ನನ್ನದು ಈ ಕನ್ನಡ ನಾಡು' ಕೃತಿ ಗೆಳೆಯರ ಗುಂಪಿನಿಂದ ಪ್ರಕಟಣೆ.

೧೯೨೯ ಚಿಕ್ಕಪ್ಪ, ಚಿಕ್ಕಮ್ಮ - ಸಾಧನಕೇರಿಯಲ್ಲಿ ಮನೆಯನ್ನು ಕೊಡಿಸಿದ್ದು. ಬೆಳಗಾವಿ ಸಾಹಿತ್ಯ ಸಮ್ಮೇಳನದಲ್ಲಿ ಹಕ್ಕಿ ಹಾರುತಿದೆ ಕವನ ವಾಚನ. ಆಲೂರು ವೆಂಕಟರಾಯರು 'ಜಯಕರ್ನಾಟಕ' ಪತ್ರಿಕೆಯನ್ನು ಗೆಳೆಯರ ಗುಂಪಿಗೆ ವಹಿಸಿಕೊಟ್ಟಿದ್ದು.

೧೯೩೦ 'ಹಕ್ಕಿ ಹಾರುತಿದೆ' ಕವನ ಸಂಗ್ರಹ ಗೆಳೆಯರ ಗುಂಪಿನಿಂದ ಪ್ರಕಟಣೆ. ಮೈಸೂರು ಲೇಖಕರ ಗೋಷ್ಠಿಯ ಅಧ್ಯಕ್ಷ.

೧೯೩೧ ಕಾರವಾರ ಸಾಹಿತ್ಯ ಸಮ್ಮೇಳನಕ್ಕೆ ಹೋದದ್ದು.

೧೯೩೨ 'ಗರಿ' ಕವನ ಸಂಕಲನದ ಪ್ರಕಟಣೆ. 'ನರಬಲಿ' ಕವನ ರಚಿಸಿದ ಕಾರಣದಿಂದ ಹಿಂಡಲಗಿ ಜೇಲುವಾಸ. ಮುಗದ ಗ್ರಾಮದಲ್ಲಿ ನಜರಬಂದಿ.

೧೯೩೩ ಎಂ.ಎ., ಅಭ್ಯಾಸ ಪುಣೆಯಲ್ಲಿ

೧೯೩೪ ಮಗಳು - ಲಲಿತ ಹುಟ್ಟಿದಳು ; ತೀರಿದಳು. 'ಮೂರ್ತಿ ಮತ್ತು ಕಾಮಕಸ್ತೂರಿ' ಪ್ರಕಟಣೆ.

೧೯೩೫ ಎಂ.ಎ., ಪಾಸು ಆಗಿದ್ದು. ಮಗ - ವಾಮನನ (ಬಾಳ) ಜನನ. ಮುಂಬೈ ಕವಿ ಸಮ್ಮೇಳನದ ಅಧ್ಯಕ್ಷ.

೧೯೩೬ ರಿಂದ ೧೯೪೪ ಸ್ಥಿರ ನೌಕರಿ ಇಲ್ಲದೆ ಅಲೆದಾಡಿದ್ದು.

೧೯೩೭ ಮಗಳು - ಪ್ರೇಮಳ ಜನನ. 'ಸಖೀಗೀತ', 'ಸಾಹಿತ್ಯ ಮತ್ತು ವಿಮರ್ಶೆ' ಪ್ರಕಟಣೆ.

೧೯೩೮ 'ನಾದಲೀಲೆ', 'ಉಯ್ಯಾಲೆ' ಪ್ರಕಟಣೆ. 'ಜೀವನ' ಪತ್ರಿಕೆಯ ಸಂಪಾದಕತ್ವ.

೧೯೩೯ ಮಗಳು - ಮಂಗಲಳ ಜನನ. 'ನಿರಾಭರಣ ಸುಂದರಿ', 'ಸಾಹಿತ್ಯ ಮತ್ತು ಸಂಶೋಧನೆ' ಪ್ರಕಟಣೆ.

೧೯೪೦ ಧಾರವಾಡದಲ್ಲಿ ಸಾಹಿತ್ಯ ಸಮ್ಮೇಳನ.

೧೯೪೧ ಗದಗಿನ ವಿದ್ಯಾದಾನ ಸಮಿತಿ ಹೈಸ್ಕೂಲ್‌ಗೆ ಹೆಡ್‌ಮಾಸ್ತರ್ ಆಗಿ ಹೋದದ್ದು.

೧೯೪೨ ಹುಬ್ಬಳ್ಳಿಯ ನ್ಯೂ ಇಂಗ್ಲೀಷ್ ಸ್ಕೂಲಿಗೆ ಶಿಕ್ಷಕ.

೧೯೪೩ ಪಾಂಡಿಚೇರಿ - ಶ್ರೀ ಮಾತಾರವಿಂದರ ದರ್ಶನ. ಪೂನಾದ ಬಿ.ಎಂ.ಸಿ.ಸಿ., ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರು. 'ಕನ್ನಡ ಮೇಘದೂತ' ಪ್ರಕಟಣೆ. ಡಿಸೆಂಬರ್ ೨೬ ರಂದು ಶಿವಮೊಗ್ಗದಲ್ಲಿ ನಡೆದ ೨೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ.

೧೯೪೪ ಸೊಲ್ಲಾಪುರದ ಡಿ.ಎ.ವಿ., ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರು. ಮಗ-ಆನಂದ ಹುಟ್ಟಿದ್ದು ; ತೀರಿಕೊಂಡಿದ್ದು. ಮಗ - ರಾಮ ತೀರಿಕೊಂಡದ್ದು.

೧೯೪೬ ಧಾರವಾಡ ಸಾರ್ವಜನಿಕರಿಂದ ೫೦ನೆಯ ಹುಟ್ಟುಹಬ್ಬದ ಆಚರಣೆ - ಸನ್ಮಾನ. ೧೦ ಸಾವಿರ ನಿಧಿ ಅರ್ಪಣೆ. 'ಹಾಡು-ಪಾಡು' ಪ್ರಕಟಣೆ.

೧೯೫೧ 'ಗಂಗಾವತರಣ' ಪ್ರಕಟಣೆ.

೧೯೫೬ ಡಿ.ಎ.ವಿ., ಕಾಲೇಜು ಸೊಲ್ಲಾಪುರದ ಕನ್ನಡ ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತಿ. ಆಕಾಶವಾಣಿ, ಧಾರವಾಡ ಕೇಂದ್ರದ ಸಾಹಿತ್ಯ ಸಲಹೆಗಾರ. ಸೊಲ್ಲಾಪುರ, ಪುಣೆಯಲ್ಲಿ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನಿಂದ ಬೆಂಗಳೂರಿನಲ್ಲಿ ೬೦ನೆಯ ಹುಟ್ಟುಹಬ್ಬದ ಆಚರಣೆ - ಸನ್ಮಾನ.

೧೯೫೯ 'ಅರಳು-ಮರಳು' ಕವನ ಸಂಗ್ರಹ ಗುಚ್ಛಕ್ಕೆ ೧೯೫೮ರ ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನ.

೧೯೬೨ ತುಮಕೂರಿನ ಪುರಸಭೆಯವರಿಂದ ಸನ್ಮಾನ.

೧೯೬೪ ಮೈಸೂರು ದಸರಾ ಮಹೋತ್ಸವ ಸಮಿತಿಯವರಿಂದ ಸನ್ಮಾನ.

೧೯೬೫ ಮರಾಠಿ 'ಸಂವಾದ' ಗ್ರಂಥಕ್ಕೆ ಮಹಾರಾಷ್ಟ್ರದ ಕೇಳಕರ ಪ್ರಶಸ್ತಿ.

೧೯೬೬ ಮೈಸೂರು ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಪದವಿ. ಶಿರಹಟ್ಟಿಯಲ್ಲಿ ೭೦ನೆಯ ಹುಟ್ಟುಹಬ್ಬದ ಸನ್ಮಾನ. ಕರ್ನಾಟಕ ಸರಕಾರದಿಂದ ಆ ಜನ್ಮ ವಿಶ್ರಾಂತ ವೇತನ ಗೌರವ. ಹೈದರಾಬಾದಿನ ಹಿಂದಿ ಪ್ರಚಾರ ಸಭಾ ಅವರಿಂದ ಸಾಹಿತ್ಯ ಆಚಾರ್ಯ ಪ್ರಶಸ್ತಿ. ಆಗಸ್ಟ್ ೧೭ರಂದು ಪತ್ನೀ ವಿಯೋಗ.

| | |
|---|---|
| ೧೯೬೮ | ‘ಪದ್ಮಶ್ರೀ’ ಪ್ರಶಸ್ತಿ. ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಪದವಿ. |
| ೧೯೬೯ | ಫೆಲೊ, ಸಾಹಿತ್ಯ ಅಕಾಡೆಮಿ (ದೆಹಲಿ) ಗೌರವ. |
| ೧೯೭೨ | ‘ಕರ್ನಾಟಕ ಕವಿಕುಲತಿಲಕ’ ಪ್ರಶಸ್ತಿ - ಶ್ರೀ ಅದಮಾರು ಮಠ - ಉಡುಪಿ ಪರ್ಯಾಯ. ೭೫ನೇ ಹುಟ್ಟುಹಬ್ಬದ ಸನ್ಮಾನ - ಸೊಲ್ಲಾಪುರ ಮತ್ತು ಪುಣೆಯಲ್ಲಿ. ಕರ್ನಾಟಕ ಸರಕಾರದಿಂದ ಸಾಕ್ಷ್ಯಚಿತ್ರ ನಿರ್ಮಾಣ. |
| ೧೯೭೪ | ‘ನಾಕುತಂತಿ’ ಕವನ ಸಂಗ್ರಹಕ್ಕೆ ೧೯೭೩ರ ಜ್ಞಾನಪೀಠ ಪ್ರಶಸ್ತಿ. |
| ೧೯೭೪ | ಕಾಶೀ ವಿದ್ಯಾಪೀಠ, ವಾರಣಾಸಿ - ಇವರಿಂದ ಗೌರವ ಡಾಕ್ಟರೇಟ್ ಪದವಿ. |
| ೧೯೭೭ | ಆಕಾಶವಾಣಿ ಪ್ರಸಾರದ ಸುವರ್ಣ ಮಹೋತ್ಸವದ ಸನ್ಮಾನ. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು - ವಜ್ರ ಮಹೋತ್ಸವದ ಸನ್ಮಾನ. ‘ಇಳಿದು ಬಾ ತಾಯಿ’ ಅಭಿನಂದನ ಗ್ರಂಥ ಪ್ರಕಟಣೆ. |
| ೨೬-೧೦-೧೯೮೧ | ಮುಂಬೈ, ಹರಿಕಿಶನ್‌ದಾಸ್ ಆಸ್ಪತ್ರೆಯಲ್ಲಿ ದುರ್ಮತಿ ಸಂವತ್ಸರ, ಆಶ್ವಯುಜ ಬಹುಳ, ದೀಪಾವಳಿ, ನರಕ ಚತುರ್ದಶಿಯ ದಿವಸ ನಿರ್ವಾಣ. |



ಬೇಂದ್ರೆಯವರ ಕಾವ್ಯದಂತೆ ಅವರ ಬದುಕು ಕೂಡ ಅಭ್ಯಾಸಯೋಗ್ಯವಾದದ್ದು. ಯಾಕೆಂದರೆ, ಅವರ ಬದುಕಿಗೂ ಕಾವ್ಯಕ್ಕೂ ಅನ್ಯೋನ್ಯವಾದ ಸಂಬಂಧವಿದೆ. ಅವರ ಎಷ್ಟೋ ಕವಿತೆಗಳಲ್ಲಿ ಅವರ ಬದುಕಿನ ಪಾಡೇ ಹಾಡಾಗಿ ಅಭಿವ್ಯಕ್ತಿ ಪಡೆದಿದೆ. ಅಂತೆಯೇ ಅವರ ಕವಿತೆಗಳನ್ನು ಅರ್ಥಮಾಡಿಕೊಳ್ಳಲಿಕ್ಕೆ ಅವುಗಳ 'ಭಾವಸಂದರ್ಭ'ದಂತೆ ಜೀವನಸಂದರ್ಭದ ಸಹಾಯವೂ ಬೇಕಾಗುತ್ತದೆ.

ಬೇಂದ್ರೆಯವರ ಬದುಕು-ಬರಹಗಳ ವಿಶೇಷ ಅಧ್ಯಯನ ದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿರುವ ಡಾ। ಜಿ. ಕೃಷ್ಣಪ್ಪ ಅವರು ಈ ಹೊತ್ತಿಗೆಯಲ್ಲಿ ಬೇಂದ್ರೆ ಯವರ ಬದುಕನ್ನು ಅವರ ಗದ್ಯ ಹಾಗೂ ಕಾವ್ಯದ ಮೂಲಕ ಪುನರ್‌ರಚಿಸುವ ಪ್ರಯತ್ನಮಾಡಿದ್ದಾರೆ. ಜೊತೆಗೆ, ಅವರ ಬದುಕಿನ ಮಹತ್ವದ ಸಂದರ್ಭಗಳ ಸಹಾಯ ದಿಂದ ಅವರ ಕಾವ್ಯವನ್ನು ಅರ್ಥೈಸುವ ಪ್ರಯತ್ನವನ್ನು ಮಾಡಿದ್ದಾರೆ. ಈ ಇಮ್ಮುಖದ ಅಭ್ಯಾಸದಿಂದ ಬೇಂದ್ರೆ ಯವರ ಜೀವನ ಮತ್ತು ಕಾವ್ಯ ಎರಡೂ ಹೊಸ ಬೆಳಕಿನಲ್ಲಿ ಕಾಣಿಸಿಕೊಂಡಿವೆ. ಬೇಂದ್ರೆಯವರ ಅಭ್ಯಾಸಕ್ಕೆ ಇದೊಂದು ವಿಶಿಷ್ಟ ಕೊಡುಗೆಯಾಗಿದೆ.

ಗಿರಡ್ಡಿ ಗೋವಿಂದರಾಜ
ನಿರ್ದೇಶಕರು, ಪ್ರಸಾರಾಂಗ

ಪ್ರಸಾರಾಂಗ
ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್
ಸಾಧನಕೇರಿ, ಧಾರವಾಡ